# ‘ಇಂಗ್ಲಿಷ್ ಗೀತಗಳು’ ಪೂರ್ವದ ಭಾಷಾಂತರ ಪ್ರಕ್ರಿಯೆ
## (೧೮೫೦ ರಿಂದ ೧೯೨೦)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
ಗಜಾನನ ನಾಯ್ಕ

ಮಾರ್ಗದರ್ಶಕರು
ಡಾ. ಎಂ. ಉಷಾ
ಪ್ರವಾಚಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮

# ‘ಇಂಗ್ಲಿಷ್ ಗೀತಗಳು’ ಪೂರ್ವದ ಭಾಷಾಂತರ ಪ್ರಕ್ರಿಯೆ
## (೧೮೫೦ ರಿಂದ ೧೯೨೦)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
**ಗಜಾನನ ನಾಯ್ಕ**




ಮಾರ್ಗದರ್ಶಕರು
**ಡಾ.ಎಂ.ಉಷಾ**
ಪ್ರವಾಚಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮

# ಸಂಶೋಧಕರ ಪ್ರಮಾಣ ಪತ್ರ

**'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆ** (೧೮೫೦ ರಿಂದ ೧೯೨೦) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಎಂ.ಉಷಾ, ಪ್ರವಾಚಕರು, ಭಾಷಾಂತರ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಗಜಾನನ ನಾಯ್ಕ**
ಸಂಶೋಧಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೦.೧೦.೨೦೦೮
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆ** (೧೮೫೦ ರಿಂದ ೧೯೨೦) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಂ. ಉಷಾ
ಪ್ರವಾಚಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೦.೧೦.೨೦೦೮
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ, ಸಾಹಿತ್ಯ ಸಮೀಕ್ಷೆ ಮತ್ತು ಮಹತ್ವ

ಆಧುನಿಕ ಕನ್ನಡ ಸಾಹಿತ್ಯದ 'ಆಚಾರ್ಯ'ರೆಂದು ಖ್ಯಾತಿಯನ್ನು ಪಡೆದವರು ಬಿ.ಎಂ. ಶ್ರೀಕಂಠಯ್ಯ. ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇವರು ಮಾಡಿದ ಪ್ರಯೋಗಗಳು ಗಮನಾರ್ಹವಾದವು. ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತಗಳು' (೧೯೨೧) ಸಂಕಲನವು ಆಧುನಿಕ ಕನ್ನಡ ಸಾಹಿತ್ಯದ, ಅದರಲ್ಲೂ ಕಾವ್ಯದ ಸಂದರ್ಭದಲ್ಲಿ ಹೊಸದಾದ ಲಯ, ಛಂದಸ್ಸು, ಭಾಷೆ ಮತ್ತು ಕಾವ್ಯ ವಸ್ತುಗಳ ವಿಧದಲ್ಲಿ ಹೊಸ ಮಾರ್ಗವನ್ನು ಪರಿಚಯಿಸಿತು. ಮುಂದಿನ ದಿನಗಳಲ್ಲಿ ಹಲವು ಬರಹಗಾರರು ಇದರಿಂದ ಪ್ರಭಾವಿತರಾದರು. ಬಿ.ಎಂ.ಶ್ರೀಯವರ ಈ ಪ್ರಯೋಗದಿಂದಾಗಿ ಆಧುನಿಕ ಸಾಹಿತ್ಯದ ಆರಂಭವನ್ನು ಅವರ 'ಇಂಗ್ಲಿಷ್ ಗೀತಗಳು' ಸಂಕಲನದಿಂದಲೇ ಗುರುತಿಸುವ ಪ್ರಯತ್ನವನ್ನು ಅಧ್ಯಯನಕಾರರು ಮಾಡಿದ್ದಾರೆ. ಈ ಬಗೆಯಲ್ಲಿ ಬಿ.ಎಂ.ಶ್ರೀಯವರ ಭಾಷಾಂತರ ಪ್ರಯೋಗ ಕನ್ನಡ ಸಾಹಿತ್ಯ ಅಧ್ಯಯನದ ಸಂದರ್ಭದಲ್ಲಿ ಮಾನ್ಯತೆಯನ್ನು ಪಡೆದುಕೊಂಡಿತು.

ಕನ್ನಡ ಅಥವಾ ಕರ್ನಾಟಕ ಏಕೀಕರಣವೆಂದಾಗ ನಮ್ಮ ಕಣ್ಣ ಮುಂದೆ ಬರುವವರು ಆಲೂರು ವೆಂಕಟರಾಯರು. ಇವರೇ ಈ ಚಳುವಳಿಗೊಂದು ರೂಪು-ರೇಷೆಯನ್ನು ನೀಡಿದವರು. ಈ ಸಂದರ್ಭದಲ್ಲಿ ಕರ್ನಾಟಕ ಏಕೀಕರಣ ಚಳುವಳಿಯ ಮುಂದಾಳತ್ವವನ್ನು ವಹಿಸಿಕೊಂಡವರಲ್ಲಿ ಬಿ.ಎಂ.ಶ್ರೀಯವರು ಪ್ರಮುಖರಾಗಿದ್ದಾರೆ. ಏಕೀಕರಣ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ನಾಡಿನಾದ್ಯಂತ ಈ ಹಿನ್ನೆಲೆಯಲ್ಲಿಯೇ ಪ್ರವಾಸಗೈದು ಕನ್ನಡ ಭಾಷೆ, ಸಂಸ್ಕೃತಿ ಮತ್ತು ಸಾಹಿತ್ಯ ಇತ್ಯಾದಿಗಳ ಕುರಿತು ಉಪನ್ಯಾಸ ಮಾಡಿ ನಾಡಿನ ಜನರಲ್ಲಿ ಏಕೀಕರಣದ ಎಚ್ಚರವನ್ನುಂಟು ಮಾಡಿದರು. ಇಂತಹ ಸಂದರ್ಭದಲ್ಲಿ ಬಿ.ಎಂ.ಶ್ರೀಯವರ 'ಮಾತು ತಲೆಯೆತ್ತುವ ಬಗೆ' (೧೯೧೧) ಗಮನಾರ್ಹವಾದುದು. ದೇಶದ ಭೂಪ್ರದೇಶಗಳು ಭಾಷೆಗಳ ಹಿನ್ನೆಲೆಯಲ್ಲಿ ವಿಂಗಡನೆಯಾಗುವಾಗ ಸಾಹಿತ್ಯವು ಪ್ರಮುಖ ಪಾತ್ರ ವಹಿಸಿತ್ತು. ಲಿಖಿತ ದಾಖಲೆಗಳ ಸಂದರ್ಭದಲ್ಲಿ ಭಾಷೆ ಮತ್ತು ಸಾಹಿತ್ಯ ಇತರ ದಾಖಲೆಗಳಂತೆ ಅಗತ್ಯವಾದವು. ಹೀಗಾಗಿ ಏಕೀಕರಣ ಚಳುವಳಿಯಲ್ಲಿ ಸಾಹಿತಿಗಳು ಅಥವಾ ಬರಹಗಾರರು ಮುಂಚೂಣಿಯಲ್ಲಿದ್ದರು. ಎಲ್ಲಾ ಭಾಷೆಯ ಲೇಖಕರೂ ಏಕೀಕರಣ ಚಳುವಳಿಯಲ್ಲಿ ಪಾಲ್ಗೊಂಡರು. ಬಿ.ಎಂ.ಶ್ರೀಯವರು ಕನ್ನಡ ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳ ಕುರಿತು ಮಾತನಾಡುವದರೊಂದಿಗೆ

ನಾಡು ನುಡಿಯ ಬಗ್ಗೆ ಜಾಗೃತಿ ಮೂಡಿಸಲು ಪ್ರಯತ್ನಿಸಿದರು. ಈ ಪ್ರಯತ್ನಕ್ಕಾಗಿ ನಾಡಿನಾದ್ಯಂತ ಪ್ರವಾಸ ಕೈಗೊಂಡು ಸಾಹಿತ್ಯದ ಕುರಿತ ಭಾಷಣ ಇತ್ಯಾದಿಗಳನ್ನು ನಡೆಸಿಕೊಟ್ಟರು. ಈ ಮೂಲಕ ಏಕೀಕರಣ ಚಳುವಳಿಗೆ ಆಧುನಿಕ ಸಾಹಿತ್ಯದ ಆಯಾಮ ನೀಡುವಲ್ಲಿ ಸಫಲರಾಗಿದ್ದರು. ಹೀಗೆ ಇವರ ಸಾಹಿತ್ಯಕ ಪ್ರಯೋಗ ಹಾಗೂ ಏಕೀಕರಣದ ಚಹರೆಯಿಂದ ಆಧುನಿಕ ಕನ್ನಡ ಸಾಹಿತ್ಯದ 'ಮುಂದಾಳು' ಎಂದು ಗುರುತುಗೊಂಡರು.

ಹೊಸಗನ್ನಡ ಸಾಹಿತ್ಯಕ್ಕೆ ಹೊಸ ದಿಕ್ಕು-ದೆಸೆಗಳನ್ನು ನೀಡಿರುವುದು, ಕನ್ನಡ ಏಕೀಕರಣ ಚಳುವಳಿಯ ಮುಂದಾಳತ್ವವನ್ನು ವಹಿಸಿರುವುದರ ಜೊತೆಗೆ ಕನ್ನಡ ಭಾಷೆ ಮತ್ತು ಲಿಪಿಯನ್ನು ಪ್ರಮಾಣೀಕರಿಸುವಲ್ಲಿನ ಬಿ.ಎಂ.ಶ್ರೀಯವರ ಪ್ರಯತ್ನ ಮಹತ್ವದ್ದಾಗಿದೆ. ಏಕೀಕರಣ ಪೂರ್ವದಲ್ಲಿ ಕನ್ನಡ ಭಾಷೆ ಬೇರೆ ಬೇರೆ ಪ್ರದೇಶಗಳಲ್ಲಿ ಭಿನ್ನವಾದ ಸ್ವರೂಪದಲ್ಲಿ ಬಳಕೆಯಾಗುತ್ತಿತ್ತು. ಆದರೆ ಅಖಂಡ ಕರ್ನಾಟಕದ ಪರಿಕಲ್ಪನೆಯಲ್ಲಿ ಪ್ರಮಾಣೀಕೃತ ಕನ್ನಡ ಭಾಷೆಯೊಂದನ್ನು ರೂಪಿಸುವುದು ಅಗತ್ಯ ಎಂಬುದನ್ನು ಬಿ.ಎಂ.ಶ್ರೀಯವರು ಮನಗಂಡಿದ್ದರು. ಹೀಗಾಗಿ ಭಾಷೆ ಮತ್ತು ಲಿಪಿಯನ್ನು ಪ್ರಮಾಣೀಕರಿಸುವ ಹಿನ್ನೆಲೆಯಲ್ಲಿ 'ಕನ್ನಡ ಬಾವುಟ' (ಸಂ, ೧೯೩೮, ಕನ್ನಡ ಕವಿತೆಗಳ ಅಂಥಾಲಜಿ) ದಂತಹ ಕೃತಿಯನ್ನು ಸಿದ್ಧಪಡಿಸಿದರು.[೧] ಆದರೆ ಆಧುನಿಕ ಕನ್ನಡ ಸಾಹಿತ್ಯದ ಚಟುವಟಿಕೆ ಮತ್ತು ಏಕೀಕರಣದ ಮುಂದಾಳತ್ವದಲ್ಲಿ ಸಫಲರಾದಂತೆ ಈ ವಿಷಯದಲ್ಲಿ / ಪ್ರಯೋಗದಲ್ಲಿ ಬಿ.ಎಂ.ಶ್ರೀಯವರು ಸಫಲರಾಗಲಿಲ್ಲ.

ಈ ರೀತಿ ಆಧುನಿಕ ಕನ್ನಡ ಸಾಹಿತ್ಯಕ್ಕೆ ಬಿ.ಎಂ.ಶ್ರೀಯವರು ನೀಡಿದ ಕೊಡುಗೆ, ಕನ್ನಡ ಏಕೀಕರಣ ಚಳುವಳಿಯಲ್ಲಿನ ಇವರ ಮುಂದಾಳತ್ವ ಮತ್ತು ಕನ್ನಡ ಭಾಷೆ ಮತ್ತು ಲಿಪಿಯನ್ನು ಪ್ರಮಾಣೀಕರಿಸುವಲ್ಲಿನ ಇವರ ಪ್ರಯತ್ನವನ್ನು ಗುರುತಿಸಿದ ಅಧ್ಯಯನಕಾರರು ಬಿ.ಎಂ.ಶ್ರೀಯವರನ್ನು ಹೊಸಗನ್ನಡದ 'ಆಚಾರ್ಯರು', 'ಆಧುನಿಕ ಕನ್ನಡ ಸಾಹಿತ್ಯದ ಮುಂದಾಳು', 'ನವಯುಗದ ಪ್ರವರ್ತಕ' ಹಾಗೂ 'ಹೊಸಗನ್ನಡದ ಕವಿಕುಲಪತಿಗಳು' ಇತ್ಯಾದಿ ಬಿರುದುಗಳಿಂದ ಕರೆದಿದ್ದಾರೆ. ಬಹುಶಃ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಷ್ಟೊಂದು ಬಿರುದುಗಳನ್ನು ಪಡೆದವರು ಬಿ.ಎಂ.ಶ್ರೀಯವರೊಬ್ಬರೆ ಎನ್ನಬಹುದು.[೨]

ಈ ಮೇಲಿನ ಮೂರು ಸಾಧನೆಗಳೊಂದಿಗೆ, ಗಮನಿಸಬೇಕಾದ ಇನ್ನೊಂದು ಕೊಡುಗೆಯೆಂದರೆ, ಬಿ.ಎಂ.ಶ್ರೀಯವರು ಭಾಷಾಂತರ ಚಟುವಟಿಕೆಯಲ್ಲಿ ಮಾಡಿದ ಪ್ರಯೋಗಗಳು. ಸುಮಾರು ೬೦ರ ದಶಕದವರೆಗಿನ ಬಿ.ಎಂ.ಶ್ರೀಯವರ ಕುರಿತ ಅಧ್ಯಯನಗಳು ಸಾಹಿತ್ಯಾಧ್ಯಯನ ಚೌಕಟ್ಟಿನಲ್ಲಿಯೇ ನಡೆದಿರುವುದರಿಂದ ಇವರ ಬರಹಗಳು ಆಧುನಿಕ ಕನ್ನಡ ಸಾಹಿತ್ಯವನ್ನು ಕಟ್ಟುವ, ರೂಪಿಸುವ ಕೆಲಸವನ್ನು ಹೇಗೆ ನಿರ್ವಹಿಸಿವೆ ಎಂಬುದವರ ಕಡೆಗೆ ಹೆಚ್ಚು ಗಮನಸಹರಿಸಿದವು. ಹೀಗಾಗಿ ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯ ಕುರಿತು ಭಾಷಾಂತರ ಅಧ್ಯಯನದ ನೆಲೆಯಿಂದ ನೋಡುವ ಅಧ್ಯಯನಗಳು ಅಷ್ಟಾಗಿ ನಡೆಯಲಿಲ್ಲ; ಇವರು ಕೈಗೊಂಡ ಸಾಹಿತ್ಯ ಚಟುವಟಿಕೆಯ ಮೂಲದ್ರವ್ಯ ಭಾಷಾಂತರವೇ ಎಂಬುದನ್ನು ವಿಶೇಷವಾಗಿ ಗಮನಿಸಲಿಲ್ಲ. ೬೦ರ ದಶಕದೀಚೆಗೆ ಕನ್ನಡದಲ್ಲಿ ಭಾಷಾಂತರವು ಒಂದು ಅಧ್ಯಯನ ಕ್ಷೇತ್ರವಾಗಿ ರೂಪುಗೊಳ್ಳುತ್ತಿದ್ದು. ಈ ಅಧ್ಯಯನಗಳು ಬಿ.ಎಂ.ಶ್ರೀಯವರನ್ನು ಭಾಷಾಂತರಕಾರರಾಗಿ ಕಾಣುವ, ಅವರ ಕೃತಿಗಳನ್ನು ಭಾಷಾಂತರದ ಹಿನ್ನೆಲೆಯಲ್ಲಿ ವಿಶ್ಲೇಷಿಸುವ

ಅಥವಾ ವ್ಯಾಖ್ಯಾನಿಸುವ ಪ್ರಯತ್ನಕ್ಕೆ ಕೈಹಾಕಿದವು. ಅಂದರೆ ಭಾಷಾಂತರಕಾರರಾಗಿ ಬಿ.ಎಂ.ಶ್ರೀ ಎಂಬ ನೆಲೆಯಲ್ಲಿ ಅಧ್ಯಯನಗಳು ಆರಂಭಗೊಂಡವು.

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಬಿ.ಎಂ.ಶ್ರೀಯವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹೊಂದಿದ್ದ ಮಾನ್ಯತೆ, ಘನತೆ-ಗೌರವ ಅಥವಾ ಪ್ರಭಾವಳಿ ಇತ್ಯಾದಿಗಳಿಂದ ಮುಕ್ತವಾಗಿ ಅವರ ಸಾಹಿತ್ಯ ಭಾಷಾಂತರ ಚಟುವಟಿಕೆಯನ್ನು ಪರಿಭಾವಿಸುವ ಪ್ರಯತ್ನಗಳು ನಡೆಯಲೇ ಇಲ್ಲ ಎಂಬುದು. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಇವರನ್ನು 'ಮುಂದಾಳು' ಎಂದು ಪರಿಭಾವಿಸಿದಂತೆಯೇ 'ಇಂಗ್ಲಿಷ್ ಗೀತಗಳು' ಕೃತಿಯಿಂದಾಗಿ ಭಾಷಾಂತರದಲ್ಲಿಯೂ ಸಹ ಇವರನ್ನು ಮುಂದಾಳು ಎಂದು ಪರಿಭಾವಿಸಲಾಯಿತು. ಬಿ.ಎಂ.ಶ್ರೀಯವರು, ಸಾಹಿತ್ಯಾಧ್ಯಯನದ ಸಂದರ್ಭದಲ್ಲಿ ಹೊಂದಿದ ಪ್ರಭಾವಳಿಯ ಕಾರಣದಿಂದಲೋ ಎಂಬಂತೆ ಇವರ ಪೂರ್ವದಲ್ಲಿನ ಭಾಷಾಂತರಗಳ ಕುರಿತ ಚರ್ಚೆಗಳು ಮುನ್ನೆಲೆಗೆ ಬರಲಿಲ್ಲ.

ಹೀಗೆ ಬಿ.ಎಂ.ಶ್ರೀಯವರನ್ನು ಆಧುನಿಕ ಕನ್ನಡದ ಹರಿಕಾರರು ಎಂದು ಗುರುತಿಸಿರುವಂತೆ ಕನ್ನಡ ಭಾಷಾಂತರ ಅಧ್ಯಯನದ ಸಂದರ್ಭದಲ್ಲಿಯೂ ಅವರನ್ನು ಒಂದು ಮೈಲಿಗಲ್ಲಾಗಿ ಪರಿಭಾವಿಸಲಾಯಿತು. ಈ ತಿಳುವಳಿಕೆಯಿಂದಾಗಿ ಬಿ.ಎಂ.ಶ್ರೀ ಪೂರ್ವದ ಭಾಷಾಂತರ ಚಟುವಟಿಕೆ ಹೇಗೆ ನಡೆದಿದೆ, ಹಾಗೂ ಈ ಚಟುವಟಿಕೆಗಳು ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯನ್ನು ರೂಪಿಸಿರುವ ಬಗೆ ಯಾವುದು, ಇತ್ಯಾದಿಗಳ ಕುರಿತು ಅಧ್ಯಯನ ಕೈಗೊಳ್ಳುವ ದಾರಿಗಳು ಇದುವರೆಗೆ ತೆರೆದುಕೊಳ್ಳಲಿಲ್ಲ. ಅಲ್ಲದೆ, ಬಿ.ಎಂ.ಶ್ರೀಯವರ ಸಾಹಿತ್ಯ ಚಟುವಟಿಕೆ ಹಾಗೂ ಅವರು ಮುಂದಿನ ಕನ್ನಡ ಸಾಹಿತ್ಯದ ಮೇಲೆ ಬೀರಿದ ಪ್ರಭಾವ ಮತ್ತು ಅದನ್ನು ಅಧ್ಯಯನಕಾರರು ಗ್ರಹಿಸಿಕೊಂಡ ವಿಧಾನ, ಇವುಗಳ ಪ್ರಭಾವದಿಂದಾಗಿ ಕನ್ನಡದ ಸಂದರ್ಭದಲ್ಲಿ ಭಾಷಾಂತರ ಅಧ್ಯಯವೆಂಬುದು ಸಾಹಿತ್ಯಿಕ ಭಾಷಾಂತರಕ್ಕೆ ಮೀಸಲಿಟ್ಟಂತಾಯಿತು. ಹೀಗಾಗಿಯೇ ಬಿ.ಎಂ.ಶ್ರೀಯವರ ಕಾಲದಲ್ಲಿ ಅಥವಾ ಅದಕ್ಕೂ ಪೂರ್ವದಲ್ಲಿ ಸಾಹಿತ್ಯೇತರ ಭಾಷಾಂತರ ಚಟುವಟಿಕೆಗಳು ಎಷ್ಟೇ ನಡೆದರೂ ಅವುಗಳನ್ನು ಭಾಷಾಂತರದ ಹಿನ್ನೆಲೆಯಲ್ಲಿ ಗಮನಿಸುವ, ಚರ್ಚಿಸುವ ಮತ್ತು ವಿವರಿಸುವ ಪ್ರಯತ್ನಗಳೂ ಮುಂಚೂಣಿಗೆ ಬರಲೇ ಇಲ್ಲ.

ಇವೆಲ್ಲವುಗಳಿಂದಾಗಿ ಆಧುನಿಕ ಸಂದರ್ಭದ ಭಾಷಾಂತರ ಅಧ್ಯಯನಗಳು ~~ಕೂಡ~~ ಬಿ.ಎಂ.ಶ್ರೀ ಕೇಂದ್ರಿತವಾಗಿ ರೂಪುಗೊಳ್ಳತೊಡಗಿದವು. ಹಾಗೂ ಇವರ ಪಠ್ಯಗಳನ್ನು ಕೇಂದ್ರವಾಗಿಟ್ಟುಕೊಂಡು ಚರ್ಚೆಗಳು ನಡೆಯಲಾರಂಭಿಸಿದವು. ಅಂದರೆ ಭಾಷಾಂತರ ಅಧ್ಯಯನಗಳು ಪಠ್ಯಕೇಂದ್ರಿತ, ವ್ಯಕ್ತಿಕೇಂದ್ರಿತ ನೆಲೆಯಲ್ಲಿಯೇ ನಡೆದವು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀಯವರ ಸಾಹಿತ್ಯ ಸಾಧನೆ, ಭಾಷಾಂತರ ಪ್ರಯೋಗಗಳನ್ನು ಕೇವಲ ಬಿ.ಎಂ.ಶ್ರೀಯವರಿಂದಲೇ ರೂಪುಗೊಂಡವು ಎಂಬ ನಿಲುವುಗಳನ್ನು ಪರಿಶೀಲಿಸುವ ಅಧ್ಯಯನಗಳು ಮುನ್ನೆಲೆಗೆ ಬಂದವು. ಈ ರೀತಿಯ ವ್ಯಕ್ತಿ ಮತ್ತು ಪಠ್ಯಕೇಂದ್ರಿತ ಅಧ್ಯಯನಗಳಿಂದಾಗಿ ಅವರ ಸಮಕಾಲೀನ ಅಥವಾ ಪೂರ್ವದ ಚಟುವಟಿಕೆಗಳು ಅಧ್ಯಯನದ ವ್ಯಾಪ್ತಿಯಿಂದ ಹೊರಗುಳಿದವು: ಗೌಣವಾದವು. ಹಾಗಾಗಿ ಪ್ರಸ್ತುತ ಅಧ್ಯನವನ್ನು ಪ್ರಕ್ರಿಯೆಕೇಂದ್ರಿತವಾಗಿ ಕೈಗೊಳ್ಳುವುದರೊಂದಿಗೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಗಮನಿಸಲು ಮತ್ತು ಭಾಷಾಂತರದ ಮಾದರಿಯನ್ನು ಗುರುತಿಸಲು ಪ್ರಯತ್ನಿಸಲಾಗುವುದು.

ಇದುವರೆಗಿನ ಬಹುತೇಕ ಅಧ್ಯಯನಗಳು ಬಿ.ಎಂ.ಶ್ರೀಯವರನ್ನು ಕೇಂದ್ರವಾಗಿಟ್ಟುಕೊಂಡು ನಡೆದಿರುವ ಹಿನ್ನೆಲೆಯಲ್ಲಿ ಈ ಅಧ್ಯಯನವು ಬಿ.ಎಂ.ಶ್ರೀ ಪೂರ್ವದಲ್ಲಿ ಭಾಷಾಂತರ ಚಟುವಟಿಕೆ ಹೇಗೆ ನಡೆದಿದೆ, ಅದರ ಸ್ವರೂಪವೇನು ಎಂಬುದನ್ನು ಅರಿಯುವದರೊಂದಿಗೆ, ಅದರ ಬೆಳಕಿನಲ್ಲಿ ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯನ್ನು ವಿವರಿಸಿಕೊಳ್ಳಲು ಪ್ರಯತ್ನಿಸುವುದಾಗಿದೆ. ಈವರೆಗೆ ನಡೆದ ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯ ಕುರಿತಾದ ಅಧ್ಯಯನಗಳು ಬಿ.ಎಂ.ಶ್ರೀ ಪೂರ್ವದ ಭಾಷಾಂತರವನ್ನು ಅಧ್ಯಯನ ಮಾಡುವ ಕುತೂಹಲ ಮೂಡಿಸಿತು. ಈ ಕುತೂಹಲದಿಂದಾಗಿ ಸಾಂಸ್ಕೃತಿಕ ಪಠ್ಯವೆಂದು ಗುರುತುಗೊಂಡ 'ಇಂಗ್ಲಿಷ್ ಗೀತಗಳು' ಕೃತಿಯ ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಕೈಗೊಳ್ಳಲಾಗುವುದು.

'ಇಂಗ್ಲಿಷ್ ಗೀತಗಳು' ಪೂರ್ವದ ಒಟ್ಟಾರೆ ಭಾಷಾಂತರಗಳ 'ಪೂರ್ವಪಾಠ'(Pre Modles)ಗಳೇನು? ಅವುಗಳ ಸ್ವರೂಪ, ತಾತ್ವಿಕತೆ ಹಾಗೂ ಆ ಕಾಲದ ಭಾಷಾಂತರ ಪ್ರಕ್ರಿಯೆಯ ಒಟ್ಟಾರೆ ನಿಲುವುಗಳೇನು ಎಂಬುದನ್ನು ಈ ಪ್ರಬಂಧದಲ್ಲಿ ಚರ್ಚಿಸಲು ಪ್ರಯತ್ನಿಸಲಾಗುವುದು. ಇದು ಒಂದು ರೀತಿಯಿಂದ ಆಧುನಿಕ ಸಂದರ್ಭದ ಭಾಷಾಂತರ ಅಧ್ಯಯನದ 'ಪೂರ್ವಪೀಠಿಕೆ'ಯೂ ಹೌದು: ಆಧುನಿಕ ಕನ್ನಡ ಸಾಹಿತ್ಯಾಧ್ಯಯನದ 'ಪೂರ್ವಪೀಠಿಕೆ'ಯೂ ಆಗಬಹುದು.

## ಉದ್ದೇಶ

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದ್ದಾಗಿದೆ.

೧. ಬಿ.ಎಂ.ಶ್ರೀಯವರಿಂದ ಗುರುತುಗೊಂಡಿರುವ ಕನ್ನಡ ಭಾಷಾಂತರ ಪ್ರಕ್ರಿಯೆಯ ಚರ್ಚೆಯನ್ನು ಬಿ.ಎಂ.ಶ್ರೀ ಪೂರ್ವಕ್ಕೆ ಅಂದರೆ (೧೯೨೧ರಿಂದ) ೧೮೫೦ಕ್ಕೆ ಕೊಂಡೊಯ್ಯುವುದು.

೨. ಕನ್ನಡದ ಸಂದರ್ಭದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ತನ್ನನ್ನು ರೂಪಿಸಿಕೊಂಡಿರುವ ಭಾಷಾಂತರ ಅಧ್ಯಯನದ ವ್ಯಾಪ್ತಿಯನ್ನು ಸಾಹಿತ್ಯೇತರ ಭಾಷಾಂತರದವರೆಗೆ ವಿಸ್ತರಿಸುವುದು.

೩. ಆಧುನಿಕಪೂರ್ವ ಮತ್ತು ಆಧುನಿಕ ಭಾಷಾಂತರವನ್ನು ಗಮನದಲ್ಲಿಟ್ಟುಕೊಂಡು ಗುರುತುಗೊಂಡಿರುವ ಭಾಷಾಂತರ ಅಧ್ಯಯನದ ಎರಡು ನೆಲೆಗಳಿಗೆ ಕೊಂಡಿಯಾಗಿ, ಒಂದನ್ನೊಂದು ಸೇರಿಸುವ ಸೇತುವೆಯಾಗಿ ಕಂಡುಬರುವ 'ಟೀಕು'ಗಳನ್ನು ಅಧ್ಯಯನಕ್ಕೆ ಒಳಪಡಿಸುವುದು. ಈ ಮೂಲಕ ಕನ್ನಡ ಭಾಷಾಂತರ ಪ್ರಕ್ರಿಯೆಯ ನಿರಂತರತೆಯನ್ನು ಗುರುತಿಸಲು ಯತ್ನಿಸುವುದು.

೪. ಆಧುನಿಕ ಸಂದರ್ಭದಲ್ಲಿ ಸಾಹಿತ್ಯಾಧ್ಯಯನದ ಭಾಗವಾಗಿ ನಡೆದ 'ಗ್ರಂಥಸಂಪಾದನಾ' ಚಟುವಟಿಕೆಯೂ ತಾತ್ವಿಕವಾಗಿ ಭಾಷಾಂತರವೇ ಆಗಿದೆ ಎಂಬುದನ್ನು ಅರ್ಥೈಸಿಕೊಳ್ಳುವುದು.

೫. ಸಾಹಿತ್ಯೇತರ ಜ್ಞಾನಕ್ಷೇತ್ರಕ್ಕೆ ಸಂಬಂಧಿಸಿದ ಪಠ್ಯಗಳನ್ನು ಭಾಷಾಂತರದ ಹಿನ್ನೆಲೆಯಲ್ಲಿ ಚರ್ಚಿಸುವುದರೊಂದಿಗೆ ಅವುಗಳು ರೂಪುಗೊಂಡ ಬಗೆಗಳನ್ನು ಗುರುತಿಸುವುದು.

೬. ಸಾಹಿತ್ಯ ಸಂದರ್ಭಕ್ಕೆ ಹೊರತಾಗಿಯೂ ಧಾರ್ಮಿಕ ಪಠ್ಯಗಳ ಭಾಷಾಂತರ ಚಟುವಟಿಕೆಯ ಸಂದರ್ಭದಲ್ಲಿಯೂ ನಡೆದ ಭಾಷಾಂತರ ಕುರಿತ ಚರ್ಚೆಗಳನ್ನು ಮುನ್ನೆಲೆಗೆ ತರುವುದು.

೭. ಕನ್ನಡವನ್ನು ಶಿಕ್ಷಣದ ಭಾಷೆಯಾಗಿ ರೂಪಿಸಿಕೊಳ್ಳುವ ಸಂದರ್ಭದಲ್ಲಿ ಭಾಷಾಂತರವು ಹೇಗೆ ಸಹಾಯಕವಾಗಿದೆ ಎಂಬುದನ್ನು ಅರಿಯುವುದು.

೮. ಬಿ.ಎಂ.ಶ್ರೀಯವರ ನಾಟಕಗಳನ್ನು ವಿವರಿಸಿಕೊಳ್ಳುವ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಪೂರ್ವದ ನಾಟಕ ಪರಂಪರೆಗಳು ನೆರವಾಗಬಹುದಾದ ಸಾಧ್ಯತೆಗಳನ್ನು ಗುರುತಿಸುವುದು.

ಮೇಲಿನ ಅಂಶಗಳ ವಿಶ್ಲೇಷಣೆಯೊಂದಿಗೆ 'ಇಂಗ್ಲಿಷ್ ಗೀತಗಳು' ಪೂರ್ವದ ಒಟ್ಟಾರೆ ಭಾಷಾಂತರ ಪ್ರಕ್ರಿಯೆಯನ್ನು ಚರ್ಚಿಸುವುದರೊಂದಿಗೆ ಆಧುನಿಕ ಕನ್ನಡ ಸಾಹಿತ್ಯ ಮತ್ತು ಭಾಷಾಂತರ ಚಟುವಟಿಕೆಯು ಇದರಿಂದ ಹೇಗೆ ರೂಪುಗೊಂಡವು ಎಂಬುದನ್ನು ತಿಳಿಯುವ ಉದ್ದೇಶ ಈ ಅಧ್ಯಯನದ್ದಾಗಿದೆ. ಹೀಗೆ ಈ ಮೇಲಿನ ವಿವಿಧ ಉದ್ದೇಶಗಳ ಹಿನ್ನೆಲೆಯಲ್ಲಿ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಚರ್ಚಿಸಲಾಗುವುದು.

**ವ್ಯಾಪ್ತಿ**

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಅಧ್ಯಯನ ಕೈಗೊಳ್ಳುವ ಸಂದರ್ಭದಲ್ಲಿ ಬಿ.ಎಂ.ಶ್ರೀಯವರನ್ನು ಮೈಲಿಗಲ್ಲಾಗಿ ಗುರುತಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯನವು 'ಇಂಗ್ಲಿಷ್ ಗೀತಗಳು' ಕೃತಿಯಿಂದ ಹಿಂದಕ್ಕೆ ೭೦ವರ್ಷಗಳ ವರೆಗಿನ ಕಾಲ ವ್ಯಾಪ್ತಿಯನ್ನು ಹೊಂದಿದೆ. ಅಂದರೆ ಈ ಅಧ್ಯಯನದ ಕಾಲವ್ಯಾಪ್ತಿಯು ೧೮೫೦ ರಿಂದ 'ಇಂಗ್ಲಿಷ್ ಗೀತಗಳು' ಪ್ರಕಟಗೊಂಡ ಕಾಲ ೧೯೨೧ರವರೆಗೆ ಹರಡಿಕೊಂಡಿದೆ. ಕನ್ನಡದ ಸಂದರ್ಭದಲ್ಲಿ ಆಧುನಿಕ ಶಿಕ್ಷಣ ಆರಂಭಗೊಂಡು ಶೈಕ್ಷಣಿಕ ಸಂಸ್ಥೆಗಳು ರೂಪುಗೊಂಡಿರುವುದು, ಆಧುನಿಕ ಸಾಹಿತ್ಯಪ್ರಕ್ರಿಯೆ ಹಾಗೂ ಇನ್ನಿತರ ಆಧುನಿಕ ಪಲ್ಲಟಗಳು ೧೮೫೦ರ ನಂತರದಲ್ಲಿಯೇ ಗಾಢವಾಗಿ ಕಾಣಿಸಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ 'ಇಂಗ್ಲಿಷ್ ಗೀತಗಳು ಪೂರ್ವ'ವನ್ನು ೧೮೫೦ ರಿಂದ ಗುರುತಿಸಿಕೊಂಡು ಅಲ್ಲಿಂದ ಸುಮಾರು ಏಳು ದಶಕಗಳಲ್ಲಿ ನಡೆದ ಭಾಷಾಂತರ ಚಟುವಟಿಕೆಯನ್ನು ಚರ್ಚೆಗೆ ಒಳಪಡಿಸಲಾಗುವುದು.

೧೮೫೦ರಿಂದ ೧೯೨೦ರ ಅವಧಿಯಲ್ಲಿ ನಡೆದ ಟೀಕು, ಶಾಲಾಪಠ್ಯ, ಗ್ರಂಥಸಂಪಾದನೆ, ಸಾಹಿತ್ಯೇತರ ಮತ್ತು 'ರೂಪಾಂತರ' ಕೃತಿಗಳನ್ನು ಮೂಲ ಆಕರವಾಗಿ ಬಳಸಿಕೊಳ್ಳಲಾಗಿದೆ. ಹಾಗೂ ಈ ಅಧ್ಯಯನವು ಭಾಷಾಂತರದ ಇನ್ನಿತರ ಕೃತಿಗಳನ್ನು ಆನುಷಂಗಿಕವಾಗಿ ಬಳಸಿಕೊಂಡಿದೆ. ನಮ್ಮ ಮಾತು ಬರಹ ಸಹ ಒಂದು ರೀತಿಯಿಂದ ಭಾಷಾಂತರವೇ ಎಂಬುದರಿಂದ ಹಿಡಿದು ಭಾಷೆ ಭಾಷೆಗಳಲ್ಲಿ ನಡೆವ ಚಟುವಟಿಕೆ ಸಂಸ್ಕೃತಿ ಸಂಸ್ಕೃತಿಯಿಂದ ಚಟುವಟಿಕೆ ಇತ್ಯಾದಿಗಳನ್ನೆಲ್ಲಾ ಭಾಷಾಂತರವೆಂದೇ ಪರಿಭಾವಿಸಲಾಗಿದೆ. ಜೊತೆಗೆ ಏಕ ಮೂಲಗಳನ್ನಾಧರಿಸಿದ ಮತ್ತು ಬಹುಮೂಲಗಳನ್ನಾಧರಿಸಿದ ಪಠ್ಯಗಳ ರೂಪುಗೊಳ್ಳುವಿಕೆಯನ್ನು ಭಾಷಾಂತರವೇ ಎಂದು ಅರ್ಥೈಸಲಾಗಿದೆ.

ಈ ಏಳು ದಶಕಗಳಲ್ಲಿನ ಭಾಷಾಂತರ ಚಟುವಟಿಕೆಯನ್ನು ಸಾಹಿತ್ಯ ಪ್ರಕಾರಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ನಾಟಕಗಳು ಹೆಚ್ಚಿನ ಪ್ರಮಾಣದಲ್ಲಿ ಕನ್ನಡದಲ್ಲಿ ರೂಪುಗೊಂಡಿರುವುದು ಕಂಡು ಬರುತ್ತದೆ. ಹೀಗಾಗಿ 'ರೂಪಾಂತರ'

ನಾಟಕಗಳನ್ನು ಹಿನ್ನೆಲೆಯಾಗಿರಿಸಿಕೊಂಡು 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ವಿವಿಧ ನೆಲೆಯಲ್ಲಿ ಚರ್ಚಿಸಲಾಗುವುದು. ಸಾಹಿತ್ಯ ಪಠ್ಯಗಳ ಭಾಷಾಂತರದೊಂದಿಗೆ ಸಾಹಿತ್ಯ ಪ್ರಕಾರಗಳ ಭಾಷಾಂತರದ ಕುರಿತು ಚರ್ಚೆಯನ್ನು ಪ್ರಾಸಂಗಿಕವಾಗಿ ಮಾತ್ರ ದಾಖಲಿಸಲಾಗಿದೆ. ಕಾದಂಬರಿ ಪ್ರಕಾರದ ಭಾಷಾಂತರವನ್ನು ಕೇವಲ ಪ್ರಸ್ತಾಪಿಸಿದ್ದು ಈ ಬಗ್ಗೆ ಪ್ರತ್ಯೇಕವಾದ ಅಧ್ಯಯನದ ಅಗತ್ಯವಿದೆ. ಇವುಗಳೊಂದಿಗೆ ಆಧುನಿಕ ಸಂದರ್ಭದಲ್ಲಿ ಧಾರ್ಮಿಕ ಪಠ್ಯಗಳು ಕನ್ನಡದಲ್ಲಿ ರೂಪುಗೊಂಡ ಬಗೆ, ಆಧುನಿಕ ಶಿಕ್ಷಣ ಮತ್ತು ಶಾಲಾಪಠ್ಯಗಳು, ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಮತ್ತು ಟೀಕುಗಳು ಇತ್ಯಾದಿಗಳನ್ನು 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ 'ಟೀಕುಗಳು', 'ಶಾಲಾಪಠ್ಯಗಳು' ಮತ್ತು ಗ್ರಂಥಸಂಪಾದನೆಯನ್ನು ಭಾಷಾಂತರದ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ. ಸಂಸ್ಕೃತ/ಕನ್ನಡಲ್ಲಿರುವ ಕಾವ್ಯ ಅಥವಾ ಶಾಸ್ತ್ರ ಗ್ರಂಥಗಳನ್ನು ೧೯ನೇ ಶತಮಾನದಲ್ಲಿ ವ್ಯಾಖ್ಯಾನಿಸುವುದು, ತಾತ್ಪರ್ಯ ನೀಡುವುದು. ಹಾಗೂ ಈ ಮೂಲಕ ಟೀಕಾಗ್ರಂಥವನ್ನು ಮರುರೂಪಿಸಿಕೊಳ್ಳುವುದು ಭಾಷಾಂತರವೇ ಆಗಿದೆ. ಆದುನಿಕ ಶಿಕ್ಷಣವೇ ಭಾಷಾಂತರದಿಂದ ರೂಪುಗೊಂಡಿರುವುದಾಗಿದ್ದು ಇದರ ಭಾಗವಾಗಿ ಬಂದ 'ಶಾಲಾಪಠ್ಯಗಳು' ಹೇಗೆ ಭಾಷಾಂತರ ಪಠ್ಯಗಳಾಗಿವೆ ಎಂಬುದನ್ನು ಪ್ರತ್ಯೇಕ ಅಧ್ಯಾಯದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಗ್ರಂಥಸಂಪಾದನಾ ಚಟುವಟಿಕೆ ಯಾವ ಬಗೆಯಲ್ಲಿ ಭಾಷಾಂತರ ತಾತ್ವಿಕತೆಯಲ್ಲಿ ನಡೆದಿದೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲಾಗುವುದು.

ಈ ಕಾಲಘಟ್ಟದಲ್ಲಿ ಕನ್ನಡ ಭಾಷೆಯು ಹಲವು ಭಾಷೆಗಳೊಂದಿಗೆ ಸಂಬಂಧವನ್ನು ಹೊಂದಿದ್ದರೂ ಸುಮಾರು ೧೮೫೦ರ ನಂತರದಲ್ಲಿ ಕನ್ನಡದ ಭಾಷಾಂತರ ಸಂಬಂಧ ಸ್ಪಷ್ಟವಾಗಿ ಇಂಗ್ಲಿಷ್, ಸಂಸ್ಕೃತ ಮತ್ತು ನೆರೆಯ ತೆಲುಗು, ತಮಿಳು, ಇತ್ಯಾದಿ ಭಾಷೆಗಳೊಂದಿಗೆ ರೂಪುಗೊಂಡಿದೆ. ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡಕ್ಕೆ ಸಂಸ್ಕೃತ ಮತ್ತು ಇಂಗ್ಲಿಷ್ ಸೇರಿದಂತೆ ನೆರೆಯ ಭಾಷೆಗಳಿಂದಲೂ ಭಾಷಾಂತರ ನಡೆದಿದೆ. ಇದನ್ನು ಗಮನದಲ್ಲಿರಿಸಿಕೊಂಡು ಇಂಗ್ಲಿಷ್‌ನಿಂದ ಕನ್ನಡಕ್ಕೆ, ಸಂಸ್ಕೃತದಿಂದ ಕನ್ನಡಕ್ಕೆ ಹಾಗೂ ನೆರೆಯ ಭಾಷೆಗಳಿಂದ ಕನ್ನಡಕ್ಕೆ ನಡೆದ ಭಾಷಾಂತರ ಚಟುವಟಿಕೆಯನ್ನು ಮಾತ್ರ ಗಮನಿಸಲಾಗಿದೆ. ಅತ್ಯಲ್ಪ ಪ್ರಮಾಣದಲ್ಲಿ ಪಶ್ಚಿಮದ ಇತರ ಭಾಷೆಗಳಿಂದ ಪಠ್ಯಗಳು ಬಂದಿರುವುದಾದರೂ ಅವು ಇಂಗ್ಲಿಷ್‌ನ ಮಧ್ಯವರ್ತಿಕೆಯಲ್ಲಿಯೇ ಬಂದಿರುವುದರಿಂದ ಅವುಗಳನ್ನು ಇಂಗ್ಲಿಷ್ ಭಾಷಾಂತರವೆಂದೇ ಪರಿಗಣಿಸಲಾಗಿದೆ.

ಈ ಮೇಲಿನ ವ್ಯಾಪ್ತಿಯ ಹಿನ್ನೆಲೆಯಲ್ಲಿ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ವೈಧಾನಿಕತೆ**

ಭಾಷಾಂತರ ಅಧ್ಯಯನವನ್ನು ಪ್ರಮುಖವಾಗಿ ಪಠ್ಯ (Text) ವ್ಯಕ್ತಿಕೇಂದ್ರಿತ, ಕ್ರಿಯೆಕೇಂದ್ರಿತ (Program) / ವ್ಯಕ್ತಿಕೇಂದ್ರಿತ ಹಾಗೂ ಪ್ರಕ್ರಿಯೆ (Proses) ಕೇಂದ್ರಿತ ವೈಧಾನಿಕತೆಗಳಲ್ಲಿ ಕೈಗೊಳ್ಳಬಹುದು. ಆದರೆ ಕನ್ನಡದ

ಸಂದರ್ಭದಲ್ಲಿ ನಡೆದ ಇದುವರೆಗಿನ ಭಾಷಾಂತರ ಅಧ್ಯಯನಗಳು ಪಠ್ಯ ಇಲ್ಲವೆ ವ್ಯಕ್ತಿ (ಭಾಷಾಂತರಕಾರರ) ಹಿನ್ನೆಲೆಯಲ್ಲಿಯೇ ನಡೆದಿದೆ. ಭಾಷಾಂತರ ಪ್ರಕ್ರಿಯೆಯೊಂದು ಸಾಮೂಹಿಕ ಚಟುವಟಿಕೆ. ಇದರಲ್ಲಿ ಮೂಲ ಪಠ್ಯ, ಲೇಖಕ ಮತ್ತು ಸಂದರ್ಭದೊಂದಿಗೆ ಭಾಷಾಂತರದ ಸಂದರ್ಭ, ಕಾಲ, ಲೇಖಕ ಇತರರೆಲ್ಲರೂ ಇರುತ್ತಾರೆ. ಜೊತೆಗೆ ಭಾಷಾಂತರ ಕೃತಿಯೊಂದು ತಾನು ರೂಪುಗೊಳ್ಳುವ ಸಂದರ್ಭದ ಇನ್ನಿತರ ಭಾಷಾಂತರ ಚಟುವಟಿಕೆಯಿಂದ ಪ್ರಭಾವಿತವಾಗಿರುತ್ತದೆ. ಹೀಗಾಗಿ ಒಂದು ನಿರ್ದಿಷ್ಟ ಭಾಷಾಂತರ ಪಠ್ಯ ಇಲ್ಲವೆ ಭಾಷಾಂತರಕಾರರು ಮಾತ್ರ ಗಮನಾರ್ಹವಾದರೆ, ಉಳಿದಂತೆ ಪಠ್ಯದ ಸಮಕಾಲೀನ ಸಂದರ್ಭದಲ್ಲಿನ ಇತರ ಭಾಷಾಂತರ ಪಠ್ಯ, ಮತ್ತು ಹಲವು ಭಾಷಾಂತರಕಾರರು ಗೌಣ ಎನಿಸಿಕೊಂಡು ಪರಿಧಿಯಲ್ಲಿಯೇ ನಿಲ್ಲುವಂತಾಗುತ್ತದೆ.

ಈ ಬಗೆಯ ವೈಧಾನಿಕತೆಯಿಂದಾಗಿ 'ಇಂಗ್ಲಿಷ್ ಗೀತಗಳು' ಮತ್ತು ಬಿ.ಎಂ.ಶ್ರೀಯವರಂಥ ಭಾಷಾಂತರಕಾರರು 'ಕೇಂದ್ರ' ಎನಿಸಿಕೊಂಡು ಉಳಿದ ಭಾಷಾಂತರ ಪಠ್ಯ ಮತ್ತು ಭಾಷಾಂತರಕಾರರು . ಪರಿಧಿಯಲ್ಲಿ ಉಳಿದುಕೊಂಡರು. ಇದರಿಂದಾಗಿ ಭಾಷಾಂತರ ಅಧ್ಯಯನ ಸಂದರ್ಭದಲ್ಲಿ ಪಠ್ಯ ಮತ್ತು ಭಾಷಾಂತರಕಾರರ ಚಟುವಟಿಕೆ ಮುನ್ನೆಲೆಗೆ ಬಂದು, ಅವರ ಪೂರ್ವದ ಇಲ್ಲವೆ ಸಮಕಾಲೀನ ಭಾಷಾಂತರ ಚಟುವಟಿಕೆ ಗೌಣವಾಗಿಯೇ ಉಳಿದವು. ಕನ್ನಡದ ಸಂದರ್ಭದಲ್ಲಿ 'ಸಾಂಸ್ಕೃತಿಕ ಅಧ್ಯಯನ'ವೆಂದು ಕೈಗೆತ್ತಿಕೊಂಡಿರುವ ಅಧ್ಯಯನಗಳೂ ಕೂಡ ಪಠ್ಯಕೇಂದ್ರಿತವಾಗಿಯೇ ಮುಂದುವರಿದಿವೆ ಎನ್ನಬಹುದು. ಆದರೆ ಪ್ರಸ್ತುತ ಅಧ್ಯಯನವು ಯಾವುದೇ ಒಂದು 'ಪಠ್ಯ' ಅಥವಾ 'ವ್ಯಕ್ತಿ' ಕೇಂದ್ರಿತವಾಗಿ ಗುರುತಿಸಿಕೊಳ್ಳುವ ವೈಧಾನಿಕತೆಗಿಂತ ಭಿನ್ನವಾಗಿದೆ. ಈ ಅಧ್ಯಯನದಲ್ಲಿ ಒಂದು ನಿರ್ದಿಷ್ಟ ಪಠ್ಯ ಮುಖ್ಯವಲ್ಲ ಹಾಗೆಯೇ ಒಬ್ಬ ಭಾಷಾಂತರಕಾರ ಮಾತ್ರ ಕೇಂದ್ರವಲ್ಲ, ಬದಲಿಗೆ ಒಂದು ನಿರ್ದಿಷ್ಟ ಕಾಲಘಟ್ಟ ದ ಭಾಷಾಂತರ ಪ್ರಕ್ರಿಯೆಯನ್ನು ಗಮನಿಸುವ, ಅರ್ಥೈಸುವ ವೈಧಾನಿಕತೆಯನ್ನು ಅಧ್ಯಯನದಲ್ಲಿ ಅನುಸರಿಸಲಾಗಿದೆ. ಅಂದರೆ ಭಾಷಾಂತರ ಪ್ರಕ್ರಿಯೆಯ ರೂಪ, ಸ್ವರೂಪವನ್ನು ಚರ್ಚಿಸುವುದರೊಂದಿಗೆ ಪರಿಣಾಮಗಳನ್ನು ಮತ್ತು ಅದರ ಕಾರಣ, ಉದ್ದೇಶಗಳನ್ನು ಗುರುತಿಸಲು ಪ್ರಯತ್ನಿಸಲಾಗುವುದು.

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಚಟುವಟಿಕೆಯನ್ನು ಅಧ್ಯಯನ ಮಾಡಲು ಪ್ರಕ್ರಿಯೆ ಕೇಂದ್ರಿತ ವೈಧಾನಿಕತೆಯನ್ನು ಅನುಸರಿಸಲಾಗಿದ್ದು ಆ ಮೂಲಕ ೧೮೫೦ ರಿಂದ ನಂತರದ ಏಳು ದಶಕಗಳಲ್ಲಿನ (೧೯೨೦ರ ವರೆಗಿನ) ಭಾಷಾಂತರ ಪ್ರಕ್ರಿಯೆಯ ಒಟ್ಟಾರೆ ನಿಲುವು, ಚಿಂತನೆಗಳನ್ನು ಗಮನಿಸಿ ತಾತ್ವಿಕ ಚೌಕಟ್ಟಿನಲ್ಲಿ ಪರಿಭಾವಿಸಲಾಗುವುದು.

**ಸಾಹಿತ್ಯ ಸಮೀಕ್ಷೆ**

ಭಾಷಾಂತರವನ್ನು ಕುರಿತ ಬಹುತೇಕ ಅಧ್ಯಯನಗಳು ಸಾಹಿತ್ಯದ ತಾತ್ವಿಕ ಹಿನ್ನೆಲೆಯಲ್ಲಿಯೇ ಹೊರಟವಾಗಿವೆ. 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಅಧ್ಯಯನಗಳು ಕೆಲವೇ ಕೆಲವು. ಅವು ಭಾಷಾಂತರ ಹಿನ್ನೆಲೆಗಿಂತ ಸಾಹಿತ್ಯಾಧ್ಯಯನದ ಹಿನ್ನೆಲೆಯಲ್ಲಿಯೇ ಬಂದವುಗಳಾಗಿವೆ. ಈ ಹಿನ್ನೆಲೆಯಲ್ಲಿ 'ಇಂಗ್ಲಿಷ್ ಗೀತಗಳು' ಪೂರ್ವದ ಸಾಹಿತ್ಯ ಸಮೀಕ್ಷೆಯಿಂದ ಮುಂದಿನ ಕೆಲವು ಪ್ರಮುಖ ಅಂಶಗಳಲ್ಲಿ ಗುರುತಿಸಿಕೊಳ್ಳಬಹುದು.

೧. ಶ್ರೀನಿವಾಸ ಹಾವನೂರ ಮತ್ತು ರಾ.ಯ.ಧಾರವಾಡಕರ ಮುಂತಾದ ಅಧ್ಯಯನಕಾರರು ಆಧುನಿಕ ಕನ್ನಡ ಸಾಹಿತ್ಯದ ಆರಂಭಿಕ ನೆಲೆಯನ್ನು ಗಮನಾರ್ಹವಾಗಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಇವರುಗಳು ಆಧುನಿಕಪೂರ್ವ ಸಂಧಿಕಾಲ ಮತ್ತು ಆಧುನಿಕ ಕಾಲವನ್ನು ಸಾಹಿತ್ಯಾಧ್ಯಯನದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವಾಗ ಆ ಕಾಲವನ್ನು 'ಹೊಸಗನ್ನಡದ ಅರುಣೋದಯ' ಮತ್ತು 'ಹೊಸಗನ್ನಡದ ಉದಯ ಕಾಲ' ಎಂದು ಪರಿಭಾವಿಸಿದ್ದಾರೆ. ಇಲ್ಲಿ ಭಾಷೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳು ಹೇಗೆ ಹೊಸದಾದ ರೂಪ-ಸ್ವರೂಪದಲ್ಲಿ ರೂಪುಗೊಂಡವು ಎಂಬುದನ್ನು ಮುಖ್ಯವಾಗಿ ಗಮನಿಸಿದ್ದಾರೆ. ಜೊತೆಗೆ ಮಿಶನರಿಗಳು ಹಾಗೂ ದೇಶೀಯರು ಕೈಗೊಂಡ ಬೈಬಲ್ ಭಾಷಾಂತರ, ಧಾರ್ಮಿಕ ಕೃತಿಗಳ ಪುನರ್‌ಲೇಖ ಇತ್ಯಾದಿಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಇದಲ್ಲದೆ ಬಿ.ಎಂ.ಶ್ರೀಯವರ ಪೂರ್ವದಲ್ಲಿ ಕಂಡು ಬರುವ ನಾಟಕಗಳ ರೂಪಾಂತರಗಳ ಬಗೆಗೆ ಸಾಕಷ್ಟು ಮಾಹಿತಿಗಳನ್ನು ಒದಗಿಸಿದ್ದಾರೆ. ಈ ಮಾಹಿತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗುತ್ತದೆ.

೨. ಆಧುನಿಕ ರಂಗಭೂಮಿಯ ರೂಪುಗೊಳ್ಳುವಿಕೆ ಮತ್ತು ನಾಟಕ ಸಾಹಿತ್ಯದ ಉಗಮ ವಿಕಾಸಗಳ ಬಗ್ಗೆ ನಡೆದ ಬಹುತೇಕ ಅಧ್ಯಯನಗಳು ಬಿ.ಎಂ.ಶ್ರೀಯವರ ಪೂರ್ವದಲ್ಲಿ ಬಂದಿರುವ ಭಾಷಾಂತರಗಳ ನಾಟಕಗಳನ್ನು ಅಧ್ಯಯನಕ್ಕೆ ಒಳಪಡಿಸಿವೆ. ಈ ಅಧ್ಯಯನಗಳು ರಂಗಭೂಮಿ ಹಾಗೂ ಸಾಹಿತ್ಯದ ಹಿನ್ನೆಲೆಯಲ್ಲಿ ನಡೆದವುಗಳಾಗಿವೆ. ಕನ್ನಡ ರಂಗಭೂಮಿಯ ಉದಯ ಮತ್ತು ವಿಕಾಸ ಹೇಗಾಯಿತು, ಅದಕ್ಕೆ ದೇಶೀಯ ಹಾಗೂ ಪಶ್ಚಿಮದ ನಾಟಕ ಸಾಹಿತ್ಯ ಯಾವ ಬಗೆಯಲ್ಲಿ ಪ್ರೇರಣೆಯಾದವು ಎಂಬುದನ್ನು ಗುರುತಿಸುವುದರೊಂದಿಗೆ ಆಧುನಿಕ ನಾಟಕ ಸಾಹಿತ್ಯದ ಉಗಮದ ಕುರಿತು ಚರ್ಚಿಸುವಾಗ 'ರೂಪಾಂತರ' ನಾಟಕಗಳನ್ನು ಬಳಸಿಕೊಳ್ಳಲಾಗಿದೆ. ಈ ಬಗೆಯಲ್ಲಿ ನಾಟಕಗಳು ಅಧ್ಯಯನಕ್ಕೆ ಒಳಪಟ್ಟಿವೆ. ಇದರಲ್ಲಿ ತ.ಸು. ಶಾಮರಾಯರವರ 'ಕನ್ನಡ ನಾಟಕ' (೧೯೬೭), ಮರುಳ ಸಿದ್ಧಪ್ಪ ಕೆ ಅವರ 'ಆಧುನಿಕ ಕನ್ನಡ ನಾಟಕ' (೧೯೮೦) ಮತ್ತು ಆದ್ಯರಂಗಾಚಾರ್ಯರ 'ಕನ್ನಡ ರಂಗಭೂಮಿಯ ಪುರೋಭಿವೃದ್ಧಿ' ಇತ್ಯಾದಿ ಕೃತಿಗಳು ಮುಖ್ಯವಾದವುಗಳಾಗಿವೆ.

೩. ಭಾಷಾಂತರ ಒಂದು ಅಧ್ಯಯನ ಕ್ಷೇತ್ರವಾಗಿ ರೂಪುಗೊಂಡ ಅವಧಿಯಲ್ಲಿ ಪ್ರಕಟಗೊಂಡ ಕೃತಿಗಳೆಂದರೆ ರಾಮಚಂದ್ರದೇವ ಅವರ 'ಶೇಕ್ಸ್‌ಪಿಯರ್ ಎರಡು ಸಂಸ್ಕೃತಿಗಳಲ್ಲಿ'(೧೯೯೩), ವಿ.ಬಿ. ತಾರಕೇಶ್ವರ ಅವರ 'ವಸಾಹತುಶಾಹಿ ಮತ್ತು ಭಾಷಾಂತರ; ಮೈಸೂರು ಮತ್ತು ಕನ್ನಡ ಪ್ರಕರಣಗಳು'. ರಾಮಚಂದ್ರದೇವ ಅವರು ಕನ್ನಡದಲ್ಲಿ ರೂಪುಗೊಂಡಿರುವ ಶೇಕ್ಸ್‌ಪಿಯರ್ ನಾಟಕಗಳನ್ನು ಹಾಗೂ ಮೂಲ ನಾಟಕಗಳನ್ನು ಒಟ್ಟಿಗೆ ನೋಡಿ ಅವುಗಳಲ್ಲಿನ 'ಸೃಜನಶೀಲ ಭಾಷಾಂತರ'ದ ಪರಿಶೀಲನೆ ಮಾಡಿದ್ದಾರೆ. ಪ್ರಮುಖವಾಗಿ ಇಲ್ಲಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ಕನ್ನಡ ಭಾಷಾಂತರ ನಾಟಕಗಳನ್ನು ವ್ಯಾಖ್ಯಾನಿಸುವ ಪ್ರಯತ್ನವನ್ನು ಕಾಣಬಹುದು. ಆದರೆ ತಾರಕೇಶ್ವರ ಅವರು ವಸಾಹತುಶಾಹಿ ಹಿನ್ನೆಲೆಯಲ್ಲಿ ಭಾಷಾಂತರವನ್ನು ಗಮನಿಸುವಾಗ ಭಾಷಾಂತರಗಳು ಮೂಲಕ ಜಾತಿಯಂತಹ ಸಾಮಾಜಿಕ ಸಂಸ್ಥೆಗಳು ಆಧುನಿಕತೆಯಲ್ಲಿ ಹೇಗೆ ಪ್ರವಹಿಸುತ್ತವೆ. ಜೊತೆಗೆ ಅವು ಸಂಸ್ಕೃತಿಯನ್ನು ಹೇಗೆ ರೂಪಿಸಬಲ್ಲವು ಎಂಬುದನ್ನು ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಇವರ ಅಧ್ಯಯನದ ಉದ್ದೇಶ ಆ ಕಾಲವನ್ನು ಭಾಷಾಂತರದ ಹಿನ್ನೆಲೆಯಲ್ಲಿ ಗ್ರಹಿಸುವುದೇ ಆಗಿದೆ.

ಕರಿಗೌಡ ಬೀಚನಹಳ್ಳಿಯವರ 'ಕನ್ನಡದಲ್ಲಿ ಶೇಕ್ಸ್‌ಪಿಯರ್' (೨೦೦೫) ಎಂಬ ಕೃತಿಯಲ್ಲಿ ಶಿಕ್ಷಣ ಮತ್ತು ಸಾಹಿತ್ಯದ ಸಂದರ್ಭದಲ್ಲಿ ಕನ್ನಡಿಗರು ಶೇಕ್ಸ್‌ಪಿಯರ್‌ನನ್ನು ಹೇಗೆ ಪರಿಭಾವಿಸಿದ್ದಾರೆ ಎನ್ನುವ ಕುರಿತು ಗಮನಹರಿಸಿದ್ದಾರೆ.

೪. ಲೇಖಕರ ಕುರಿತು ಸಮಗ್ರ ಸಂಪುಟಗಳನ್ನು ಹಾಗೂ ಸಂಸ್ಮರಣ ಗ್ರಂಥಗಳನ್ನು ಪ್ರಕಟಿಸುವಾಗ ಅವರ ಸಾಹಿತ್ಯ ಚಟುವಟಿಕೆಯೊಂದಿಗೆ ಭಾಷಾಂತರ ಚಟುವಟಿಕೆಯನ್ನು ದಾಖಲಿಸಿರುವುದುಂಟು. ಮನೋಹರ ಗ್ರಂಥಮಾಲೆಯಿಂದ ಪ್ರಕಟಗೊಂಡ 'ಕೆರೂರರ ಸಮಗ್ರ ಸಂಪುಟ'ದಲ್ಲಿ ಇವರ ಭಾಷಾಂತರ ನಾಟಕಗಳ ಕುರಿತು ಮುನ್ನುಡಿಯಲ್ಲಿ ಕೆಲವು ಮುಖ್ಯ ಮಾಹಿತಿಗಳನ್ನು ನೀಡಿದ್ದಾರೆ. ಹಾಗೆಯೇ ಹೇಮಾ ಅವರು ಸಂಪಾದಿಸಿದ ಗದಗೆಯ್ಯ ಹೊನ್ನಾಪುರ ಮಠ ಅವರ ಸಂಸ್ಮರಣ ಗ್ರಂಥದ ಕೆಲವು ಲೇಖನಗಳಲ್ಲಿ ಹೊನ್ನಾಪುರ ಮಠ ಅವರ ಭಾಷಾಂತರ ಚಟುವಟಿಕೆಯನ್ನು ವಿವರಿಸುವ ಪ್ರಯತ್ನ ನಡೆದಿದೆ.

೫. ಸಾಹಿತ್ಯ ಚರಿತ್ರೆಗಳಲ್ಲಿ ಮತ್ತು ಮಿಶನರಿಗಳ ಕುರಿತ ಇನ್ನಿತರ ಅಧ್ಯಯನಗಳಲ್ಲಿ ಮಿಶನರಿಗಳ ಭಾಷಾಂತರವನ್ನು ವಿವರಿಸುವುದರೊಂದಿಗೆ ಅಂದಿನ ಮುಖ್ಯ ಭಾಷಾಂತರಕಾರರ ಕುರಿತು ಮಾಹಿತಿ ನೀಡಿರುವ ಉದಾಹರಣೆಗಳೂ ಇವೆ. ಇವುಗಳೊಂದಿಗೆ ಇನ್ನಿತರ ಕೃತಿಗಳು ಪ್ರಾಸಂಗಿಕವಾಗಿ ಬಿ.ಎಂ.ಶ್ರೀಯವರ ಪೂರ್ವದ ಭಾಷಾಂತರದ ಕುರಿತು ಮಾಹಿತಿಗಳನ್ನು ನೀಡುವ ಪ್ರಯತ್ನ ಮಾಡಿವೆ.

ಆಧುನಿಕ ಸಾಹಿತ್ಯದ ಆಗುವಿಕೆಯ ಪ್ರಕ್ರಿಯೆಯಲ್ಲಿ ಭಾಷಾಂತರಗಳ ಪಾತ್ರವೂ ಇವೆ ಎಂಬುದನ್ನು ಈ ಅಧ್ಯಯನಗಳು ಗುರುತಿಸುತ್ತವೆ.

ಹೀಗೆ ಆಧುನಿಕ ಕನ್ನಡ ಸಾಹಿತ್ಯದ ಉದಯ ಕಾಲದ ಕುರಿತಾದ ಅಧ್ಯಯನಗಳು ಆಧುನಿಕ ನಾಟಕದ ಉಗಮ, ವಿಕಾಸ ಮತ್ತು ರಂಗಭೂಮಿಯ ಬಗ್ಗೆ ನಡೆದ ಅಧ್ಯಯನ, ಮಿಶನರಿಗಳ ಕನ್ನಡ ಚಟುವಟಿಕೆ ಇತ್ಯಾದಿಗಳ ಭಾಗವಾಗಿ ನಡೆದ ಭಾಷಾಂತರದ ಚರ್ಚೆಯನ್ನು ಹಾಗೂ ಭಾಷಾಂತರ ಕ್ಷೇತ್ರದಲ್ಲಿ ನಡೆದ ಅಧ್ಯಯನಗಳನ್ನು ಒಂದೆಡೆ ಸೇರಿಸಲಾಗಿದೆ.

## ಅಧ್ಯಯನದ ಮಹತ್ವ

ಭಾಷಾಂತರ ಅಧ್ಯಯನದಲ್ಲಿ ಇದುವರೆಗೆ ನಡೆಯುತ್ತಿರುವ ಅಧ್ಯಯನಕ್ಕಿಂತ ಭಿನ್ನ ಮಾದರಿಯಲ್ಲಿ ಭಾಷಾಂತರ ಪ್ರಕ್ರಿಯೆಯನ್ನು ಗಮನಿಸವುದು ಈ ಅಧ್ಯಯನದ ಮಹತ್ವದ ಸಂಗತಿಯಾಗಿದೆ. ಅದನ್ನು ಈ ಕೆಳಗಿನ ಕೆಲವು ಅಂಶಗಳಲ್ಲಿ ಗುರುತಿಸಿಕೊಳ್ಳಬಹುದು.

೧. ವಿಶೇಷವಾಗಿ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಕುರಿತಂತೆ ಮಾಹಿತಿಯನ್ನು ಒಂದೆಡೆ ಕ್ರೋಢೀಕರಿಸುವ ಪ್ರಾಥಮಿಕ ಹಂತದಿಂದ ಈ ಅಧ್ಯಯನ ಆರಂಭವಾಗಿದೆ. ಈ ಮಾಹಿತಿ ಮುಂದಿನ ಹಲವು ಅಧ್ಯಯನಗಳಿಗೆ ಆಕರವಾಗಿ ಉಪಯುಕ್ತವಾದುದಾಗಿದೆ.

೨. ಶಾಲಾಪಠ್ಯಗಳ ಬಗ್ಗೆ ವಿಶೇಷವಾದ ಅಧ್ಯಯನಗಳು ನಡೆದಿರುವುದಿಲ್ಲ. ಭಾಷಾಂತರ ಅಧ್ಯಯನದ ಹಿನ್ನೆಲೆಯಲ್ಲಿ ಸಂಗ್ರಹಿಸಿದ ಈ ಮಾಹಿತಿ ಶೈಕ್ಷಣಿಕ ಚಟುವಟಿಕೆಗಳ ಅಧ್ಯಯನ ಅಥವಾ ಪಠ್ಯಪುಸ್ತಕಗಳ ಅಧ್ಯಯನದ ಸಂದರ್ಭದಲ್ಲಿ ಗಮನಾರ್ಹವಾದುದಾಗಿದೆ.

೩. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಭಾಷಾಂತರದ ವಿವಿಧ ಮಾದರಿಗಳನ್ನು ಗುರುತಿಸುವುದರೊಂದಿಗೆ ಅವುಗಳನ್ನು ಆಧುನಿಕ ಭಾಷಾಂತರ ಚಿಂತನೆಯಲ್ಲಿ ಚರ್ಚಿಸುವುದು ಮಹತ್ವದ್ದಾಗಿದೆ.

೪. ಇದುವರೆಗೆ ಸಾಹಿತ್ಯಾಧ್ಯಯನದ ತಾತ್ವಿಕತೆಯಲ್ಲಿ ನಡೆಯುತ್ತಿದ್ದ ಭಾಷಾಂತರ ಅಧ್ಯಯನವನ್ನು ಭಾಷಾಂತರ ಅಧ್ಯಯನದ ತಾತ್ವಿಕತೆಯಲ್ಲಿ ನಿರ್ದಿಷ್ಟವಾಗಿ ಚರ್ಚಿಸುವುದು.

೫. ಭಾಷಾಂತರ ಅಧ್ಯಯನದ ಚರ್ಚೆಯನ್ನು ಸಾಹಿತ್ಯದಿಂದ ಸಾಹಿತ್ಯೇತರ ಭಾಷಾಂತರದೆಡೆಗೆ ವಿಸ್ತರಿಸಿ ಕೊಂಡಿರುವುದು.

೬. 'ಇಂಗ್ಲಿಷ್ ಗೀತಗಳು' ಕುರಿತಿರುವ ಇದುವರೆಗಿನ ನಿಲುವು, ತೀರ್ಮಾನಗಳನ್ನು ಈ ಪೂರ್ವದ ಭಾಷಾಂತರ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಮರುಪರಿಶೀಲಿಸುವುದು.

೭. ಜೊತೆಗೆ ಭಾಷಾಂತರ ಚಟುವಟಿಕೆಯನ್ನು ಪ್ರಕ್ರಿಯೆಯಾಗಿ ಚರ್ಚಿಸವುದು ಈ ಅಧ್ಯಯನದ ಮಹತ್ವದ ಅಂಶವಾಗಿದೆ.

೮. ಸಾಹಿತ್ಯ ಮತ್ತು ಸಾಹಿತ್ಯೇತರ ಭಾಷಾಂತರದ ಸಂದರ್ಭದಲ್ಲಿ ಭಾಷಾಂತರ ಸಿದ್ಧಾಂತವನ್ನು ಕನ್ನಡದ ಸಂದರ್ಭದಲ್ಲಿ ಪುನರ್‌ವಿಮರ್ಶಿಸುವ ಹಾಗೂ ಮರುಪರಿಶೀಲಿಸುವ ನೆಲೆಯಲ್ಲಿ ಈ ಅಧ್ಯಯನ ವಿಶೇಷವಾಗಿದೆ.

ಸಾಹಿತ್ಯಾಧ್ಯಯನ, ಭಾಷಾಂತರ ಅಧ್ಯಯನಗಳೆರಡರ ದೃಷ್ಟಿಯಿಂದ ಇದು ಮುಖ್ಯವಾಗಿದ್ದು ಈ ಎರಡೂ ಅಧ್ಯಯನಗಳ ದಿಗಂತಗಳನ್ನು ವಿಸ್ತರಿಸುವಲ್ಲಿ ಉಪಯುಕ್ತವಾಗಿದೆ.

**ಟಿಪ್ಪಣಿ**

೧. ಕವಿತೆಗಳಲ್ಲಿ ಹೊಸಗನ್ನಡವನ್ನು ಬಳಸುವ ಪ್ರಯತ್ನ ನಿರ್ಣಾಯಕ ಹೆಜ್ಜೆಯಾದರೂ ದುರಂತ ನಾಟಕಗಳನ್ನು ಭಾಷಾಂತರಿಸುವಾಗ ಯಾಕಾಗಿ ಆಧುನಿಕ ಪೂರ್ವ ಎನ್ನಬಹುದಾದ ಭಾಷೆಯನ್ನು ಬಳಸಿದರು. ಸಂಪೂರ್ಣ ಆಧುನಿಕ ಪೂರ್ವವೂ ಆಗಿರದೆ ಅಲ್ಲಲ್ಲಿ ಹೊಸಗನ್ನಡವನ್ನು ಬಳಸಿದ್ದುಂಟು. ಈ ರೀತಿ ನಾಟಕ ಪ್ರಕಾರಕ್ಕೆ ಒಂದು ಭಾಷಾಸ್ವರೂಪ, ಕವಿತೆಗಳಿಗೆ ಬೇರೊಂದು ಭಾಷಾಸ್ವರೂಪ ಅಗತ್ಯವಿತ್ತೆ? ಲಿಪಿಯನ್ನು ಪ್ರಮಾಣೀಕರಿಸುವ ಪ್ರಯತ್ನದಲ್ಲಿ ಇವರ 'ಕನ್ನಡ ಬಾವುಟ'ವನ್ನು ಗಮನಿಸಬಹುದು (ನೋಡಿ ಕನ್ನಡ ಬಾವುಟ, ೧೯೩೮).

೨. ಇಂಗ್ಲಿಷ್ ಕವಿತೆಗಳನ್ನು ಕನ್ನಡೀಕರಿಸಲು ಎಸ್.ಜಿ. ನರಸಿಂಹಾಚಾರ್, ಪಂಜೆ ಮಂಗೇಶರಾಯ ಮತ್ತು ಹಟ್ಟಿಯಂಗಡಿ ನಾರಾಯಣರಾಯರು ಪ್ರಯತ್ನಿಸಿದ್ದಾರೆ. ನರಸಿಂಹಾಚಾರ್ ಮತ್ತು ಪಂಜೆಯವರ ಕವನ ಅಲ್ಲಲ್ಲಿದ್ದರೆ, ಹಟ್ಟಿಯಂಗಡಿ ನಾರಾಯಣರಾಯರು ಮಾತ್ರ 'ಆಂಗ್ಲಕವಿತಾವಳಿ' (೧೯೧೮) ಎಂಬ ಭಾಷಾಂತರ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಆದರೆ ಬಿ.ಎಂ.ಶ್ರೀಯವರ ಸಂಕಲನದಂತೆ ಈ ಸಂಕಲನ ಗುರುತುಗೊಳ್ಳಲಿಲ್ಲ. ಈ ಸಾಹಿತ್ಯಕ ಅಥವಾ 'ಭಾಷಾಂತರ ಸಾಹಿತ್ಯ'ದ ಸೋಲಿಗೆ ಒಂದೆಡೆ ಕವನದ ಭಾಷೆ, ಛಂದಸ್ಸು, ಲಯಗಳು ಕಾರಣವಾದರೆ ಇನ್ನೊಂದೆಡೆ ನಾರಾಯಣರಾಯರು ಬಿ.ಎಂ.ಶ್ರೀಯವರಂತೆ ಜನಪ್ರಿಯ ವ್ಯಕ್ತಿತ್ವವನ್ನು, ಅಪಾರ ಸಂಖ್ಯೆಯ ಶಿಷ್ಯಮಂಡಳಿಯನ್ನು ಹೊಂದದೆ ಇರುವುದು ಸಹ ಕಾರಣವಾಗಿರಬಹುದು.



# ಅಧ್ಯಾಯ-೨

## ಮಿಶನರಿಗಳ ಭಾಷಾಂತರ ಚಟುವಟಿಕೆ

೨.೧. ಕ್ರೈಸ್ತ ಧಾರ್ಮಿಕ ಭಾಷಾಂತರ (ಕನ್ನಡದಲ್ಲಿ ಬೈಬಲ್)

೨.೧.೧. ಬೈಬಲ್‌ಗಳ ಪುನರ್‌ಲೇಖಗಳು

೨.೧.೨. ಪತ್ರಿಕೆಗಳಲ್ಲಿ ಬೈಬಲ್ ಭಾಷಾಂತರಗಳು

೨.೨. ಕ್ರೈಸ್ತೇತರ ಧಾರ್ಮಿಕ ಭಾಷಾಂತರ

## ಮಿಶನರಿಗಳ ಭಾಷಾಂತರ ಚಟುವಟಿಕೆ

ಆಧುನಿಕ ಸಂದರ್ಭದಲ್ಲಿನ ಭಾಷಾಂತರದ ಪರಿಶ್ರಮಿಗಳಲ್ಲಿ ಮಿಶನರಿಗಳು ಮುಖ್ಯರಾದವರು. ೧೮೦೯-೧೮೧೨ ಸುಮಾರಿಗೆ ಲಂಡನ್ ಮಿಶನ್, ವೆಸ್ಲಿಯನ್ (ಮೆಥಾಡಿಸ್ಟ್) ಮಿಶನ್ ಹಾಗೂ ಬಾಸೆಲ್ (ಇವ್ಯಾಂಜಕಲ್) ಮಿಶನ್ ಈ ಮೂರು ಪ್ರೊಟೆಸ್ಟೆಂಟ್ ಸಂಸ್ಥೆಯವರು ಕರ್ನಾಟಕದಲ್ಲಿ ಶೈಕ್ಷಣಿಕ, ಸಾಹಿತ್ಯಕ ಚಟುವಟಿಕೆಯಲ್ಲಿ ವಿಶೇಷವಾಗಿ ತೊಡಗಿಕೊಂಡಿದ್ದರೆಂದು ಹಾವನೂರ ಅವರು ಅಭಿಪ್ರಾಯಪಡುತ್ತಾರೆ. ಆದರೆ ಈ ಶೈಕ್ಷಣಿಕ ಮತ್ತು ಸಾಹಿತ್ಯಿಕ ಚಟುವಟಿಕೆಗಳು ಭಾಷಾಂತರದಿಂದಲೇ ರೂಪುಗೊಂಡಿತ್ತು ಎಂಬುದು ಗಮನಿಸಬೇಕಾದ ಸಂಗತಿ. ''ಮಿಶನರಿ ಜನರ ಆಗಮನದ ಮುಖ್ಯ ಉದ್ದೇಶ ಕ್ರೈಸ್ತಮತ ಪ್ರಸಾರ ಮತ್ತು ಮತಾಂತರ. ಇದನ್ನು ಸಾಧಿಸುವುದು ಸುಲಭವಾಗಿರಲಿಲ್ಲ. ಆದ್ದರಿಂದ ಅವರು ಜನರ ಮನಸ್ಸನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಉದ್ದೇಶದಿಂದ ಬೇರೆ ಮಾರ್ಗಗಳನ್ನು ಅನುಸರಿಸಬೇಕಾಯಿತು. ವಿಶೇಷತಃ ಪ್ರೊಟೆಸ್ಟೆಂಟ್‌ರಿಗೆ ಮನವರಿಕೆಯಾಗಿದ್ದ ಒಂದು ವಿಷಯವೆಂದರೆ ಸಾಮಾನ್ಯ ಜನರಿಗೆ ಶಿಕ್ಷಣವನ್ನು ಕೊಟ್ಟಿದ್ದಾದರೆ ಕ್ರೈಸ್ತ ವಿಚಾರಗಳನ್ನು ಅವರಿಗೆ ಮನದಟ್ಟಾಗಿ ಹೇಳಬಹುದೆಂಬುದು'' (ಹಾವನೂರ ೧೯೯೧, ಪು.೧೯೪). ಇದರಿಂದಾಗಿ ಶಿಕ್ಷಣಕ್ಕೆ ವಿಶೇಷ ಗಮನ ನೀಡಿದರು. ಜೊತೆಗೆ ಬೈಬಲ್ ಮತ್ತಿತರ ಧಾರ್ಮಿಕ ಕೃತಿಗಳನ್ನು ಕನ್ನಡಕ್ಕೆ ತರುವ ಕಾರ್ಯವನ್ನು ಆರಂಭಿಸಿದರು.

ಇದರ ಪರಿಣಾಮವಾಗಿ ಕನ್ನಡ ಸಾಹಿತ್ಯದಲ್ಲಿ ''ಮಿಶನರಿಗಳು ತಮ್ಮ ಧರ್ಮದ ಕುರಿತು ಸಾಹಿತ್ಯ ರಚಿಸಿದರು; ಭಾಷಾಂತರ ಕೈಗೊಂಡರು'' ಎಂಬ ಅಭಿಪ್ರಾಯವು ವಿಶೇಷ ಮನ್ನಣೆ ಪಡೆಯಿತು ಅಥವಾ ಹೆಚ್ಚು ಪ್ರಚಲಿತವಾಯಿತು. ಆದರೆ ಇದಕ್ಕೆ ಹೊರತಾದ ಹಲವು ಸಂಗತಿಗಳು ಇನ್ನೂ ಇವೆ. ಅದೇನೆಂದರೆ, ಮಿಶನರಿಗಳು ತಮ್ಮ ಧರ್ಮಗಳ ಕುರಿತಾದ ಸಾಹಿತ್ಯ ರಚನೆ ಮತ್ತು ಭಾಷಾಂತರಗಳೊಂದಿಗೆ ಇತರ ಧರ್ಮಗಳಿಗೆ ಸಂಬಂಧಿಸಿದ ಸಾಹಿತ್ಯವನ್ನು ಸಂಪಾದಿಸುವ, ಸಂಕಲಿಸುವ ಹಾಗೂ ಭಾಷಾಂತರಿಸುವ ಕಾಯಕವನ್ನು ಕೈಗೊಂಡಿದ್ದಾರೆ. ಇದನ್ನು ಹಾವನೂರರು ಹೀಗೆ ಸೂಚಿಸುತ್ತಾರೆ. ''ಅವರ ಯಾವುದೇ ಸಾಹಿತ್ಯ ಚಟುವಟಿಕೆಗಳಿಗೆ ಕ್ರೈಸ್ತಮತ ಪ್ರಸಾರವೇ ಪ್ರೇರಕವಾಗಿದ್ದರೂ ಯಾವುದೊಂದು ವಿಷಯವನ್ನು ಆಳವಾಗಿ ಅಭ್ಯಸಿಸಿ ಆ ಕುರಿತು ಗ್ರಂಥರಚನೆ ಮಾಡಿದಾಗ ಮತೀಯ ದೃಷ್ಟಿಯು ಹಿಂದುಳಿದು ಆ ಕೃತಿಯಲ್ಲಿ ಸರ್ವಜನ ಗ್ರಾಹ್ಯವಾದ ಸಂದರ್ಭಗಳು ಸಾಕಷ್ಟು ಕಂಡುಬರುತ್ತದೆ'' (ಹಾವನೂರ

೧೯೯೧ ಪು.೧೯೪). ಈ ವಿಚಾರವು ಧರ್ಮದ ತಳಹದಿಯಿಂದ ಮಿಶನರಿಗಳ ಭಾಷಾಂತರ ಪ್ರಕ್ರಿಯೆ ಆರಂಭಗೊಂಡರೂ ನಂತರದಲ್ಲಿ ಅದನ್ನು ಮೀರಿ ಬೆಳೆದಿದ್ದೇ ಹೆಚ್ಚು ಎಂಬುದನ್ನು ಸಮರ್ಥಿಸುತ್ತದೆ.

ಈ ಹಿನ್ನಲೆಯಲ್ಲಿ ಮಿಶನರಿಗಳ ಭಾಷಾಂತರ ಚಟುವಟಿಕೆಯನ್ನು 'ಕ್ರೈಸ್ತ ಧಾರ್ಮಿಕ ಭಾಷಾಂತರ' ಮತ್ತು 'ಕ್ರೈಸ್ತೇತರ ಧಾರ್ಮಿಕ ಭಾಷಾಂತರ' ಎಂಬ ಎರಡು ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಬ್ರಿಟೀಶ್ ವಸಾಹತುಶಾಹಿಯ ಒಂದು ಪ್ರಮುಖ ಭಾಗ ಕ್ರೈಸ್ತ ಮಿಶನರಿಗಳು. ಯುರೋಪಿನ ರಾಜಕೀಯ ವ್ಯವಸ್ಥೆಯಲ್ಲಿ ಪ್ರಭಾವಿಯಾಗಿದ್ದ ಚರ್ಚುಗಳು ತಮ್ಮ ಕಾರ್ಯ ವಿಸ್ತರಣೆಯ ಭಾಗವಾಗಿ ಮಿಶನರಿಗಳನ್ನು ರೂಪಿಸಿದವು. ಇದರಿಂದಾಗಿ ಬ್ರಿಟೀಶ್ ವಸಾಹತುಗಳಾಗಿರುವ ಬಹುತೇಕ ಪ್ರದೇಶಗಳಲ್ಲಿ ಭಾರತಕ್ಕೆ ಬಂದಂತಹ ಮಿಶನರಿಗಳ ಉದ್ದೇಶವು ಧರ್ಮ ಪ್ರಸಾರ ಮತ್ತು ಪ್ರಚಾರವಾಗಿತ್ತು. ಈ ಕಾರ್ಯ ಚಟುವಟಿಕೆಗಳೊಂದಿಗೆ ಮಿಶನರಿಗಳು ಕೈಗೊಂಡ ಇತರ ಚಟುವಟಿಕೆಗಳು ವಸಾಹತು ಪ್ರದೇಶಗಳಲ್ಲಿ ಆಧುನಿಕತೆಯ ಎಚ್ಚರ ಮತ್ತು ಪರಂಪರೆಯ ಪ್ರಜ್ಞೆಯನ್ನು ಮೂಡಿಸುವಂತಾಯಿತು. ಹೀಗೆ ಕನ್ನಡದ ಪ್ರದೇಶಗಳಲ್ಲಿ ಅಸ್ತಿತ್ವಕ್ಕೆ ಬಂದಿರುವ ಮಿಶನರಿಗಳ ಭಾಷಾಂತರ ಚಟುವಟಿಕೆಗಳು ಹಾಗೂ ಅದರ ಪರಿಣಾಮಗಳೇನು ಎಂಬುದನ್ನು ಈ ಕೆಳಗಿನಂತೆ ಗ್ರಹಿಸಿಕೊಳ್ಳಬಹುದಾಗಿದೆ.

### ೨.೧. ಕ್ರೈಸ್ತ ಧಾರ್ಮಿಕ ಭಾಷಾಂತರ (ಕನ್ನಡದಲ್ಲಿ ಬೈಬಲ್)

ಆಧುನಿಕ ಕನ್ನಡದ ಸಂದರ್ಭದಲ್ಲಿ ಭಾಷಾಂತರ ಚಟುವಟಿಕೆಯು ನಿರ್ದಿಷ್ಟವಾಗಿ ಆರಂಭವಾಗಿರುವುದೇ ಧಾರ್ಮಿಕ ಕೃತಿಗಳಿಂದ. ಈ ಮಾತು ಭಾರತೀಯ ಇತರ ಭಾಷೆಗಳ ಸಂದರ್ಭದಲ್ಲಿಯೂ ನಿಜವಾಗಿದೆ. ೧೮ನೇ ಶತಮಾನದ ಕೊನೆಯ ದಶಕ ಅಥವಾ ೧೯ನೇ ಶತಮಾನದ ಆರಂಭದಲ್ಲಿ ಮೊದಲ ಬಾರಿಗೆ ಭಾಷಾಂತರ ಚಟುವಟಿಕೆಯನ್ನು ಪ್ರಾರಂಭಿಸಿದವರು ಮಿಶನರಿಯ ಪಾದ್ರಿಗಳು ಮತ್ತು ಕ್ರೈಸ್ತ ಅಧಿಕಾರಿಗಳು. ಇಂತಹ ಸಂದರ್ಭದಲ್ಲಿ ವಸಾಹತುಶಾಹಿಯ ಜೊತೆ ಜೊತೆಗೆ ಮಿಶನರಿಗಳೂ ತಮ್ಮ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡವು. ಇದು ಒಂದು ರೀತಿಯಿಂದ ಸಾಮ್ರಾಜ್ಯಶಾಹಿಯಷ್ಟೆ ಪ್ರಬಲವಾಗಿದೆ.

ಮಿಶನರಿಗಳು ಚರ್ಚುಗಳನ್ನು ಕೇಂದ್ರವಾಗಿರಿಸಿಕೊಂಡು ಭಾರತಕ್ಕೂ ಕರ್ನಾಟಕಕ್ಕೂ ಬಂದಿರುವ ಉದ್ದೇಶವೇ ಧರ್ಮ ಪ್ರಸಾರ ಮತ್ತು ಮತಾಂತರಕ್ಕೆ. ಮೂಲಭೂತವಾಗಿ ಯಾವುದೇ ಒಂದು ಧರ್ಮದ ಪ್ರಸಾರ ಬರಿಗೈಯಿಂದ ಸಾಧ್ಯವಿಲ್ಲ. ಹೀಗಾಗಿ ಧರ್ಮಪ್ರಸಾರದ ಮೂಲ ವಸ್ತುವೂ ಪರಿಕರವು ಆಗಿರುವ ಧಾರ್ಮಿಕ ಕೃತಿಗಳ ಭಾಷಾಂತರವು ನೇರ ಭಾಷಾಂತರ ಮತ್ತು ಪುನರ್‌ಲೇಖಗಳೆರಡೂ ಮಾದರಿಗಳಲ್ಲಿ ಆರಂಭಗೊಂಡವು. ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಬೈಬಲ್ ಮತ್ತು ಇತರ ಧಾರ್ಮಿಕ ಕೃತಿಗಳು ಲ್ಯಾಟಿನ್ ಮತ್ತು ಇಂಗ್ಲಿಷಿನಲ್ಲಿರುವುದರಿಂದ ದೇಶೀಯರಿಗೆ ಅವುಗಳು ಪರಿಚಯವಾಗಬೇಕಾದರೆ ಅವರದೇ ಆದ ದೇಶೀಯ ಭಾಷೆಗಳಲ್ಲಿ ಭಾಷಾಂತರಿಸುವುದು ಅನಿವಾರ್ಯವಾಗಿತ್ತು. ಇದರಿಂದಾಗಿ ಮಿಶನರಿಗಳು ಚಳುವಳಿಯ ಸ್ವರೂಪದಲ್ಲಿ ಧಾರ್ಮಿಕ ಕೃತಿಗಳ ಭಾಷಾಂತರವನ್ನು ಕೈಗೊಂಡರು.

ಯುರೋಪಿನಲ್ಲಿ ಬೈಬಲ್ ಭಾಷಾಂತರ ಕ್ರಾಂತಿಕಾರಿ ಧೋರಣೆಗಳಿಗೆ ಸಹ ಕಾರಣವಾಗಿತ್ತು. ಬೈಬಲ್‌ನ್ನು ಏಕೆ ಭಾಷಾಂತರಿಸಬೇಕು ಎಂಬುದರೊಂದಿಗೆ ಯಾರಿಗಾಗಿ ಮತ್ತು ಯಾವೆಲ್ಲ ಸ್ವರೂಪದಲ್ಲಿ ಭಾಷಾಂತರಿಸಬೇಕೆಂಬುದನ್ನು ಮನಗಂಡಿದ್ದರು. ಯುರೋಪಿನಲ್ಲಿ ನಡೆದ ಬೈಬಲ್ ಭಾಷಾಂತರದ ಬಗ್ಗೆ ಸೂಸನ್ ಬಾಸ್‌ನೆಟ್ ಅವರ

ಅಭಿಪ್ರಾಯಗಳನ್ನು ಒಂದೆಡೆ ತರುವುದಾದರೆ, ಪಶ್ಚಿಮದಲ್ಲಿ ಬೈಬಲ್ ಭಾಷಾಂತರವು ಭಾಷಾಂತರದ ವಾಗ್ವಾದಗಳಿಗೆ ದಾರಿಮಾಡಿಕೊಟ್ಟಿದೆ. ಕ್ರಿ.ಶ. ೩೮೪ರಲ್ಲಿ ಸಂತ ಜಿರೋಮ್ ಭಾಷಾಂತರಿಸುವುದೆ ಮೊದಲ ಬೈಬಲ್ ಭಾಷಾಂತರವಾಗಿದೆ. ಆ ನಂತರದಲ್ಲಿ ಬೈಬಲ್‌ನ್ನು ಪದಶಃ 'ಭಾಷಾಂತರ' ಮಾಡಬೇಕೆ 'ಭಾವಾನುವಾದ' ಮಾಡಬೇಕೆ ಎಂಬ ಚರ್ಚೆಗಳು ಆರಂಭಗೊಂಡು ಚುರುಕಾದವು. ಯುರೋಪ್‌ಖಂಡ ಪುನರುಜ್ಜೀವನದಿಂದ ಬೇರೆ ಬೇರೆ ಭಾಷೆಗಳಲ್ಲಿ ಬೈಬಲ್ ಭಾಷಾಂತರ ಅನಿವಾರ್ಯವೆನಿಸಿಕೊಂಡಿತು. ಧಾರ್ಮಿಕ ಕೃತಿಯಾದ ಬೈಬಲ್ ಸಂಕೀರ್ಣ ಪಠ್ಯವಾದ್ದರಿಂದ ಧರ್ಮ ಪ್ರಸಾರದ ಹಿನ್ನೆಲೆಯಲ್ಲಿ ಅದು ಎಲ್ಲರಿಗೂ ತಲುಪುದು ಅತ್ಯಗತ್ಯವಾಗಿತ್ತು. ಬಾಸನೆಟ್ ೧೬ನೇ ಶತಮಾನದ ಬೈಬಲ್ ಭಾಷಾಂತರಗಳ ಉದ್ದೇಶವನ್ನು ಸ್ಥೂಲವಾಗಿ ಮೂರು ವರ್ಗಗಳಾಗಿ ವಿಂಗಡಿಸುತ್ತಾರೆ.

೧. ಮೂಲಭಾಷೆಯ ಹಸ್ತಪ್ರತಿಯ ತೊಂದರೆಗಳಿಂದಾಗಿ ಅಥವಾ ಭಾಷಿಕ ಅಸಾಮರ್ಥ್ಯರಿಂದಾಗಿ ಹಳೆಯ ಆವೃತ್ತಿಗಳಲ್ಲಿ ಉಂಟಾಗಿರುವ ಓರೆಕೋರೆಗಳನ್ನು ತಿದ್ದುವುದು.

೨. ಎಲ್ಲರಿಗೂ ಸುಲಭ ಗ್ರಾಹ್ಯವಾಗಬಲ್ಲ ಮತ್ತು ಸೌಂದರ್ಯಾತ್ಮಕವಾಗಿ ತೃಪ್ತಿ ನೀಡಬಲ್ಲ ಶೈಲಿಯಲ್ಲಿ ಭಾಷಾಂತರ ಮಾಡುವುದು.

೩. ಧಾರ್ಮಿಕ ಗ್ರಂಥವನ್ನು ಒಂದು ಉಚ್ಚಪಠ್ಯವನ್ನಾಗಿಸಿ (Metatext) ಅದನ್ನು ಜನಸಾಮಾನ್ಯರಿಗೆ ಧಾರ್ಮಿಕ ಗುರುಗಳು ವ್ಯಾಖ್ಯಾನಿಸುವ ಮತ್ತು ಮರುರೂಪಿಸುವ ಮಟ್ಟಕ್ಕೆ ಅದರಲ್ಲಿರುವ ಅಗಮ್ಯ ಮೂಢತೆಗಳನ್ನು ಕಡಿಮೆ ಮಾಡುವುದು (ಉದ್ಧೃತ, ತಾರಕೇಶ್ವರ, ೨೦೦೧, ಪು.೧೧).

ಹೀಗೆ ಪಶ್ಚಿಮದಲ್ಲಿ ಬೈಬಲ್ ಭಾಷಾಂತರ ಬೇಕೆ ಬೇಡವೆ ಎಂಬುದು ಮುಗಿದ ಚರ್ಚೆಯಾಗಿದ್ದರಿಂದ ಪಶ್ಚಿಮದಲ್ಲಿ ಭಿನ್ನಮಾದರಿಯ ಭಾಷಾಂತರಗಳು ಬಂದಿದ್ದಲ್ಲದೆ ಈ ಚರ್ಚೆ ಸುಮಾರು ೧೭ನೇ ಶತಮಾನದ ವೇಳೆಗೆ ಕೊನೆಗೊಂಡಿತು. ಆದರೆ ಕನ್ನಡದಲ್ಲಿ ಬೈಬಲ್‌ನ್ನು ರೂಪಿಸಿಕೊಳ್ಳುವಾದ ಈ ಚರ್ಚೆಯನ್ನು ಮತ್ತೆ ಪ್ರಾರಂಭಿಸಲಾಯಿತು. ಧಾರ್ಮಿಕ ಪಠ್ಯವೊಂದರ ಕುರಿತಿರುವ ಮೂಲನಿಷ್ಠ ಭಾವ ಮತ್ತು ಪವಿತ್ರತೆಯ ಪರಿಕಲ್ಪನೆಯಿಂದ ಯಾವ ಮಾದರಿಯಲ್ಲಿ ಬೈಬಲ್‌ನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳಬೇಕು ಎಂಬುವ ಪ್ರಶ್ನೆ ಎದುರಿಗಿತ್ತು. ಹೀಗಾಗಿ ಬೈಬಲ್‌ಗಳ ನೇರ ಭಾಷಾಂತರ, ಪುನರ್‌ಲೇಖಗಳ ಮಾದರಿಯನ್ನು ಹಲವರು ಅನುಸರಿಸಿದರು. ಆದ್ದರಿಂದ ಬೈಬಲ್ ಭಾಷಾಂತರ ಪ್ರಕ್ರಿಯೆ ಆರಂಭಗೊಳ್ಳುವ ಹೊತ್ತಿಗೆ ಕನ್ನಡದಲ್ಲಿ ಹುಟ್ಟಿಕೊಂಡ ಭಾಷಾಂತರ ಚರ್ಚೆ ವಿಭಿನ್ನ ಆಯಾಮ ಪಡೆದುಕೊಂಡಿತು. ಅಂದರೆ ಕನ್ನಡದಲ್ಲಿ ನಡೆದ ಬೈಬಲ್ ಭಾಷಾಂತರಗಳ ಸಂದರ್ಭದಲ್ಲಿ ಬೈಬಲ್ ಭಾಷಾಂತರ ಬೇಕೆ, ಬೇಡವೆ ಎಂಬ ಚರ್ಚೆಗೆ ಬದಲಾಗಿ ಕನ್ನಡದ ಸಂದರ್ಭದಲ್ಲಿ ಯಾವ ಬಗೆಯಲ್ಲಿ ಬೈಬಲ್ ಭಾಷಾಂತರಮಾಡಬೇಕು ಎಂಬ ಚರ್ಚೆ ಮುಂಚೂಣಿಗೆ ಬಂತು. ಈ ಚರ್ಚೆ ಕನ್ನಡ ಭಾಷಾಂತರ ಪ್ರಕ್ರಿಯೆಯ ಸಂದರ್ಭದಲ್ಲಿ ಬಹುಮುಖ್ಯವಾದ ಘಟ್ಟವಾಗಿದೆ.

ಕನ್ನಡದಲ್ಲಿ ಬಂದಿರುವ ಬೈಬಲ್ ಭಾಷಾಂತರಗಳು ಬಹುಸಂಖ್ಯೆಯಲ್ಲಿವೆ. ಈ ಭಾಷಾಂತರಗೊಂಡ ಬೈಬಲ್‌ನ್ನು ಅಧ್ಯಯನದ ಅನುಕೂಲಕ್ಕೆ ಭಾಷಾಂತರದ ಪ್ರಗತಿಯ ಹಿನ್ನೆಲೆಯಲ್ಲಿ ಹಾವನೂರ ಅವರು ಮೂರು ಘಟ್ಟಗಳಲ್ಲಿ

ವಿಂಗಡಿಸಿಕೊಂಡಿದ್ದಾರೆ. ಇವರಂತೆ ವರದರಾಜ ಹುಯಲಗೋಳ ಸಹ ಬೇರೆ ರೀತಿಯಲ್ಲಿ ಬೈಬಲ್‌ಗಳ ಭಾಷಾಂತರವನ್ನು ವಿಂಗಡಿಸಿಕೊಂಡಿರುವರು. ಇವರಿಬ್ಬರೂ ಮಾಡಿದ ವಿಂಗಡಣೆಗಳು ಈ ಕೆಳಗಿನಂತಿವೆ.

**ಹಾವನೂರರು ಮಾಡಿದ ಭಾಷಾಂತರಗೊಂಡ ಬೈಬಲ್‌ಗಳ ವಿಂಗಡಣೆ.**

೧. ಕ್ರಿ.ಶ.೧೮೧೧ ರಿಂದ ೧೮೨೭ರ ವರೆಗಿನ ಅವಧಿಯಲ್ಲಿ ಬೈಬಲ್‌ನ ಸಮಗ್ರ ಅನುವಾದವು ಮುಗಿದು ೧೮೩೧ರಲ್ಲಿ ಅದರ ಮುದ್ರಣ ಪೂರ್ಣಗೊಂಡುದು.

೨. ಕ್ರಿ.ಶ ೧೮೪೩ ರಿಂದ ೧೮೫೯ರ ವರೆಗೆ ಅದರ ಪರಿಷ್ಕರಣ, ನವೀಕರಣಗಳು ನಡೆದು ಎಲ್ಲಾ ಪ್ರೊಟೆಸ್ಟೆಂಟರಿಗೂ ಮಾನ್ಯವಾದ ಆವೃತ್ತಿಯು (೧೮೬೫) ಮುದ್ರಣವಾದುದು.

೩. ಕ್ರಿ.ಶ ೧೯೫೨ರ ಸುಮಾರಿಗೆ ಇನ್ನೊಮ್ಮೆ ಅದರ ನವೀಕರಣ ಪ್ರಯತ್ನ ನಡೆದು ನವ ನಿರ್ಧಾರದ ಹೊಸ ಆವೃತ್ತಿಯು ತಯಾರಾದುದು (ಹಾವನೂರ, ೨೦೦೦, ಪು.೪೩೩).

**ವರದರಾಜ ಹುಯಲಗೋಳ ಅವರು ಹಾವನೂರ ಮಾಡಿಕೊಂಡ ಭಾಷಾಂತರ ಬೈಬಲ್‌ಗಳ ವಿಂಗಡಣೆಯನ್ನು ಸ್ವಲ್ಪ ಬದಲಿಸಿ, ಅವಧಿಯನ್ನು ಹಿಂದೆ ಮುಂದೆ ಮಾಡಿಕೊಂಡಿದ್ದಾರೆ.**

೧. ೧೮೦೪-೧೮೫೦ ಪ್ರಾರಂಭದ ಕಾಲ.

೨. ೧೮೫೦-೧೯೮೦ ಪರಿಷ್ಕರಣದ ಕಾಲ.

೩. ೧೯೮೦-೧೯೩೪ ನಿಶ್ಚಿತ ಸ್ವರೂಪದ ಕಾಲ.

ಇಲ್ಲಿ ಇಬ್ಬರೂ ಬೈಬಲ್ ಭಾಷಾಂತರವನ್ನು ಕಾಲಮಾನದ ಹಿನ್ನೆಲೆಯಲ್ಲಿ ವಿಂಗಡಿಸಿದ್ದಾರೆ. ಕಾಲ ಕೇಂದ್ರಿತವಾದ ಹಿನ್ನೆಲೆಯಲ್ಲಿ ಇವುಗಳನ್ನು ವಿಂಗಡಿಸುವುದು ಕಷ್ಟದ ಸಂಗತಿ ಆದರೂ ಸರಿಸುಮಾರಾಗಿ ಹೀಗೆ ವಿಂಗಡಿಸಲು ಪ್ರಯತ್ನಿಸಬಹುದು.

ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಬೈಬಲ್‌ನ್ನು ಭಾಷಾಂತರದ ನೆಲೆಯಿಂದ ವಿಂಗಡಿಸಿಕೊಳ್ಳಲಾಗಿದೆ.

**I . ವ್ಯಕ್ತಿಗತ ಪ್ರಯತ್ನಗಳು**

**II. ಸಾಂಸ್ಥಿಕ ಪ್ರಯತ್ನಗಳು**

**ಅ. ಮೂಲನಿಷ್ಠತೆಯ ನೆಲೆಯಿಂದ**

**ಆ. ಉದ್ದಿಷ್ಟ ಭಾಷೆಯ ನೆಲೆಯಿಂದ**

**I . ವ್ಯಕ್ತಿಗತ ಪ್ರಯತ್ನಗಳು:** ೧೮೦೯ರಲ್ಲಿ ರೆವರೆಂಡ್ ವಿಲಿಯಂ ಕ್ಯಾರಿಯಿಂದ ಬೈಬಲ್ ಕನ್ನಡಕ್ಕೆ ಭಾಷಾಂತರಗೊಂಡರೂ ೧೮೧೨ರಲ್ಲಿ ಶ್ರೀರಾಮಪುರದ ಮುದ್ರಣಾಲಯಕ್ಕೆ ಬೆಂಕಿ ಹತ್ತಿದ್ದರಿಂದ ಅದು ಸುಟ್ಟುಹೋಯಿತು. ನಂತರ ಅದು ಪುನಃ ೧೮೨೧ರಲ್ಲಿ ಪ್ರಕಟವಾಯಿತು. ಕ್ಯಾರಿಯ ಬೈಬಲ್ ಹೊಸಗನ್ನಡದ ಮೊದಲನೇ ಗದ್ಯಗ್ರಂಥವೆಂದು ಹೇಳಬೇಕಾಗುತ್ತದೆ ಎಂದು ಮುಗಳಿಯವರು ಅಭಿಪ್ರಾಯಪಡುತ್ತಾರೆ (ರಂ.ಶ್ರೀ

ಮುಗಳಿ, ೧೯೬೨, ಪು. ೧೯೧).ಲಂಡನ್ ಮಿಶನರಿಗೆ ಸೇರಿದ ಜಾನ್‌ಹ್ಯಾಂಡ್ಸ್ ಬಳ್ಳಾರಿಯಲ್ಲಿ ಬೈಬಲ್ ಭಾಷಾಂತರದ ಕಾರ್ಯವನ್ನು ಆರಂಭಿಸಿದನು. ಈತ ಸುಮಾರು ಹದಿನಾರು ವರ್ಷಗಳ ಪ್ರಯತ್ನದಿಂದ ೧೮೨೭ರ ಮೊದಲಿಗೆ ಹಳೆಯ ಒಡಂಬಡಿಕೆಯನ್ನು ಭಾಷಾಂತರಿಸುವಲ್ಲಿ ಸಫಲನಾದನು. ಈ ಹಳೆಯ ಒಡಂಬಡಿಕೆಯಲ್ಲಿ ಕೆಥೋಲಿಕ್ ಮತದ ಬಗ್ಗೆ ವಿಚಾರವಿದೆ. ಆದರೆ ಪ್ರೊಟೆಸ್ಟೆಂಟನಾದ ಜಾನ್ ಮೊದಲ ಸಾರಿ ಹಳೆಯ ಒಡಂಬಡಿಕೆಯನ್ನು ಕನ್ನಡಕ್ಕೆ ತಂದಿರುವುದು ಗಮನಾರ್ಹವೆಂದು ಹಾವನೂರರು ಅಭಿಪ್ರಾಯಪಟ್ಟಿದ್ದಾರೆ.

ಕ್ರೈಸ್ತರಲ್ಲಿ ಮೊದಲಿಗೆ ಇದ್ದದ್ದು ಕೆಥೋಲಿಕ್ ಪಂಥ ಮಾತ್ರ. ಯುರೋಪಿನ ಕ್ರಾಂತಿ ಹಾಗೂ ಇತರ ಸಾಮಾಜಿಕ ಕ್ರಾಂತಿಯಿಂದ ಹಲವು ಕೆಥೋಲಿಕ್‌ರು ಮೂಲಧರ್ಮದ ವಿರುದ್ಧ ಸಿಡಿದು ಬಂದರು. ಇವರೆಲ್ಲ ಮಾರ್ಟಿನ್ ಲೂಥರ್ ಕಿಂಗ್ ನೇತೃತ್ವದಲ್ಲಿ ಕೆಥೋಲಿಕ್ ಧರ್ಮಸಭೆಯಿಂದ ಬೇರ್ಪಟ್ಟು ಪ್ರೊಟೆಸ್ಟೆಂಟರು ಎನಿಸಿಕೊಂಡರು. ೧೬ನೇ ಶತಮಾನದ ನಂತರ ಕೆಥೋಲಿಕ್ ಧರ್ಮ ಪಂಥ ಈ ರೀತಿ ಒಡೆದು ಪ್ರೊಟೆಸ್ಟೆಂಟ್ ಎಂಬ ಇನ್ನೊಂದು ಪಂಗಡವಾಯಿತು. ಇವೆರಡು ಧರ್ಮ ಪಂಥಗಳ ನಡುವೆ ತಾತ್ವಿಕವಾಗಿ ವ್ಯತ್ಯಾಸಗಳಿವೆ; ಆಚಾರ ವಿಚಾರಗಳಲ್ಲಿಯೂ ಭಿನ್ನತೆಯಿದೆ. ಕನ್ನಡದ ಸಂದರ್ಭದಲ್ಲಿ ಪ್ರೊಟೆಸ್ಟೆಂಟರು ಬೈಬಲ್‌ಗೆ ಸಂಬಂಧಿಸಿದ ವ್ಯಾಖ್ಯಾನ ವಿವರಣೆಗಳನ್ನು ಮತ್ತು ಪುನರ್‌ಲೇಖಗಳನ್ನು ಬರೆದಿದ್ದಾರೆ.

ಬಾಸೆಲ್ ಮಿಶನ್‌ನ ಮೊಗ್ಲಿಂಗ್ ಮತ್ತು ಜಿ.ಎಚ್ ವಿಗಲ್ ಇವರು ಜಾನ್‌ಹಾಂಡ್ಸ್ ಬೈಬಲ್ ಭಾಷಾಂತರಿಸಿದ ಸಂದರ್ಭದಲ್ಲಿಯೇ ಹೊಸ ಒಡಂಬಡಿಕೆಯನ್ನು ಕನ್ನಡಕ್ಕೆ ತಂದಿದ್ದರು. ಬೈಬಲ್ ಸಮಗ್ರ ಭಾಷಾಂತರವು ೧೮೩೧ರಲ್ಲಿ ಬಳ್ಳಾರಿಯಲ್ಲಿ ಪೂರ್ಣಗೊಂಡಿದೆ. ಹೀಗೆ ಸುಮಾರು ೧೮೦೦ ರಿಂದ ೧೮೫೦ರವರೆಗೆ ಬೈಬಲ್‌ನ್ನು 'ಕನ್ನಡದ್ದಾಗಿಸು'ವ ಪ್ರಯತ್ನಗಳು ವ್ಯಕ್ತಿಗತ ನೆಲೆಯಲ್ಲಿ ನಡೆದವು.

**II. ಸಾಂಸ್ಥಿಕ ಪ್ರಯತ್ನಗಳು:** ಬೈಬಲ್‌ನ್ನು ಕನ್ನಡದ್ದಾಗಿಸಿಕೊಳ್ಳಲು ಮೊದಮೊದಲು ವೈಯಕ್ತಿಕವಾಗಿ ಕೆಲವರು ಭಾಷಾಂತರ ಕೈಗೊಂಡರು. ನಂತರ ಚರ್ಚಿನ ಹಿಡಿತದಿಂದಾಗಿ ಮತ್ತು ಬೈಬಲ್ ಧಾರ್ಮಿಕ ಪಠ್ಯವಾದ್ದರಿಂದ ಅದು ಪೂಜ್ಯವಾದದು, ಶ್ರೇಷ್ಠವಾದುದು ಎಂಬ ನಿಲುವಿತ್ತು. ಹೀಗಾಗಿ ಸಾಂಸ್ಥಿಕವಾಗಿ ಬೈಬಲ್‌ನ್ನು ಕನ್ನಡದ್ದಾಗಿಸುವ ಪ್ರಯತ್ನಗಳು ಮುನ್ನೆಲೆಗೆ ಬಂದವು. ಈ ಪ್ರಯತ್ನ ಭಾಷಾಂತರ ಚಟುವಟಿಕೆಯ ಸಂದರ್ಭದಲ್ಲಿ ಗುರುತರವಾದುದು. ಕರ್ನಾಟಕದ ಎಲ್ಲಾ ಚರ್ಚುಗಳಲ್ಲಿ ಸತ್ಯವೇದವನ್ನು ಏಕಸೂತ್ರದಲ್ಲಿ ಬಳಸಬೇಕೆಂಬ ನಿಲುವೊಂದು ಮಿಶನರಿಗಳಿಂದ ಹೊರಹೊಮ್ಮಿತು. ಇದರಿಂದಾಗಿ ಒಂದು ಸಮಿತಿಯನ್ನು ರಚಿಸಿ ಅದರ ಮೂಲಕ ಬೈಬಲ್‌ನ ಪರಿಷ್ಕರಣ ನಡೆಯಬೇಕೆಂದು ತೀರ್ಮಾನಿಸಲಾಯಿತು. ಈ ಜವಾಬ್ದಾರಿಯನ್ನು ೧೮೫೦ರ ಸುಮಾರಿಗೆ ಮದ್ರಾಸ್ ಶಾಖೆಯವರು ವಹಿಸಿಕೊಂಡರು. ಹೀಗಾಗಿ ಪರಿಷ್ಕರಣಕ್ಕಾಗಿ ರಚನೆಗೊಂಡ ಸಮಿತಿಯಿಂದ ಬೈಬಲ್ ಭಾಷಾಂತರ ನಡೆದಿರುವುದು ಅದಕ್ಕೊಂದು ಖಚಿತ ಸ್ವರೂಪ ನೀಡುವಲ್ಲಿನ ಪ್ರಯತ್ನವೆಂದೇ ಹೇಳಬೇಕು. ಸಮಿತಿಗೆ ಬಾಸೆಲ್, ಲಂಡನ್ ಮತ್ತು ವಸ್ಲೆಯನ್ (ಸಂಸ್ಥೆಗಳು) ಮಿಶನರಿಗಳು ಸಹಾಯ ನೀಡಿದವು. ಇಲ್ಲಿಂದ ಬೈಬಲ್ ಭಾಷಾಂತರವನ್ನು ಪ್ರಮಾಣೀಕರಣಗೊಳಿಸುವ ಕೆಲಸ ಆರಂಭಗೊಂಡಿತೆನ್ನಬಹುದು. ಈ ಚಟುವಟಿಕೆ ಎರಡು ಬಗೆಯಲ್ಲಿ ನಡೆದಿವೆ.

**ಅ. ಮೂಲನಿಷ್ಠತೆಯ ನೆಲೆಯಿಂದ:** ಬೈಬಲ್ ಒಂದು ಧಾರ್ಮಿಕ ಪಠ್ಯವಾಗಿರುವುದರೊಂದಿಗೆ ಧರ್ಮ ಪ್ರಸಾರಕ್ಕೆ ಇದೇ ಮೂಲವಸ್ತುವಾಗಿತ್ತು. ಹೀಗಾಗಾಗಿ ಮೂಲಕ್ಕೆ ನಿಷ್ಠವಾಗಿ ಭಾಷಾಂತರ ನಡೆಯಬೇಕು ಎಂಬ ನಿಲುವು ಹಲವರದಾಗಿತ್ತು. ಬೈಬಲ್ ಪರಿಷ್ಕರಣಕ್ಕೆ ಹುಟ್ಟಿಕೊಂಡ ಸಮಿತಿಗೆ ಮುಖ್ಯಸ್ಥನಾಗಿದ್ದ ಜಿ.ಎಚ್.ವೈಗಲ್ ಬೈಬಲ್ ಯೋಗ್ಯವಾದ ರೀತಿಯಲ್ಲಿ ಕನ್ನಡಕ್ಕೆ ಭಾಷಾಂತರವಾಗಬೇಕೆಂಬ ಕಳಕಳಿಯನ್ನು ಹೊಂದಿದವನಾಗಿದ್ದನು. ಈತ ತನ್ನ ಕನ್ನಡ ಸಾಹಿತ್ಯ ಸಮೀಕ್ಷೆಯಲ್ಲಿ ತನ್ನ ಸಮಕಾಲೀನ ಕ್ರೈಸ್ತ ವಾಙ್ಮಯದ ಭಾಷಾಂತರ ರೀತಿಯನ್ನು ಟೀಕಿಸುತ್ತ. "ಇಲ್ಲಿಯ ಜನ ಕಲಿತಿದ್ದು ಅಷ್ಟಕಷ್ಟೆ ಹೇಗೆ ಬರೆದರೂ ನಡೆಯುತ್ತದೆ" (ಉದ್ಧೃತ, ಹಾವನೂರ, ೨೦೦೦, ಪು.೧೨೧). ಎಂಬ ಭಾವನೆಯಿಂದ ಭಾಷಾಂತರ ಮಾಡಿದ್ದಾರೆ ಎಂದು ಅಭಿಪ್ರಾಯ ಪಟ್ಟಿರುವರು. ಬೈಬಲ್‌ನ ನೆಪದಲ್ಲಿ ಭಾಷಾಂತರದಲ್ಲಿ ಓದುಗರ ಸ್ಥಾನಮಾನವನ್ನು ನಿರ್ಧರಿಸುವ ಕೆಲಸ ನಡೆದಿರುವುದು ಕಾಣುತ್ತದೆ. ಕಲಿತ ಜನರಿಗಾಗಿ ಭಾಷಾಂತರಿಸುವುದಕ್ಕೂ ಕಲಿಯದ ಜನರಿಗೆ ಭಾಷಾಂತರ ಮಾಡುವುದಕ್ಕೂ ವ್ಯತ್ಯಾಸವಿದೆ. ಇದನ್ನರಿತ ವೈಗಲ್ ಬೈಬಲ್ ಭಾಷಾಂತರದ ಸಂದರ್ಭದಲ್ಲಿ ಯಾವ ಬಗೆಯ ಎಚ್ಚರಿಕೆಯನ್ನು ವಹಿಸಬೇಕು ಎಂಬುದನ್ನು ಮಿಶನರಿಗಳ ಭಾಷಾಂತರ ಚಟುವಟಿಕೆಯನ್ನು ಅವಲೋಕಿಸಿ ಹೇಳಿದ್ದಾನೆ. ವೈಗಲ್ ಅಕಾಲ ಮರಣಕ್ಕೀಡಾದ್ದರಿಂದ ಆತನ ಜವಾಬ್ದಾರಿಯನ್ನು ಕ್ಯಾಂಬಲ್ ಮತ್ತು ಬೆಂಜಮಿನ್ ರೈಸ್ ಜೊತೆ ಸೇರಿ ಪೂರ್ಣಗೊಳಿಸಿದರು.

"ಕ್ರಿ.ಶ.೧೮೫೮ರಲ್ಲಿ ದಕ್ಷಿಣ ಭಾರತದ ಪ್ರೊಟೆಸ್ಟಂಟ್ ಮಿಶನರಿಗಳ ಸಮ್ಮೇಳನದಲ್ಲಿ ಬೈಬಲ್ ಅನುವಾದದ ಕುರಿತು ಪ್ರತ್ಯೇಕವಾಗಿಯೇ ಒಂದು ವಿಚಾರಗೋಷ್ಠಿ ನಡೆಯಿತು. ಅದರಲ್ಲಿ ಭಾಗವಹಿಸಿದವರ ಮುಖ್ಯ ನಿಲುವೆಂದರೆ ಬೈಬಲ್ ಅನುವಾದದಲ್ಲಿ ಭಾರತೀಕರಣ ಬೇಡವೆಂಬುದು. ಕ್ರೈಸ್ತ ಮತಕ್ಕೆ ಸೇರಿದ ದೇಶೀಯರಿಗಾಗಿಯೇ ಅನುವಾದಿತ ಬೈಬಲ್ ಇದ್ದರೂ ತಮ್ಮ ದೇವವಾಣಿಯನ್ನು ವ್ಯಕ್ತಪಡಿಸುವ ರೀತಿಯು ಮೂಲದಂತೆಯೇ ಇರಬೇಕು" (ಉದ್ಧೃತ, ಹಾವನೂರ, ೨೦೦೦, ಪು.೪೩೬) ಎಂಬುದು. ಬೈಬಲ್‌ನ್ನು ಸ್ಥಳೀಕರಣಗೊಳಿಸುವುದರಿಂದ ಅದರ ಮೂಲನಿಷ್ಠತೆ ಭ್ರಷ್ಟಗೊಳ್ಳುತ್ತದೆ ಎಂಬ ಭಯ ಮಿಶನರಿಗಳಿಗೆ ಇದ್ದಿರಬಹುದು. ಹೀಗಾಗಿಯೇ ಮೂಲದಂತೆಯೇ ಇರಲಿ ಎಂಬ ಒಕ್ಕೊರಲಿನ ಅಭಿಪ್ರಾಯ ಬಂದಿರುವ ಸಾಧ್ಯತೆಯಿದೆ. ಇದರಿಂದ ತಿಳಿಯುವುದೇನೆಂದರೆ ಬೈಬಲ್ ಭಾಷಾಂತರದ ಸಂದರ್ಭದಲ್ಲಿ ಭಾಷಾಂತರದ ವಿವಿಧ ಮಾದರಿಗಳ ಬಗೆಗೂ ಮಿಶನರಿಗಳು ಗಮನಹರಿಸಿದ್ದರು ಎಂಬುದು. ಧಾರ್ಮಿಕ ಪಠ್ಯವಾದ ಬೈಬಲ್ ಧರ್ಮಪ್ರಚಾರಕ್ಕೆ ಅಗತ್ಯವಾದರೂ ಅದು ಮೂಲಕ್ಕೆ ನಿಷ್ಠವಾಗಿರಬೇಕು. ಮತ್ತು ಯತಾರೀತಿಯಲ್ಲಿರಬೇಕು ಎಂಬುದಕ್ಕೆ ಹಲವು ಭಾಷಾಂತರಕಾರರು ಬದ್ಧರಾಗಿದ್ದರು. ಈ ಬದ್ಧತೆ ಧಾರ್ಮಿಕ ತಳಹದಿಯಿಂದ ಬಂದರೂ ಭಾಷಾಂತರ ಅಧ್ಯಯನ ಸಂದರ್ಭದಲ್ಲಿ ಗಮನಿಸಲೇಬೇಕಾದ ಸಂಗತಿಯಾಗಿದೆ.

**ಆ. ಉದ್ದಿಷ್ಟ ಭಾಷೆಯ ನೆಲೆಯಿಂದ:** ೧೮೫೦ರ ನಂತರದ ಅವಧಿಯಲ್ಲಿ ಮಿಶನರಿಗಳು ಈವರೆಗೆ ಬಂದಿರುವ ಕನ್ನಡ ಬೈಬಲ್‌ಗಳ ಭಾಷಾಂತರವನ್ನು ಅವಲೋಕಿಸಿದರು. ಆದರೆ ಈ ಭಾಷಾಂತರಗಳು ಅವರಿಗೆ ತೃಪ್ತಿಯನ್ನು ನೀಡಲು ಸಫಲವಾಗಿಲ್ಲ. ಹೀಗಾಗಿ ಇನ್ನೂ ಯಾವ ಮಾದರಿಯನ್ನು ಅನುಸರಿಸಬೇಕು. ಮತ್ತು ಹೇಗೆ ಭಾಷಾಂತರಿಸಿದರೆ ಬೈಬಲ್‌ಗಳು ದೇಶೀಯ ಜನರಿಗೆ ಹತ್ತಿರವಾಗಿರಬಹುದು ಎಂಬುದರ ಕುರಿತು ಆಲೋಚಿಸಿ ನಿರ್ದಿಷ್ಟ ರೂಪುರೇಷೆಗಳನ್ನು ಗುರುತಿಸಿಕೊಂಡು ಆ ಕುರಿತು ಪ್ರಯತ್ನಿಸಿದರು. "ಅನುವಾದ ಕಾರ್ಯ ಸುಲಭವಾಗಿರಲಿಲ್ಲ,

ಮೊದಲನೆಯದಾಗಿ ಬೈಬಲ್ ಮೂಲಗ್ರಂಥವನ್ನು ಸರಿಯಾಗಿ ಅನುಸರಿಸಬೇಕು. ಎರಡನೆಯದಾಗಿ ಉತ್ತರ ಕರ್ನಾಟಕ, ದಕ್ಷಿಣ ಕನ್ನಡ ಮತ್ತು ಮೈಸೂರು ಮೂರು ಭಾಗದಲ್ಲಿರುವ ಕನ್ನಡಿಗರಿಗೆ ಒಪ್ಪಿಗೆಯಾಗುವ ಕನ್ನಡವನ್ನು ಉಪಯೋಗಿಸಬೇಕು. ಮೂರನೆಯದಾಗಿ ವಿದ್ಯಾವಂತ, ಅವಿದ್ಯಾವಂತ ಹೀಗೆ ಎಲ್ಲರಿಗೂ ತಿಳಿಯುವ ಸರಳ ಭಾಷೆಯಿರಬೇಕು. ಇದು ೧೮೯೯ರಲ್ಲಿ ಹೆನ್ರಿ ಹೆಗನ್ ಮುಖ್ಯಸ್ಥಿತಿಯಲ್ಲಿ ನಡೆದ ಸಮಿತಿಯ ತತ್ವಗಳಾಗಿವೆ. ಇದನ್ನು ಒಪ್ಪಿಕೊಂಡು ಕಾರ್ಯಪ್ರವೃತ್ತರಾದರು'' (ಉದ್ಧೃತ, ವರದರಾಜರ ಹುಯಲಗೋಳ, ೧೯೯೧, ಪು.೩೧೪). ಎಂಬುದರಿಂದ ತಿಳಿದು ಬರುವುದೇನೆಂದರೆ ಬೈಬಲ್‌ಗಳ ಭಾಷಾಂತರ ನಿರೀಕ್ಷಿತ ಗುರಿಯನ್ನು ತಲುಪಬೇಕಾದರೆ ಉದ್ದಿಷ್ಟಭಾಷಾಗೆ ಹೊಂದುವಂತೆ ಭಾಷಾಂತರ ನಡೆಯಬೇಕು. ಹಾಗೂ ವಿವಿಧ ಓದುಗರಿಗಾಗಿ ಪ್ರತ್ಯೇಕ ಭಾಷಾಂತರಗಳು ಅಗತ್ಯ ಎಂಬುದನ್ನು ೧೮೯೦ರ ನಂತರ ಮಿಶನರಿಗಳು ತಿಳಿದುಕೊಂಡರು. ಬೈಬಲ್ ಭಾಷಾಂತರದ ಮೂಲಕ ಕನ್ನಡದಲ್ಲಿ ಗದ್ಯಪರಂಪರೆಯೊಂದು ರೂಪುಗೊಳ್ಳಲು ಈ ಮೊದಲೇ ಆರಂಭವಾಗಿತ್ತು. ಇದರ ಜೊತೆಗೆ ಪ್ರಾದೇಶಿಕವಾಗಿ ಭಿನ್ನತೆಯಿಂದ ಕೂಡಿದ ಭಾಷೆಯನ್ನು 'ಪ್ರಮಾಣೀಕರಿಸು'ವ ಪ್ರಯತ್ನಕ್ಕೆ ಬೈಬಲ್‌ಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಸಂದರ್ಭದಲ್ಲಿ ಹೆಚ್ಚಿನ ಗಮನಹರಿಸಲಾಯಿತು'. ಹೀಗಾಗಿ ೨೦ನೇ ಶತಮಾನದ ಮೊದಲ ಅವಧಿಯಲ್ಲಿ ಮುಂಚೂಣಿಗೆ ಬಂದ ಭಾಷೆಯನ್ನು ಪ್ರಮಾಣೀಕರಿಸುವ ಚಟುವಟಿಕೆಗೆ ಬೈಬಲ್ ಭಾಷಾಂತರದ ಸಂದರ್ಭದಲ್ಲಿ ಅಗತ್ಯ ಭೂಮಿಕೆಯನ್ನು ಸಿದ್ಧಗೊಳಿಸುವ ಪ್ರಯತ್ನಗಳು ನಡೆದವು.

ಈ ಕಾಲ ಘಟ್ಟದಲ್ಲಿ ಬೈಬಲ್ ಭಾಷಾಂತರಗಳು ಕೇವಲ ಇಂಗ್ಲಿಷ್ ಮತ್ತು ಲ್ಯಾಟಿನ್ ಮೂಲಗಳಿಂದ ಮಾತ್ರ ನಡೆಯದೆ ಜರ್ಮನ್ ಭಾಷೆಯಿಂದಲೂ ನಡೆದಿದೆ. ಸಿ.ಡಿ.ಬರ್ತ್ ೧೮೬೮ರಲ್ಲಿ ಕನ್ನಡಕ್ಕೆ ತಂದ ಬೈಬಲ್ ಜರ್ಮನ್ ಮೂಲದ್ದಾಗಿದೆ. ಇದರೊಂದಿಗೆ ಭಾರತೀಯ ಭಾಷೆಗಳಿಂದಲೂ ಬೈಬಲ್ ಕನ್ನಡಕ್ಕೆ ಬಂದಿವೆ. ಬೈಬಲ್‌ಗಳ ಭಾಷಾಂತರವು 'ಬೈಬಲ್ ಸಾಹಿತ್ಯದ ಭಾಷಾಂತರ'ವೆಂಬ ಹೆಸರಿನಲ್ಲಿಯೇ ನಡೆಯಿತು. ಬೆಂಜಮಿನ್ ರೈಸ್ ಕ್ರೈಸ್ತ ಮತೀಯ ಪುಸ್ತಕಗಳನ್ನು ಇಂಗ್ಲಿಷ್ ಮತ್ತು ತಮಿಳಿನಿಂದ ಕನ್ನಡಕ್ಕೆ ತರುವ ಪ್ರಯತ್ನಮಾಡಿದ್ದಾನೆ. ೧೮೩೨ರಲ್ಲಿ ಸಿ.ರೆನೈಸ್ ತಮಿಳಿನಲ್ಲಿ ಬರೆದ ಬೈಬಲ್‌ನ್ನು ಜೋನ್‌ರೀಡ್ ಕನ್ನಡಕ್ಕೆ ಭಾಷಾಂತರಿಸಿದ.

ಭಾಷಾಂತರದ ಫಲಿತ ಅಥವಾ ಪರಿಣಾಮಗಳ ಕುರಿತು ಆಲೋಚಿಸಿದವರಲ್ಲಿ ರೈಸ್‌ನೇ ಮೊದಲಿಗ. ಕ್ರೈಸ್ತ ಧಾರ್ಮಿಕ ಕೃತಿಗಳು ದೇಶಿಯರ ಬುದ್ಧಿಗೆ ಅನುಸಾರವಾಗಿ ರೂಪುಗೊಳ್ಳುವುದು ಉತ್ತಮವೂ ಸಮಂಜಸವೂ ಎಂದು ೧೮೪೮ರಲ್ಲಿಯೇ ಆಲೋಚಿಸಿರುವನು. ಇಂತಹ ಸಂದರ್ಭದಲ್ಲಿ ರೈಸ್ ಭಾಷಾಂತರದ ಪರಿಣಾಮವನ್ನು ಧರ್ಮ ಪ್ರಸಾರದ ತಳಹದಿಯಲ್ಲಿಯೇ ಗ್ರಹಿಸಿಕೊಂಡಿದ್ದ; ಅದಕ್ಕೆ ಒತ್ತನ್ನು ನೀಡಿದ್ದ. ಈ ಸಂದರ್ಭದಲ್ಲಿ ರೈಸ್ ದಕ್ಷಿಣ ಭಾರತದ ಮಿಶನರಿಗಳನ್ನುದ್ದೇಶಿಸಿ ಹೇಳಿದ ಮಾತನ್ನು ಗಮನಿಸುವುದಾದರೆ, ''ದೇಶೀಯರಲ್ಲಿ ಜಿಜ್ಞಾಸೆ ಭಾವ ಬೆಳೆಯುತ್ತಲಿದೆ. ಅದನ್ನು ತಣಿಸುವಂತಹ ಪುಸ್ತಕಗಳನ್ನು ಹೊರಡಿಸಬೇಕು. ಆ ದಿಸೆಯಲ್ಲಿ ದೇಶಿಯ ಮತ ಪ್ರಸಾರಕರು ಉಪಯುಕ್ತ ಸಾಹಿತ್ಯವನ್ನು ರಚಿಸಬಲ್ಲವರಾದ್ದರಿಂದ ಅವರಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡಬೇಕು. ವಿಸ್ತಾರವಾದ ಬೈಬಲ್‌ನ ಸಾರವನ್ನೊಳಗೊಂಡ ಮತ್ತು ಅದರ ಸತ್ಯಗಳನ್ನು ನೇರವಾಗಿ ಎತ್ತಿತೋರಿಸುವ ಅಧಿಕೃತ ಸಂಕ್ಷಿಪ್ತ ಕೃತಿಯೊಂದು ದೇಶೀಯ ಭಾಷೆಯಲ್ಲಿ ಸಿದ್ಧವಾಗಬೇಕು. ಹಿಂದೂ ಧರ್ಮದೊಂದಿಗೆ ಹೋಲಿಸಿ ಕ್ರೈಸ್ತ

ತತ್ವಗಳನ್ನು ಪ್ರಕಾಶಿಸಬೇಕು. ಮಹಿಳೆಯರಿಗಾಗಿ ಕ್ರಿಸ್ತೀಯ ಸಾಹಿತ್ಯ ಇದುವರೆಗೆ ರಚಿತವಾಗಿಲ್ಲ. ಒಂದು ದೇಶ ಭಾಷೆಯಿಂದ ಇನ್ನೊಂದಕ್ಕೆ ಉತ್ತಮ ಕೃತಿಗಳ ಅನುವಾದ ಕಾರ್ಯವು ನಡೆಯಬೇಕಾಗಿದೆ. ಕವಿತೆಯು ದೇಶಿಯರ ನೆಚ್ಚಿನ ಸಾಹಿತ್ಯ ಪ್ರಕಾರವಾಗಿದ್ದು ಅದರ ಮೂಲಕ ನಾವು ಸ್ವಮತ ತತ್ವಗಳನ್ನು ಹರಡಬಹುದಲ್ಲವೇ? ಅಲ್ಲದೆ ಕ್ರಿಶ್ಚಿಯನ್ ತತ್ವದ ಪ್ರಸಾರಕ್ಕೆ ಸೂಕ್ತವಾದ ಪತ್ರಿಕೆಯನ್ನು ಹೊರಡಿಸಬೇಕು'' (ಉದ್ಧೃತ, ಹಾವನೂರ, ೨೦೦೦, ಪು. ೧೦೪).

ಮೇಲಿನ ಮಾತು ಬೈಬಲ್ ಕುರಿತು ಆಡಿರುವುದಾದರೂ ಅವು ಮುಂದುವರಿದು ಒಟ್ಟಾರೆಯಾಗಿಯೇ ಒಂದು ಭಾಷಾ ಪರಂಪರೆಯಲ್ಲಿಯೇ ಭಾಷಾಂತರ ಮಾಡಿಕೊಳ್ಳಬಹುದಾದ ಹಲವಾರು ಸ್ತರಗಳನ್ನು ಸೂಚಿಸುತ್ತದೆ. ಈ ಅಂಶ ಪ್ರಮುಖವಾಗಿ ಧರ್ಮ ಪ್ರಸಾರದ ಹಿನ್ನೆಲೆಯಲ್ಲಿ ರೂಪಗೊಂಡರೂ ಇಲ್ಲಿ ನಡೆದ ಭಾಷಾಂತರದ ಕುರಿತ ಚರ್ಚೆ ಭಾಷಾಂತರ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾದುದಾಗಿದೆ.

ಇನ್ನೊಂದು ಗಮನಿಸಬೇಕಾದ ಸಂಗತಿಯೆಂದರೆ ಮಹಿಳೆಯರಿಗೆ ಪ್ರತ್ಯೇಕವಾದ ಕ್ರೈಸ್ತ ಸಾಹಿತ್ಯ ರಚನೆಯ ಕುರಿತಾದುದು. ಆಧುನಿಕ ಶಿಕ್ಷಣವೇ ಒಂದು ಚಾರಿತ್ರಿಕ ಪಲ್ಲಟ, ಇದರಿಂದಾಗಿ ಶಿಕ್ಷಣ ಸಾಹಿತ್ಯದ ಕುರಿತು ಮಹಿಳೆಯರಿಗೆ ಅವಕಾಶ ಕೊಡುವ ಪ್ರಯತ್ನಗಳು ಮತ್ತು ಮಹಿಳೆಯರಿಗಾಗಿ ಪ್ರತ್ಯೇಕ ಕ್ರೈಸ್ತ ಸಾಹಿತ್ಯವನ್ನು ರಚಿಸಬೇಕು ಎಂಬ ರೈಸ್‌ನ ಮಾತುಗಳು ಗುರುತಿಸಬೇಕಾದ ಸಂಗತಿಯಾಗಿದೆ. ಇದರಿಂದಾಗಿ ಹೊಸದಾಗಿ ರೂಪುಗೊಳ್ಳುತ್ತಿದ್ದ ಶಿಕ್ಷಿತ ಸ್ತ್ರೀ ಸಮುದಾಯವನ್ನು ಬೈಬಲ್ ಭಾಷಾಂತರದ ಓದುಗಳಾಗಿ ರೂಪಿಸುವ ಬಗ್ಗೆ ರೈಸ್ ಗಮನಹರಿಸಿದ್ದನ್ನು ಸೂಚಿಸುತ್ತದೆ. ಈ ಕುರಿತಾದ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.[೬]

''ಧರ್ಮಗ್ರಂಥಗಳ ಅನುವಾದ ಕಾರ್ಯವು ಅವನ ಪಾಲಿಗೆ ಮಾಮೂಲಿ ಕೆಲಸವಾಗಿರಲಿಲ್ಲ. ಅದನ್ನು ಆರಂಭಿಸುವುದಕ್ಕೆ ಮುಂಚೆ, ಅನುದಿನವು ದೇವರ ಪ್ರಾರ್ಥನೆ ಸಲ್ಲಿಸಿ, ಅತ್ಯಂತ ಭಕ್ತಿಭಾವದಿಂದ ಆತ ಆ ಕೆಲಸಕ್ಕೆ ತೊಡಗುತ್ತಿದ್ದನು. ಸ್ವತಃ ತಾನು ಮೂರು ನಾಲ್ಕು ಬಾರಿ ಪರೀಕ್ಷಿಸಿ ಬೈಬಲ್‌ನ ಮೂಲ ಅರ್ಥವು ಸಮರ್ಪಕವಾಗಿ ಕನ್ನಡದಲ್ಲಿ ವ್ಯಕ್ತವಾಗಿದೆಯೇ, ಇಲ್ಲವೆ-ಎನ್ನುವುದರ ಬಗ್ಗೆ ಇತರರಿಗೆ ತೋರಿಸಿ ಅದನ್ನು ಮುದ್ರಣಕ್ಕೆ ಕೊಡುತ್ತಿದ್ದನು. ಅಚ್ಚಿನ ಕರಡುಗಳನ್ನು ತಿದ್ದುವಾಗಲೂ, ಮೂಲದ ಅರ್ಥವು ಕೆಡಲಾಗದೆನ್ನುವ ಶ್ರದ್ಧೆಯಿಂದ ಜಾಗರೂಕತೆಯನ್ನು ವಹಿಸುತ್ತಿದ್ದನು'' (ಉದ್ಧೃತ, ಹಾವನೂರ, ೨೦೦೦, ಪು. ೧೦೦). ಎಂಬುದು ರೀವ್‌ನು ಅನುಸರಿಸಿದ ಭಾಷಾಂತರ ಕೆಲಸದ ಸ್ವರೂಪವಾಗಿದೆ. ಈ ರೀತಿಯಲ್ಲಿ ಧಾರ್ಮಿಕ ಕೃತಿಯೊಂದು ಯಥಾರೀತಿಯಲ್ಲಿ ಅಂದರೆ ಮೂಲಕ್ಕೆ ನಿಷ್ಠವಾಗಿ ಭಾಷಾಂತರವಾಗಬೇಕು ಎಂಬ ಅಭಿಪ್ರಾಯದಿಂದ ಕೂಡಿರುವುದಾಗಿದೆ. ಇದನ್ನು ಗಮನಿಸಿದಾಗ ರೀವನ ಭಾಷಾಂತರದಲ್ಲಿ ಎರಡು ಮಾದರಿಗಳು ಕಂಡುಬರುತ್ತದೆ. ಒಂದು, ಬೈಬಲ್‌ನ ಮೂಲಕ ಏಸುವಿನ ಕತೆಯನ್ನು ಭಾಷಾಂತರಿಸುವಾಗ ಪುನರ್‌ಲೇಖ ಮಾದರಿಯನ್ನು ಅನುಸರಿಸುವುದು. ಎರಡು, ಬೈಬಲ್‌ನ ಭಾಷಾಂತರ ಬಂದಾಗ ಮೂಲನಿಷ್ಠತೆಯನ್ನು ಸ್ವೀಕರಿಸುವುದು. ಈ ಎರಡು ಮಾದರಿಗಳು ಕನ್ನಡ ಬೈಬಲ್‌ನ ಸಂದರ್ಭದಲ್ಲಿ ಅನಿವಾರ್ಯವಾಗಿತ್ತೆ?

ಈ ರೀತಿ ಮಿಶನರಿಗಳು ಬೈಬಲ್‌ಗಳ ಭಾಷಾಂತರದ ಸಂದರ್ಭದಲ್ಲಿ ಭಿನ್ನ ದಾರಿಗಳನ್ನು ಕಂಡುಕೊಂಡವರಾಗಿದ್ದರು. ರೀವ್‌ನಂತವರು ಈ ಮಾದರಿಗೆ ನಿಷ್ಠರಾಗಿದ್ದರೆ. ರೈಸ್‌ನಂತವರು ನಿಷ್ಠೆಯ ಪ್ರಶ್ನೆಗಿಂತ ಸ್ಥಳೀಯರಿಗೆ ಅದು ಎಷ್ಟು ಅರ್ಥವಾಗುತ್ತದೆ. ಆ ಮೂಲಕ ಧರ್ಮಪ್ರಸಾರ ಹಾಗೂ ಮತಾಂತರಗಳು ಎಷ್ಟು ನಡೆದಿವೆ ಎಂಬುದು ಮುಖ್ಯವಾಗಿತ್ತು. ರೀವ್‌ನ ಅಭಿಪ್ರಾಯವನ್ನು ಗಮನಿಸಿದರೆ ಮೂಲದ ಕುರಿತು ಯಥಾರೀತಿ ಕಾಪಾಡಿಕೊಂಡು ಬರಲು ಪ್ರಯತ್ನಿಸಿದವರಲ್ಲಿ ಕನ್ನಡದಲ್ಲಿ ಈತನೇ ಮೊದಲಿಗ ಎಂದೆನಿಸುತ್ತದೆ. ಬೈಬಲ್‌ನ್ನು ಹೇಗೆ ಕನ್ನಡಕ್ಕೆ ಭಾಷಾಂತರಿಸಬೇಕು ಎಂಬುವ ಕುರಿತು ಮಿಶನರಿಗಳಲ್ಲಿದ್ದ ವಿಭಿನ್ನ ಅಭಿಪ್ರಾಯಗಳು ಹಲವು ಮಾದರಿಗಳಲ್ಲಿ ಬೈಬಲ್ 'ಕನ್ನಡದ್ದಾಗುವ' ಅನುಕೂಲವನ್ನು ದೊರಕಿಸಿಕೊಟ್ಟಿತು. ಇವುಗಳಿಂದ ಧಾರ್ಮಿಕ ಪಠ್ಯಗಳ ಭಾಷಾಂತರ ಸದಂರ್ಭದಲ್ಲಿ ಭಾಷಾಂತರದ ಪ್ರಯೋಗಗಳು ನಡೆದಿರುವುದನ್ನು ಕಾಣಬಹುದು.

ಸುಮಾರು ೧೮ನೇ ಶತಮಾನದ ಕೊನೆಯ ದಶಕದಲ್ಲಿ ಕ್ರೈಸ್ತ ಧರ್ಮದ ಕೃತಿಗಳನ್ನು ಪ್ರಾದೇಶಿಕ ಭಾಷೆಗೆ ಹೊಂದಿಸುವ ರೀತಿಯಲ್ಲಿ ಭಾಷಾಂತರಗೊಂಡವು. ಆದರೆ ಇವು ಸಮಗ್ರ ಸ್ವರೂಪ ಪಡೆದಿರುವುದು ೧೯ನೇ ಶತಮಾನದ ಉತ್ತರಾರ್ಧದ ವೇಳೆಗೆ ಎನ್ನಬಹುದು.[೫] ಜೊತೆಗೆ ಇದೇ ಸಂದರ್ಭದಲ್ಲಿ ಬೈಬಲ್ ಭಾಷಾಂತರದ ರೂಪ - ಸ್ವರೂಪ ಮತ್ತು ಗುಣಮಟ್ಟದ ಕುರಿತು ಸಹ ಆಲೋಚಿಸಲಾಯಿತು.

### ೨.೧.೧. ಬೈಬಲ್‌ಗಳ ಪುನರ್‌ಲೇಖಗಳು

೧೭೯೪ರ ಸುಮಾರಿಗೆ ಬೈಬಲ್ ಗೀತಗಳು, ಬೈಬಲ್ ಸೂಕ್ತಿಗಳು, ಬೈಬಲ್ ಕಥೆಗಳು, ಬೈಬಲ್ ಪ್ರಸಂಗಗಳು ಎಂಬಿತ್ಯಾದಿ ಹೆಸರುಗಳಲ್ಲಿ ಬೈಬಲ್‌ನ್ನು ಕನ್ನಡಕ್ಕೆ ಪುನರ್‌ಲೇಖಿಸುವ, ಪ್ರಕಾರಾಂತರಿಸುವ ಪ್ರಯತ್ನಗಳು ನಡೆದಿರುವುದನ್ನು ಐ.ಮಾ. ಮುತ್ತಣ್ಣನವರು ಪ್ರಸ್ತಾಪಿಸುತ್ತಾರೆ. ಆ ನಂತರದಲ್ಲಿಯೂ ಈ ಮಾದರಿಗಳು ಮುಂದುವರಿದಿವೆ. ಇವನ್ನು ಗಮನಿಸಿದಾಗ ಯಾವುದೇ ಒಂದು ಧಾರ್ಮಿಕ ಕೃತಿ ವಿಭಿನ್ನ ಉದ್ದೇಶಗಳಡಿಯಲ್ಲಿ ಬೇರೊಂದು ಭಾಷೆಗೆ ಸಮಗ್ರವಾಗಿ ಭಾಷಾಂತರಗೊಳ್ಳುವ ಮೊದಲು, ಅದನ್ನು ಅನುಲಕ್ಷಿಸಿ ಅಥವಾ ಅದರ ಹಿನ್ನೆಲೆಯಲ್ಲಿ ಬೇರೆ ಬೇರೆ ಪ್ರಕಾರಗಳ ಮೂಲಕ ಪುನರ್‌ಲೇಖಿಸುವ ಪ್ರಯತ್ನಗಳು ನಡೆದಿರುವುದು ಕಂಡು ಬರುತ್ತದೆ. ಈ ಮಾದರಿಯೂ ಭಾರತೀಯ ವಾಙ್ಮಯದ ಸಂದರ್ಭದಲ್ಲಿಯೂ ನಡೆದಿದೆ. ಉದಾಹರಣೆಗೆ ಮಹಾಕಾವ್ಯಗಳ ಹಿನ್ನೆಲೆಯಲ್ಲಿ ಕನ್ನಡದಲ್ಲಿ ರಚನೆಗೊಂಡಿರುವ ನಾಟಕದ ಕೃತಿಗಳು, ಯಕ್ಷಗಾನದ ಪೌರಾಣಿಕ ಪ್ರಸಂಗಗಳು,[೬] ದಾಸರ ಸೂಕ್ತಿಗಳು ಹಾಗೂ ಟೀಕು, ವ್ಯಾಖ್ಯಾನದಂತಹ ಮಾದರಿಗಳು ಮತ್ತು ಚಲನಚಿತ್ರವಾದ 'ಸಂಪೂರ್ಣ ರಾಮಾಯಣ', 'ಮಹಾಭಾರತ' ಇತ್ಯಾದಿಗಳು ಸಹ ಈ ಗುಂಪಿಗೆ ಸೇರುತ್ತವೆ. ಆಧುನಿಕ ಸಂದರ್ಭದಲ್ಲಿ ಮಹಾಕಾವ್ಯಗಳು ಸಂಪೂರ್ಣವಾಗಿ ಕನ್ನಡಕ್ಕೆ ಭಾಷಾಂತರಗೊಂಡರೂ ಈ ಮಾದರಿಗಳು ಕೆಲವೊಂದು ಮಾರ್ಪಾಡುಗಳ ಮೂಲಕ ಹೀಗೆಯೇ ಮುಂದುವರೆದಿರುವುದನ್ನು ಕಾಣಬಹುದು. ಆದರೆ ಇಲ್ಲಿನ ಯಾವೊಂದು ಪರಂಪರೆ ಯಾವುದಕ್ಕೆ ಪ್ರೇರಕ ಅಥವಾ ಪೂರಕವೆಂಬುದು ಅಧ್ಯಯನಕ್ಕೊಳಪಡಿಸಬೇಕಾದ ವಿಷಯವಾಗಿದೆ.

ಇಂಗ್ಲೆಂಡ್ ಸರಕಾರದ ಆಜ್ಞೆಯಂತೆ ಕರ್ನಾಟಕಕ್ಕೆ (ಬಳ್ಳಾರಿ) ಬಂದ ವಿಲಿಯಂ ರೀವ್ ಬೈಬಲ್‌ನ್ನು ಆಧರಿಸಿ 'ಯೇಸುಕ್ರಿಸ್ತನ ಅವತಾರ' ಎಂಬ ಕೃತಿಯನ್ನು ರಚಿಸಿದ್ದಾನೆ (೧೮೨೦). ಇದರೊಂದಿಗೆ ಹಳೆಯ ಒಡಂಬಡಿಕೆಯ

ಅನೇಕ ಪರ್ವಗಳನ್ನು ಕನ್ನಡಕ್ಕೆ ತಂದಿದ್ದನ್ನು ಹಾವನೂರರು ಪ್ರಸ್ತಾಪಿಸುತ್ತಾರೆ. ಬೈಬಲ್ ಭಾಷಾಂತರದ ಸಂದರ್ಭದಲ್ಲಿ ಕೋಶದ ಮಹತ್ವವನ್ನು ಅರಿತು ಈ ಕುರಿತು ಪ್ರಯತ್ನಿಸಿದವರಲ್ಲಿ ರೀವ್ ಮೊದಲಿಗ. ಹಾವನೂರ ಅವರು ರೀವ್‌ನ ಕಾರ್ಯಚಟುವಟಿಕೆಯ ಕುರಿತು ಬರೆಯುವಾಗ ಈತ ಕನ್ನಡ ಮತ್ತು ಇಂಗ್ಲಿಷಿನಿಂದ ಕೆಲವು ಪುಸ್ತಕಗಳನ್ನು ತೆಲುಗಿಗೆ ಸಹ ಭಾಷಾಂತರಿಸಿರಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ರೀವ್ 'ಯೇಸುಕ್ರಿಸ್ತನ ಅವತಾರ' ಎಂದು ಕನ್ನಡಕ್ಕೆ ತಂದ ಕೃತಿ ಸ್ಥಳೀಕರಣಗೊಂಡಿದೆ. 'ಅವತಾರ' ಎಂಬುದು ಭಾರತೀಯ ಪರಂಪರೆಗೆ ಪರಿಚಿತವಾದ ಮತ್ತು ಧಾರ್ಮಿಕ ನೆಲೆಯಲ್ಲಿ ತುಂಬಾ ಆಪ್ತವಾದ ವಿಚಾರವಾಗಿದೆ. ಇದನ್ನು ಅರಿತುಕೊಳ್ಳುವುದರೊಂದಿಗೆ ಹಿಂದೂ ಧರ್ಮಕ್ಕೆ ಸಮಾನ ಅಂತರದಲ್ಲಿ ಕ್ರೈಸ್ತ ಧರ್ಮವನ್ನು ರೂಪಿಸುವ ನೆಲೆಯಲ್ಲಿಯೂ ಈ ರೀತಿ ಸ್ಥಳೀಕರಣಗೊಂಡಿರುವ ಸಾಧ್ಯತೆಯಿದೆ; ಅದು ಅನಿವಾರ್ಯವೂ ಆಗಿತ್ತು.

ಕಿಟೆಲ್ ಬೈಬಲ್‌ನ ಹೊಸ ಒಡಂಬಡಿಕೆಯನ್ನು ಕಥನ ರೂಪದಲ್ಲಿ 'ಕಥಾಮಾಲೆ' (೧೮೯೨) ಎಂದು ಪುನರ್‌ಲೇಖಿಸಿದರೆ, ಕೌಂಡಿಣ್ಯನು ಜರ್ಮನ್ ಭಾಷೆಯಿಂದ 'ಕ್ರೈಸ್ತ ಧರ್ಮದ ಬೋಧನೆ' (೧೮೪೪) ಮತ್ತು 'ಪರಿಶುದ್ಧ ಚರಿತ್ರೆ' (೧೮೫೨) ಎಂಬುವ ಕೃತಿಗಳನ್ನು ಕನ್ನಡದಲ್ಲಿ ತಂದಿರುವನು. ಬಿ.ಎಚ್.ರೈಸ್‌ನು 'ಚಿಕ್ಕವರಿಗೆ ಮೊದಲಾಗಿ ಪಾಠ ಮಾಡತಕ್ಕ ವೇದ ಬೋಧನೆ' (೧೮೫೦) ರೋಮ್ ಕೆಥೋಲಿಕ್‌ರ ಪ್ರಕಟಣೆಯಾಗಿದೆ. 'ಭದ್ರವಾದ ಅಭ್ಯಂಗಕ್ಕೆ ಆಯುಕ್ತವಾಗಿರುವ ಜ್ಞಾನೋಪದೇಶ' (೧೮೬೮), 'ಎಳೆಯರಿಗಾಗಿ ಕ್ರೈಸ್ತ ಕಥನವು' ೧೮೩೮ರಲ್ಲಿ ಮೊದಲ ಬಾರಿಗೆ ಭಾಷಾಂತರವಾಗಿದೆ. ಕಿಟೆಲ್ ಅವರು ಕ್ರೈಸ್ತಗೀತೆಗಳನ್ನು ಷಟ್ಪದಿಯಲ್ಲಿ ರಚಿಸಿದ್ದಾರೆ. ದೇಶೀಯ ಛಂದೋ ಪ್ರಕಾರಗಳಲ್ಲಿ ಈ ಪ್ರಯತ್ನ ಮಾಡುವುದರೊಂದಿಗೆ ಕಾವ್ಯದ ತಾಳ, ಲಯ, ರಾಗಗಳನ್ನು ಸಹ ಸೂಚಿಸಿರುವುದನ್ನು ಕಾಣಬಹುದು. ಬಾಸೆಲ್ ಮಿಶನ್‌ನವರು ಬೈಬಲ್‌ನ ಕಥನಗಳನ್ನು ಭಾಷಾಂತರಿಸಿ ಸಚಿತ್ರ ಗ್ರಂಥವನ್ನಾಗಿ ಪ್ರಕಟಿಸಿದ ಉದಾಹರಣೆಗಳೂ ಉಂಟು. ಇದರಲ್ಲಿ ಬಿ.ಲೂಥಿ 'ದೇವರ ವಾಕ್ಯದ ಸಣ್ಣ ಕಥೆಗಳು' (೧೯೦೧) ಕೂಡ ಒಂದು.

ಕ್ರೈಸ್ತ ವಿಚಾರಗಳನ್ನೊಳಗೊಂಡ ಕತೆಗಳನ್ನು ಮೇರಿ ಶರ್ವುಡು ಎಳೆಯರಿಗಾಗಿ ಬರೆದಿದ್ದಳು. ಅವಳ ಅನೇಕ ಕಥೆಗಳು ಕನ್ನಡದಲ್ಲಿ ಭಾಷಾಂತರವಾಗಿವೆ. ಅವುಗಳಲ್ಲಿ Little Hehry and His bearer ಎಂಬುದನ್ನು ಮೊಗ್ಲಿಂಗ್ 'ಚಿಕ್ಕವನಾದ ಹೆನ್ರಿಯೂ ಅವನ ಬೋಯಿಯೂ' (೧೮೪೪) ಎಂಬುದಾಗಿ ಭಾಷಾಂತರಿಸಿದ್ದಾರೆ.

ಧಾರ್ಮಿಕ ಕೃತಿಗಳ ಭಾಷಾಂತರದ ಬಗ್ಗೆ ರೈಸ್ ಎತ್ತಿದ ಕೆಲವು ಪ್ರಶ್ನೆಗಳಿಗೆ ಮುಂದಿನ ದಿನಗಳಲ್ಲಿ ಉತ್ತರ ದೊರೆಯಿತೆಂದು ಹೇಳಬಹುದು. ಕೃತಿಗಳ ಸ್ವರೂಪದಂತೆ ಅವುಗಳ ಶೀರ್ಷಿಕೆಯನ್ನು ಭಾರತೀಯಗೊಳಿಸುವ ಪ್ರಯತ್ನಗಳು ಈ ಹಂತದಲ್ಲಿ ನಡೆದಿರುವುದುಂಟು. ಅವುಗಳಲ್ಲಿ 'ದೇವರ ಸ್ತೋತ್ರಕ್ಕಾಗಿ ಗೀತಗಳು' (೧೮೫೫), 'ದೇವವಾಕ್ಯದ ವಚನ ಮಂಜರಿ' (೧೯೬೫), 'ದೇವವಾಶೋವಾಹರಣಾ ಸಂಗ್ರಹ' (೧೮೭೩), 'ದೇವ ವಿಚಾರಣೆ' (೧೮೫೨) ಇತ್ಯಾದಿಗಳು ಪ್ರಮುಖವಾದವುಗಳಾಗಿವೆ.[೬]

ಮಿಶನರಿಗಳು ಹಲವು ಕ್ರೈಸ್ತ ಧಾರ್ಮಿಕ ಕೃತಿಗಳನ್ನು ದ್ರಾವಿಡ ಭಾಷೆಗಳಿಂದಲೂ ಪುನರ್‌ಲೇಖಿಸಿದ್ದಾರೆ. 'ಲೂರ್ದ ಮಾತೆಯ ದರ್ಶನ ಚರಿತೆ'ಯು (೧೮೮೩) ಕಥೋಲಿಕ್ ಮಿಶನ್ ತಮಿಳಿನಿಂದ ಕನ್ನಡಕ್ಕೆ ತಂದ ಕೃತಿಯಾದರೆ

ಇದಕ್ಕೂ ಪೂರ್ವದಲ್ಲಿ ಇದೇ ಮಿಶನರಿಯು ಬೆಸ್ಕಿಯ ತಮಿಳು ಕೃತಿಯೊಂದನ್ನು 'ವೇದ ಬೋಧಕರ ಕ್ರಮ' (೧೮೭೮) ಎಂಬ ಹೆಸರಿನಲ್ಲಿ ಪುನರ್‌ಲೇಖಿಸಿತ್ತು. ಇವುಗಳಲ್ಲದೆ 'ಜ್ಞಾನಬೋಧಕ' (೧೮೦೪), 'ಅಜ್ಞಾತವಾಸದ ಧ್ಯಾನ' (೧೮೬೫), 'ಜ್ಞಾನದರ್ಪಣ' (೧೮೬೧), ಪೂರ್ವಿಕ ಮುಂತಾದ ವ್ಯಾಖ್ಯಾನವು (೧೮೫೮), 'ಶಿಲುಬೆಯ ಹಾದಿ' (೧೮೬೧) ಮುಂತಾದ ಕೃತಿಗಳು ಕನ್ನಡದಲ್ಲಿ ಪುನರ್‌ಲೇಖಿಗೊಂಡಿರುವವು.[೭]

### ೨.೧. ೨. ಪತ್ರಿಕೆಗಳಲ್ಲಿ ಬೈಬಲ್ ಭಾಷಾಂತರಗಳು

ಕನ್ನಡದ ಸಂದರ್ಭದಲ್ಲಿ ಬೈಬಲ್ ಹಾಗೂ ಇತರ ಧಾರ್ಮಿಕ ಕೃತಿಗಳು ಕೇವಲ ಪುಸ್ತಕರೂಪದಲ್ಲಿ ಮಾತ್ರ ಪ್ರಕಟವಾಗದೆ ಪತ್ರಿಕೆಗಳಲ್ಲಿಯೂ ಪ್ರಸರಣಗೊಂಡಿದೆ. ಅದರಲ್ಲೂ ಕೆಲವು ಪತ್ರಿಕೆಗಳು ಧರ್ಮ ಪ್ರಸಾರಕ್ಕಾಗಿಯೇ ಹುಟ್ಟಿಕೊಂಡಿರುವುದು ಗಮನಾರ್ಹವಾಗಿದೆ. ಬೈಬಲ್‌ಗಳ ನೇರ ಭಾಷಾಂತರ, ಪುನರ್‌ಲೇಖಿಗಳು ಸುಮಾರು ೧೭೯೦ರ ನಂತರ ಆರಂಭಗೊಂಡರೆ ೧೯ನೇ ಶತಮಾನದಲ್ಲಿ ಪತ್ರಿಕೆಗಳು ಬೈಬಲ್ ಭಾಷಾಂತರವನ್ನು ಆರಂಭಿಸಿದ್ದವು. 'ಭಾರತೀಯ ಪತ್ರಿಕೋದ್ಯಮ' ಕುರಿತಾದ ಮಹಾಪ್ರಬಂಧದಲ್ಲಿ ಬಳ್ಳಾರಿಯ ಜರ್ಮನ್ ಪಾದ್ರಿಗಳು 'ಕನ್ನಡ ಸಮಾಚಾರ'ವೆಂಬ ಕನ್ನಡ ಪತ್ರಿಕೆಯನ್ನು ೧೮೪೨ನೆಯ ಇಸವಿಯಲ್ಲಿ ಧರ್ಮ ಪ್ರಚಾರಕ್ಕೋಸ್ಕರ ಪ್ರಕಟಿಸಿದರು ಎಂದು ಹೇಳಲಾಗಿದೆ (ಭಾರತೀಯ ಪತ್ರಿಕೋದ್ಯಮ, ಪು.೩೮೮, ೩೮೯).

ಕನ್ನಡದ ಮೊದಲ ಪತ್ರಿಕೆಯೆಂದು ಗುರುತಿಸಲಾದ 'ಮಂಗಳೂರು ಸಮಾಚಾರ' (೧೮೪೭) ದಿಂದಲೇ ಬೈಬಲ್ ಭಾಷಾಂತರ ಪ್ರಕಟವಾಗಿದೆ. ೧೮೪೭ರಲ್ಲಿ ಬೈಬಲ್‌ನ ಹೊಸ ಒಡಂಬಡಿಕೆಯನ್ನು Bahrer ಮತ್ತು Grenier ಎಂಬ ಇಬ್ಬರು ಕನ್ನಡದಲ್ಲಿ ಧಾರವಾಹಿಯಾಗಿ 'ಮಂಗಳೂರು ಸಮಾಚಾರ'ದಲ್ಲಿ ಪ್ರಕಟಿಸಿದ್ದರು. ಹೀಗೆ ಕನ್ನಡದ ಮೊದಲ ಪತ್ರಿಕೆ ಕೂಡ ಭಾಷಾಂತರಗೊಂಡ ಬೈಬಲ್‌ನ್ನು ಪ್ರಕಟಿಸುವ ಮೂಲಕ ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿತ್ತು.

ಪತ್ರಿಕೆಗಳು ಬೈಬಲ್ ಮತ್ತಿತರ ಧಾರ್ಮಿಕ ಕೃತಿಗಳ ವಿಚಾರವನ್ನು ಪ್ರಚಾರಪಡಿಸುತ್ತಿದ್ದರೆ, ಕೆಲವೊಂದು ಪತ್ರಿಕೆಗಳು ಬೈಬಲ್ ಪ್ರಕಟಣೆಯೊಂದಿಗೆ ಧರ್ಮಪ್ರಸಾರಕ್ಕೆ ಮೀಸಲಾಗಿದ್ದವು. ಉದಾ: ೧೮೬೮ರಿಂದ ೧೮೭೧ರ ಅವಧಿಯಲ್ಲಿ 'ಸಭಾಸತ್ವ'ವೆಂಬ ಪತ್ರಿಕೆ ಬೈಬಲ್ ಸಾಹಿತ್ಯಕ್ಕೆ ಮೀಸಲಾಗಿದ್ದು ಉಡುಪಿಯಿಂದ ಪ್ರಕಟಗೊಳ್ಳುತ್ತಿತ್ತು.

ಬೈಬಲ್‌ಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಇಂತಹ ಪತ್ರಿಕೆಗಳಲ್ಲಿ ಪ್ರಕಟಿಸಿದ ಕುರಿತು ಮಾಹಿತಿಗಳು ದೊರೆಯುತ್ತದೆ. ''ಅಲ್ಲದೆ ಕ್ರಿಶ್ಚಿಯನ್ ತತ್ವದ ಪ್ರಸಾರಕ್ಕೆ ಸೂಕ್ತವಾದ ಪತ್ರಿಕೆಯನ್ನು ಹೊರಡಿಸಬೇಕು'' (೧೮೫೮) ಎಂಬ ರೈಸ್‌ನ ಮಾತು ಕೆಲವು ಪತ್ರಿಕೆಗಳಲ್ಲಿ ಕಾರ್ಯರೂಪಕ್ಕೆ ಬಂದಿರುವುದು. ಯಾಕೆಂದರೆ 'ಕ್ರೈಸ್ತ ಸಭಾಪತ್ರ ಮಾಸಿಕ', 'ಸತ್ಯದೀಪಿಕೆ' ಮುಂತಾದ ಪತ್ರಿಕೆಗಳು ಕ್ರಿಶ್ಚಿಯನ್ ಧರ್ಮಪ್ರಸಾರಕ್ಕೆ ಹೆಚ್ಚು ಒತ್ತನ್ನು ಕೊಟ್ಟಿದ್ದವು.

**ಕ್ರೈಸ್ತ ಧಾರ್ಮಿಕ ವಿಚಾರಗಳನ್ನು ಪ್ರಕಟಿಸುತ್ತಿದ್ದ ಪತ್ರಿಕೆಗಳು**

೧. 'ಕನ್ನಡ ಸಮಾಚಾರ'(೧೮೪೨), ಬಾಸೆಲ್ ಮಿಶನ್

೨. 'ಕ್ರೈಸ್ತ ಸಭಾಪತ್ರ ಮಾಸಿಕ' (೧೮೬೯), ಸಂಪಾದಕರು ಶ್ರೀ ಕ್ರಿಸ್ತಾನುಜ ವತ್ಸರು

೩. 'ಸತ್ಯದೀಪಿಕೆ' (೧೮೬೬), ಸಂಪಾದಕರು ಶ್ರೀ ಬಿಲೂತಿ ಫ್ರೆಡರಿಕ್

೪. 'ಮಂಗಳೂರು ಸಮಾಚಾರ' (೧೮೪೭), (ಇದು ಬಳ್ಳಾರಿಯಿಂದ ಪ್ರಕಟಗೊಂಡ 'ಕನ್ನಡ ಸಮಾಚಾರ' ಪತ್ರಿಕೆಯ ನಂತರ ಆವೃತ್ತಿಯಾಗಿದೆ.)

೫. 'ಕಂನಾಡ ವಾರ್ತಿಕ (೧೮೫೭), (Canerese Messenger) ಸಂಪಾದಕರು ಹರ್ಮಿಂಗ್ ಮೊಗ್ಲಿಂಗ್

೬. 'ಅರುಣೋದಯ' (ಮಾಸಿಕ) ೧೮೬೨, ಸಂಪಾದಕರು, ಬಿ.ಎಚ್.ರೈಸ್

ಹೀಗೆ ಪತ್ರಿಕೆಗಳಲ್ಲಿ ಬೈಬಲ್ ನೇರ ಭಾಷಾಂತರಗೊಂಡು ಧಾರವಾಹಿಯಾಗಿ ಪ್ರಕಟಗೊಂಡಂತೆ ಬೈಬಲ್ ಪುನರ್‌ಲೇಖಗಳಾದ ಬೈಬಲ್ ಗೀತೆಗಳು, ಸೂಕ್ತಿಗಳು, ಕತೆಗಳು, ಧಾರ್ಮಿಕ ಲೇಖನಗಳು ಇತ್ಯಾದಿಗಳು ಪತ್ರಿಕೆಗಳ ಮೂಲಕ ಪ್ರಕಟಗೊಂಡಿರುವುದನ್ನು ಕಾಣಬಹುದು.

### ೨.೨. ಕ್ರೈಸ್ತೇತರ ಧಾರ್ಮಿಕ ಭಾಷಾಂತರ

೧೮೨೦ರ ಅವಧಿಯಲ್ಲಿ ಇಂಗ್ಲಿಷ್‌ನಿಂದ ಬೈಬಲ್ ಕನ್ನಡಕ್ಕೆ ಭಾಷಾಂತರಗೊಂಡಿತು. ಇದಾದ ಹಲವು ವರ್ಷಗಳ ತರುವಾಯ ಜಾನ್‌ಗ್ಯಾರೆಟ್ ಭಗವದ್ಗೀತೆಯನ್ನು (೧೮೪೪) ಸಂಸ್ಕೃತದಿಂದ ಕನ್ನಡಕ್ಕೆ ತಂದನು. ಗ್ಯಾರೆಟ್ ಬಹುಭಾಷಾ ಭಗವದ್ಗೀತೆಯನ್ನು ಸಿದ್ಧಪಡಿಸಿ ಅದರಲ್ಲಿ ಕನ್ನಡದ ಭಾಷಾಂತರವನ್ನು ಸ್ವತಃ ತಾನೆ ಬರೆದು, ಇದುವರೆಗೆ ಭಗವದ್ಗೀತೆಯ ಕುರಿತು ಬಂದಿರುವ ಸಾಧನಗಳನ್ನು ಬಳಸಿಕೊಂಡು ಮುನ್ನುಡಿ, ವಿಮರ್ಶೆ ಮುಂತಾದವುಗಳನ್ನು ಸೇರಿಸಿದ್ದಾನೆ. ಈ ರೀತಿಯಲ್ಲಿ ಸಂಸ್ಕೃತ ಭಾಷೆಯಲ್ಲಿನ ಧಾರ್ಮಿಕ ಕೃತಿಯೊಂದನ್ನು ಕನ್ನಡದಂತಹ ಪ್ರಾದೇಶಿಕ ಭಾಷೆಗಳಲ್ಲಿ ಕೊಡುವ ಪ್ರಯತ್ನ ನಿಜಕ್ಕೂ ಕುತೂಹಲಕಾರಿಯಾಗಿದೆ. ಧರ್ಮ ಪ್ರಸಾರಕ್ಕೆಂದು ದೂರದ ದೇಶಗಳಿಂದ ಈ ದೇಶಕ್ಕೆ ಬಂದ ಮಿಶನರಿಗಳು ತಮ್ಮ ಧರ್ಮಕ್ಕೆ ಹೊರತಾದ ಇಂತಹ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದು ಭಾರತೀಯ ಧರ್ಮಗಳನ್ನು ತಿಳಿಯುವುದರೊಂದಿಗೆ ಅವುಗಳಿಗೆ ಸಂವಾದಿಯಾಗಿ ಕ್ರೈಸ್ತ ಧರ್ಮದ ವಿಚಾರವನ್ನು ಪ್ರಸಾರಮಾಡುವುದಾಗಿತ್ತು.[೧]

ಮೊಗ್ಲಿಂಗ್ ತನ್ನ ಅವಧಿಯಲ್ಲಿ 'ಬಿಬ್ಲಿಯಾಥೆಕಾ ಕರ್ನಾಟಕಾ' ಎಂಬ ಮಾಲಿಕೆಯನ್ನು ಆರಂಭಿಸಿದ. ಈ ಮಾಲಿಕೆಯಲ್ಲಿ 'ಜೈಮಿನಿ ಭಾರತ' (೧೮೪೮) ಮೊದಲು ಪ್ರಕಟವಾಯಿತು. ಇದಾದ ಒಂದು ವರ್ಷದ ನಂತರ ತೊರವೆ ರಾಮಾಯಣವನ್ನು ಎತ್ತಿಕೊಂಡರು. ಇದೇ ಸಂದರ್ಭದಲ್ಲಿ ಕೃತಿಗಳ ಪರಿಷ್ಕಾರದ ಕೆಲಸವು ಆರಂಭಗೊಂಡಿತು. ನಂತರ ೧೮೫೦ ರಲ್ಲಿ 'ದಾಸರ ಪದಗಳು' ಎಂಬ ನೂರು ಹಾಡುಗಳ ಸಂಕಲನ ಪ್ರಕಟಗೊಂಡಿತು. ''ಕನ್ನಡದಲ್ಲಿ ದಾಸರ ಹಾಡುಗಳ ಸಂಕಲನವು ಪ್ರಥಮಥಃ ಅಚ್ಚಾದುದು ವಿದೇಶಿ ಮಿಶನರಿಗಳಿಂದ'' (ಹಾವನೂರ ೨೦೦, ಪು.೧೧೭). ಎಂಬ ಸಂಗತಿ ಗಮನಾರ್ಹವಾಗಿದೆ. ಆ ನಂತರದಲ್ಲಿ ಕನಕದಾಸರ 'ಹರಿಭಕ್ತಸಾರ'ವು ಈ ಮಾಲಿಕೆಯಲ್ಲಿಯೇ ಪ್ರಕಟಗೊಂಡಿದೆ.

೧೮೫೨ ರಲ್ಲಿ ಸೇಂಡರ್ಸನ್ 'ಜೈಮಿನಿ ಭಾರತ'ದ ಕೆಲವು ಭಾಗಗಳನ್ನು ಗದ್ಯರೂಪದಲ್ಲಿ ಇಂಗ್ಲಿಷ್‌ಗೆ ತಂದರೆ, ಮೊಗ್ಲಿಂಗ್ 'ದಾಸರ ಪದಗಳು' ಎಂಬ ಪುಸ್ತಕದಿಂದಾಯ್ದು ಪುರಂದರದಾಸರ ಹಾಗೂ ಕನಕದಾಸರ ೨೪ 'ಪದ'ಗಳನ್ನು

ಜರ್ಮನ್ ಭಾಷೆಗೆ ಪದ್ಯರೂಪದಲ್ಲಿಯೇ ಭಾಷಾಂತರಿಸಿ, ಪೀಠಿಕೆಯೊಡನೆ ಜರ್ಮನಿಯ ಪ್ರಾಚ್ಯವಿದ್ಯಾವಿಷಯಕವಾದ ZDMG ಪತ್ರಿಕೆಯಲ್ಲಿ ಪ್ರಕಟಿಸಿದ್ದಾನೆ (೧೮೬೪). ಇದಾದ ಕೆಲವು ವರ್ಷಗಳ ತರುವಾಯ 'ಜೈಮಿನಿ ಭಾರತ'ದ ಹಲವು ಸರ್ಗಗಳನ್ನು ಈ ಮಾದರಿಯಲ್ಲಿಯೇ ಪ್ರಕಟಿಸಿದನು (ಹಾವನೂರ ೨೦೦೦, ಪು.೧೧೮). ಇನ್ನೊಂದು ಮುಖ್ಯ ಸಂಗತಿಯೆಂದರೆ, ಮೊಗ್ಲಿಂಗ್ 'ಮಂಗಳೂರು ಸಮಾಚಾರ' (೧೮೪೩) ಪತ್ರಿಕೆಯಿಂದ ಸುದ್ದಿಸಮಾಚಾರಗಳನ್ನು ಪ್ರಕಟಿಸುತ್ತಿದ್ದನು. ಇದರಲ್ಲಿ ದಾಸರ ಪದ ಇಲ್ಲವೆ ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿ ಅವುಗಳಿಗೆ ಸಮನಾದ ಬೈಬಲ್ ಉಕ್ತಿಗಳನ್ನು ಹೇಳಿರುವುದರ ಬಗ್ಗೆ ೧೮೯೬ರಲ್ಲಿ ಪ್ರಕಟವಾದ 'ಗಾಥಮಂಜರಿ' ಸಂಸ್ಕೃತವೂ ಕನ್ನಡವೂ ಕೃತಿಯಲ್ಲಿ ಉಲ್ಲೇಖವಿರುವುದನ್ನು ಹಾವನೂರ ಅವರು ಪ್ರಸ್ತಾಪಿಸುತ್ತಾರೆ (ಹಾವನೂರ ೨೦೦೦).

ಈ ಬಗೆಯಲ್ಲಿ ಧರ್ಮಪ್ರಸಾರ-ಪ್ರಚಾರವನ್ನೇ ಮೂಲ ಉದ್ದೇಶವಾಗಿರಿಸಿಕೊಂಡ ಮಿಶನರಿಗಳು ಭಾರತೀಯ ಪಾರಂಪರಿಕ ಕೃತಿಗಳನ್ನು ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರಿಸಿದ್ದು ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಮಿಶನರಿಗಳು ತಮ್ಮ ಭಾಷೆಯ ಕೃತಿಗಳನ್ನಲ್ಲದೆ ಸಂಸ್ಕೃತದ (ಸಾಹಿತ್ಯಕ ಮತ್ತು ಸಾಹಿತ್ಯೇತರ) ಕೃತಿಗಳನ್ನು ಕನ್ನಡದಂತಹ ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರಿಸುವುದರೊಂದಿಗೆ ಭಾರತೀಯ ಭಾಷೆಯ ಅನೇಕ ಕೃತಿಗಳನ್ನು ಇಂಗ್ಲಿಷ್ ಸಾಹಿತ್ಯವನ್ನು ಒಳಗೊಂಡಂತೆ ಜರ್ಮನ್ ಹಾಗೂ ಇನ್ನಿತರ ಭಾಷೆಗಳಿಗೆ ಭಾಷಾಂತರಿಸಿದರು. ಈ ಮೂಲಕ ಹೊಸ ಮಾದರಿಯ ಅಧ್ಯಯನ ಚರ್ಚೆಗಳಿಗೆ ಅವಕಾಶ ಕಲ್ಪಿಸಿದರು. ಇದು ವಸಾಹತುಶಾಹಿಯ ಕುರಿತಾದ ಭಿನ್ನ ಆಲೋಚನೆಗಳಿಗೆ ನಾಂದಿ ಹಾಡಿತು; ವಸಾಹತು ಚಿಂತನೆಗಳಿಗೆ ದಾರಿಮಾಡಿತು.

ಕನ್ನಡದ ಸಂದರ್ಭದಲ್ಲಿ ಕ್ರೈಸ್ತ ಧಾರ್ಮಿಕ ಕೃತಿಗಳನ್ನು ಕನ್ನಡಕ್ಕೆ ತಂದಿರುವುದು ಹಾಗೂ ಸಂಸ್ಕೃತದಲ್ಲಿನ ಧರ್ಮಶಾಸ್ತ್ರ, ಪುರಾಣ ಸಂಬಂಧಿತ ಕೃತಿಗಳನ್ನು ಕನ್ನಡಕ್ಕೆ ತಂದಿರುವ ಮತ್ತು ಅವುಗಳನ್ನು ಸಂಪಾದಿಸಿ ಸಂಕಲಿಸಿರುವ ಚಟುವಟಿಕೆಗಳ ಮೂಲ ಸ್ವರೂಪ ಸಂಪೂರ್ಣವಾಗಿ ಭಿನ್ನವಾಗಿರುವಂತದ್ದು. ಧರ್ಮ ಪ್ರಸಾರಕ್ಕೆ ಧಾರ್ಮಿಕ ಕೃತಿಗಳ ಭಾಷಾಂತರ ಮೂಲಭೂತವಾಗಿ ಅತ್ಯವಶ್ಯಕ. ಅದರಿಂದಾಗಿಯೇ ಅತ್ಯುತ್ಸಾಹದಿಂದ, ಶ್ರದ್ಧೆಯಿಂದ ಬೈಬಲ್ ಮತ್ತಿತರ ಧಾರ್ಮಿಕ ಕೃತಿಗಳನ್ನು ಕನ್ನಡಕ್ಕೆ ತರಲು ಮುಂದಾದರು. ಇಷ್ಟಾಗಿಯೂ ಸಂಸ್ಕೃತದಲ್ಲಿನ ಧರ್ಮ, ಶಾಸ್ತ್ರ ಗ್ರಂಥಗಳ ಕನ್ನಡ ಭಾಷಾಂತರ, ಕನ್ನಡ ಕೃತಿಗಳ ಸಂಪಾದನೆ ಹಾಗೂ ಸಂಕಲನ ಇದಕ್ಕಿಂತ ಭಿನ್ನವಾಗಿದೆ.

ಈ ಹಿಂದೆ ಪ್ರಸ್ತಾಪಿಸಿದಂತೆ ಕನ್ನಡದ ಸಂದರ್ಭದಲ್ಲಿ ಮತ ಪ್ರಚಾರಕ್ಕೆ ಪೂರಕವಾದ ಭೂಮಿಕೆಯನ್ನು ಸಿದ್ಧಪಡಿಸುವುದು ಮಿಶನರಿಗಳಿಗೆ ಅನಿವಾರ್ಯವಾಗಿತ್ತು. ಅದರಿಂದಾಗಿಯೇ ಸಂಸ್ಕೃತದ ಧಾರ್ಮಿಕ ಕೃತಿಗಳನ್ನು ಕನ್ನಡದಂತಹ ದೇಶೀಯ ಭಾಷೆಗಳಿಗೆ ಭಾಷಾಂತರಿಸುವ ಮೂಲಕ ಧಾರ್ಮಿಕ ವಿಷಯಗಳು ಸ್ಥಳೀಯರಿಗೆ ಅವರದೇ ಭಾಷೆಯಲ್ಲಿ ನೇರವಾಗಿ ಸಿಗುವಂತಹ ಅವಕಾಶ ನೀಡಿದರು. ಈ ಹಿನ್ನೆಲೆಯಲ್ಲಿ ಭಾರತೀಯ ಧಾರ್ಮಿಕ ಕೃತಿಗಳಿಗೆ ಸಂವಾದಿಯಾಗಿ ಬೈಬಲ್ ಮತ್ತಿತರ ಧಾರ್ಮಿಕ ಕೃತಿಗಳನ್ನು ಪುನರ್‌ಲೇಖಿಸಲು ಮುಂದಾದರು. ''ವಿಸ್ತಾರವಾದ ಬೈಬಲ್‌ನ ಸಾರವನ್ನೊಳಗೊಂಡ ಮತ್ತು ಅದರ ಸತ್ಯಗಳನ್ನು ನೇರವಾಗಿ ಎತ್ತಿತೋರಿಸುವ ಅಧಿಕೃತ ಸಂಕ್ಷಿಪ್ತ ಕೃತಿಯೊಂದು ದೇಶೀಯ ಭಾಷೆಯಲ್ಲಿ ಸಿದ್ಧವಾಗಬೇಕು. ಹಿಂದೂ ಧರ್ಮದೊಂದಿಗೆ ಹೋಲಿಸಿ ಕ್ರೈಸ್ತ ತತ್ವಗಳನ್ನು

ಪ್ರಕಾಶಿಸಬೇಕು'' (ಉದ್ಧೃತ, ಹಾವನೂರ, ೨೦೦೦, ಪು.೧೦೩,೧೦೪). ಎಂಬ ಬೆಂಜಮಿನ್ ರೈಸ್‌ನ ಮಾತು ಇದಕ್ಕೆ ಪೂರಕವಾಗಿದೆ.

ಈವರೆಗಿನ ಅಧ್ಯಯನಗಳಲ್ಲಿ ಕ್ರೈಸ್ತ ಮತಾಂತರ ಹಾಗೂ ಧರ್ಮಪ್ರಸಾರದ ಕುರಿತು ಹೇಳುವಾಗ, ಕ್ರೈಸ್ತರು ಭಾರತೀಯ ಧರ್ಮಗಳನ್ನು ದೂಷಿಸಿದರು ಮತ್ತು ತಮ್ಮ ಧರ್ಮ ಮಾತ್ರ ಶ್ರೇಷ್ಠ ಎಂದು ಸಾರಿದರು ಎನ್ನುವಂತಹ ತೀರ್ಮಾನಗಳಿವೆ. ಆದರೆ ಭಾರತೀಯ ಧರ್ಮಗಳು ಹೇಳುವ ಸಂಗತಿಗಳಿಗೂ ಬೈಬಲ್‌ನಲ್ಲಿರುವ ಸಂಗತಿಗಳಿಗೂ ವ್ಯತ್ಯಾಸವಿಲ್ಲ. ಎಲ್ಲಾ ಒಂದೆ, ಅಲ್ಲಿರುವುದು ಒಂದೆ, ಇಲ್ಲಿರುವುದೂ ಒಂದೆ, ಎಂದು ಧರ್ಮಗಳನ್ನು ಮುಖಾಮುಖಿಗೊಳಿಸುವ ಬದಲು ಅವುಗಳನ್ನು ಸಮಾನಾಂತರವಾಗಿರಿಸಿ ಧಾರ್ಮಿಕ ಸಂವೇದನೆಯನ್ನು ರೂಪಿಸಲು ಪ್ರಯತ್ನಿಸಿದರು. ಇಂತಹ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಒಟ್ಟಾರೆಯಾಗಿಯೇ ಧಾರ್ಮಿಕ ಸಂವೇದನೆಗೆ ಒಗ್ಗಿಸುವುದು ಮಿಶನರಿಗಳಿಗೆ ಮುಖ್ಯವಾಗಿತ್ತು. ಅದಕ್ಕಾಗಿ ಕ್ರಿಶ್ಚಿಯನ್ ಮತ್ತು ಹಿಂದೂ ಧರ್ಮಗಳನ್ನು ಪ್ರತ್ಯೇಕಿಸದೆ ಸಮಾನ ಅಂತರದಲ್ಲಿ ಇರಿಸಿರುವುದು ಪರಿಣಾಮಕಾರಿಯಾಗಿದೆ.

ಈ ರೀತಿಯಲ್ಲಿ ಮಿಶನರಿಗಳು ಧಾರ್ಮಿಕ ಸಂವೇದನೆಯನ್ನು ರೂಪಿಸಲು ಭಾಷಾಂತರದ ಮಾದರಿಯನ್ನು ಅನುಸರಿಸಿರುವುದು ಗಮನಾರ್ಹವಾಗಿದೆ. ಹೀಗೆ ಭಾಷಾಂತರದ ನೆಲೆಯಲ್ಲಿ ನಯವಾದ ಧರ್ಮಪ್ರಸಾರದ ದಾರಿಯನ್ನು ಗುರುತಿಸಿಕೊಂಡರು.

ಈ ಹಿನ್ನೆಲೆಯಲ್ಲಿ ಗಮನಿಸಿದರೆ ಮಿಶನರಿಗಳ ಕ್ರೈಸ್ತೇತರ ಧಾರ್ಮಿಕ ಭಾಷಾಂತರ ಚಟುವಟಿಕೆಯೂ ಮೂಲಭೂತವಾಗಿ ಧರ್ಮದ ಭಾಷಾಂತರದ ವ್ಯಾಪ್ತಿಗೆ ಬರುವಂತದ್ದು, ಬೈಬಲ್ ಹಾಗೂ ಇತರ ಧಾರ್ಮಿಕ ಕೃತಿಗಳ ಭಾಷಾಂತರ ಮೂಲಕ ಮತಪ್ರಸಾರ ಮಾಡಬೇಕಿತ್ತು. ಈ ಕಾರ್ಯ ಸುಗಮವಾಗಲು ಮತ್ತು ಇದಕ್ಕೆ ಪೂರಕವಾಗಿ ಇತರ ಧಾರ್ಮಿಕ ಕೃತಿಗಳ ಭಾಷಾಂತರ, ಸಂಪಾದನೆ ಮತ್ತು ಪರಿಷ್ಕಾರಗಳು ನಡೆದವು.

ಈ ರೀತಿಯಲ್ಲಿ ಮಿಶನರಿಗಳ ಭಾಷಾಂತರ ಚಟುವಟಿಕೆಯು ಧಾರ್ಮಿಕ ತಳಹದಿಯಿಂದ ರೂಪುಗೊಂಡರೂ ತನ್ನದೇ ಆದ ವಿಶಿಷ್ಟ ಗುಣಗಳನ್ನು ಅಳವಡಿಸಿಕೊಂಡಿದೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಬಹುದು.

೧. ಬೈಬಲ್‌ನ್ನು ಕೇಂದ್ರವಾಗಿಟ್ಟುಕೊಂಡು ಭಾಷಾಂತರ ಕುರಿತ ಬಹುಮುಖ್ಯವಾದ ತಾತ್ವಿಕ ಚರ್ಚೆಗಳು ಕನ್ನಡದಲ್ಲಿ ನಡೆದವು.

೨. ಧಾರ್ಮಿಕ ಕೃತಿಗಳು ಮೂಲಕ್ಕೆ ನಿಷ್ಠವಾಗಿರಬೇಕು ಎಂಬ ತೀರ್ಮಾನಗಳ ನಡುವೆಯೂ ಬೈಬಲ್‌ನ್ನು ಭಾರತೀಯಗೊಳಿಸಿರುವುದು ಗಮನಾರ್ಹವಾಗಿದೆ.

೩. ಮೂಲದ ಭಾಷೆ ಗೊತ್ತಿದ್ದರೂ ಹಲವಾರು ಹಂತಗಳಲ್ಲಿ ಮಧ್ಯವರ್ತಿ ಭಾಷೆಯಿಂದ ಭಾಷಾಂತರ ನಡೆದಿರುವುದು ಕಂಡುಬರುತ್ತದೆ. ಇದಕ್ಕೆ ಧರ್ಮ ಪ್ರಸರಣದ ವೇಗ ಒಂದೆಡೆ ಪ್ರೇರಣೆಯಾದರೆ, ಇನ್ನೊಂದೆಡೆ ಶೈಕ್ಷಣಿಕ ಉದ್ದೇಶ ಸಹ ಕಾರಣವಾಗಿರುವುದು.

೪. ಬೈಬಲ್‌ನ್ನು ಭಾರತೀಯಗೊಳಿಸುವ ಸಂದರ್ಭದಲ್ಲಿ ವಿವಿಧ ಸ್ತರಗಳಿಗೆ ಅನುಗುಣವಾಗಿ ಬಹು ಭಾಷಾಂತರಗಳನ್ನು ಮಾಡುವುದರ ಬಗ್ಗೆ ಒಲವುಳ್ಳವರಾಗಿದ್ದರು. ಇದರಿಂದಾಗಿ ಮಹಿಳೆಯರಿಗಾಗಿ,

ಮಕ್ಕಳಿಗಾಗಿ ಮತ್ತು ಚರ್ಚುಗಳಿಗಾಗಿ ಪ್ರತ್ಯೇಕವಾಗಿ ನೇರ ಭಾಷಾಂತರ, ಪುನರ್‌ಲೇಖಿ, ಸ್ಪಷ್ಟೀಕರಣಗಳು ನಡೆದಿರುವುದು ಕುತೂಹಲಕಾರಿಯಾಗಿದೆ.

೫. ಕನ್ನಡದ ಛಂದೋ ಪ್ರಕಾರಗಳನ್ನು ಕ್ರೈಸ್ತ ಮತದ ಕೃತಿಗಳನ್ನು ಪುನರ್‌ಲೇಖಿಸುವಾಗ ಚಾಲ್ತಿಗೆ ತಂದು ಮತ್ತೆ ಅದಕ್ಕೆ ಅವಕಾಶ ಕಲ್ಪಿಸಿರುವುದು ವಿಶಿಷ್ಟವಾಗಿದೆ.

ಈ ಚರ್ಚೆಗೆ ಪೂರಕವಾಗಿ ಬೈಬಲ್ ಹೇಗೆಲ್ಲ ಭಾಷಾಂತರಗೊಂಡಿದೆ ಎಂಬುದನ್ನು ಕೆಳಗಿನ ನಕ್ಷೆಯಲ್ಲಿ ನೋಡಬಹುದು.



## ಟಿಪ್ಪಣಿ

೧. ಕರ್ನಾಟಕವೂ ಸೇರಿದಂತೆ ಭಾರತದ ಸಂಸ್ಕೃತಿಯನ್ನು ಧರ್ಮದಿಂದ ಬೇರ್ಪಡಿಸಿ ನೋಡುವುದು ಕಷ್ಟಸಾಧ್ಯ. ಹೀಗಾಗಿ ಮಿಶನರಿಗಳು ಧಾರ್ಮಿಕ ಕೃತಿಗಳನ್ನು ಪ್ರಾಂತೀಯ ಭಾಷೆಗೆ ಭಾಷಾಂತರಿಸುವುದರೊಂದಿಗೆ ಇಂಗ್ಲಿಷ್, ಜರ್ಮನ್ ಮತ್ತಿತರ ಭಾಷೆಗಳಿಗೂ ಭಾಷಾಂತರಿಸಿದರು. ಈ ಕಾರ್ಯವನ್ನು ಐ.ಮಾ. ಮತ್ತಣ್ಣ ಅವರು ಭಾರತೀಯರ ಪುಣ್ಯ ಎಂದು ಗ್ರಹಿಸಿದ್ದಾರೆ. (ನೋಡಿ ಐ.ಮಾ. ಮುತ್ತಣ್ಣ, ವಿದೇಶಿ ವಿದ್ವಾಂಸರ ಕನ್ನಡ ಸೇವೆ, ೧೯೬೪) ಪುಣ್ಯದ ಮಾತು ಏನೇ ಇದ್ದರೂ ಮಿಶನರಿಗಳ ಕೆಲಸದಿಂದ ಭಾರತೀಯರು ಪ್ರಭಾವಿತರಾದರು ಎಂಬುದು ಮಾತ್ರ ನಿಜ.

೨. ಕನ್ನಡ ಭಾಷೆಯನ್ನು ಪ್ರಮಾಣೀಕರಿಸುವ ವಿಚಾರದಲ್ಲಿ ಬಿ.ಎಂ.ಶ್ರೀಯವರು, ಆಲೂರು ಮುಂತಾದವರ ಹೆಸರನ್ನು ಗುರುತಿಸಲಾಗಿದೆ. ಆದರೆ ಬೈಬಲ್‌ಗಳ ಭಾಷಾಂತರದ ಸಂದರ್ಭದಲ್ಲಿ ಭಾಷಾಂತರಕಾರರು ಸುಮಾರು ೧೯ನೇ ಶತಮಾನದ ಕೊನೆಯ ದಶಕದಲ್ಲಿ ಈ ಪ್ರಯತ್ನವನ್ನು ಮಾಡಿದ್ದರು. ಬಿ.ಎಂ.ಶ್ರೀ ಮುಂದಿನ ಭಾಷಾ ಪ್ರಮಾಣೀಕರಣದ ಆಲೋಚನೆಗೆ ಇದು ಪ್ರೇರಣೆಯಾಗಿರಬಹುದಾಗಿದೆ.

೩. ಧಾರ್ಮಿಕ ಸ್ವಾತಂತ್ರದಿಂದ ಭಾರತೀಯ ಸ್ತ್ರೀ ಬಹುತೇಕವಾಗಿ ವಂಚಿತಳಾದರೆ ಮಿಶನರಿಗಳು ಮತಪ್ರಚಾರದ ಹಿನ್ನೆಲೆಯಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಧಾರ್ಮಿಕ ಸಾಹಿತ್ಯವನ್ನು ರಚಿಸಬೇಕೆಂದು ಆಲೋಚಿಸಿರುವರು. ಧಾರ್ಮಿಕ ಸ್ವಾತಂತ್ರ್ಯದ ಈ ಪ್ರಯತ್ನಕ್ಕೆ ಪಶ್ಚಿಮದ ಕೊಡುಗೆಯೇನು ಎಂಬುವ ಕುರಿತು ಅಧ್ಯಯನ ನಡೆಯಬೇಕಾಗಿದೆ.

೪. ಬಹುತೇಕ ಯಕ್ಷಗಾನದ ಪ್ರಸಂಗಗಳು ಪುನರ್‌ಲೇಖಿದ ಮಾದರಿಯಲ್ಲಿಯೇ ರೂಪುಗೊಳ್ಳುತ್ತವೆ. ಪುರಾಣ ಮಹಾಕಾವ್ಯಗಳಿಂದ ಕಥೆಗಳನ್ನು ಆಯ್ದುಕೊಂಡು ಪ್ರಸಂಗದ ಶೀರ್ಷಿಕೆಗೆ ತಕ್ಕಂತೆ ಕತೆಯನ್ನು ಕಟ್ಟುವ ಮತ್ತು ಪ್ರದರ್ಶಿಸುವ ಕೆಲಸ ನಡೆಯುತ್ತದೆ. ಇತ್ತೀಚಿನ ದಿನಗಳಲ್ಲಿ ಯಕ್ಷಗಾನ ವಾಣಿಜ್ಯೀಕರಣಗೊಳ್ಳುತ್ತಿದ್ದರಿಂದ ಪ್ರಸಂಗಗಳು ಪೌರಾಣಿಕದಿಂದ ಸಾಮಾಜಿಕದತ್ತ ಮುಖಮಾಡಿ ಹಲವು ವರ್ಷಗಳೇ ಕಳೆದವು. ಇದರಿಂದಾಗಿ ಆಧುನಿಕ ಪ್ರಸಂಗ ರಚನೆಕಾರರು ಜನಪ್ರಿಯವಾದ ಕನ್ನಡ, ತೆಲುಗು, ತಮಿಳು, ಮಲೆಯಾಳಂ ಮತ್ತು ಹಿಂದಿ ಚಲನಚಿತ್ರದ ಕತೆಗಳನ್ನು ಪ್ರಸಂಗವಾಗಿ 'ಮರುರೂಪಿಸು'ತ್ತಿದ್ದಾರೆ. ಉದಾಹರಣೆಗೆ ಕನ್ನಡದ **ಆಪ್ತಮಿತ್ರ, ನಾಗವಲ್ಲಿ** (೨೦೦೬) ಪ್ರಸಂಗವಾದರೆ, **ಮುಂಗಾರು ಮಳೆ, ಪ್ರೇಮಾಭಿಷೇಕಂ**' (೨೦೦೭) ಎಂದು ಯಕ್ಷಗಾನವಾಗಿ ಅಸಂಖ್ಯ ಪ್ರದರ್ಶನ ಕಂಡು ಮೆಚ್ಚುಗೆಗಳಿಸಿದೆ. ರಜನಿಕಾಂತ ಮತ್ತು ಶಿವಾಜಿಗಣೇಶನ್ ಅಭಿನಯದ ತಮಿಳಿನ **ಪಡಿಯಪ್ಪ** ಚಲನಚಿತ್ರವು ಶಿವರಂಜನಿ ಎಂಬ ಯಕ್ಷಗಾನವಾಗಿ ರೂಪಾಂತರಗೊಂಡು ಪ್ರದರ್ಶನಗೊಂಡಿದೆ. ಈ ರೀತಿ ಸಾಹಿತ್ಯ ಕೃತಿಯೊಂದು 'ರಂಗಕೃತಿ'ಯಾಗಿ ರೂಪಾಂತರವಾಗುವುದು ಮತ್ತು ದೃಶ್ಯಮಾಧ್ಯಮದ ವಿಷಯ ರಂಗಕೃತಿಯಾಗಿ ಪರಿವರ್ತನವಾಗುವ ಕುರಿತು ವಿಸ್ತೃತ ಅಧ್ಯಯನ ಅವಶ್ಯಕ. ಇದು ನಾಟಕ ಮತ್ತು ಯಕ್ಷಗಾನಗಳ ಕುರಿತು ಪ್ರತ್ಯೇಕವಾಗಿ ನಡೆಯಬೇಕಾಗಿದೆ.

೫. ೧೯ನೇ ಶತಮಾನದ ಉತ್ತರಾರ್ಧ ಭಾಷಾಂತರ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಗಮನಾರ್ಹವಾದುದು. ಕನ್ನಡದ ಸಂದರ್ಭದಲ್ಲಿ ರೂಪುಗೊಂಡ ಆಧುನಿಕ ಸಾಹಿತ್ಯ ಪ್ರಕಾರಗಳು ಮತ್ತು ಇತರ ಭಾಷೆಯ ಸಾಹಿತ್ಯ, ಸಾಹಿತ್ಯೇತರ ಕೃತಿಗಳು ಈ ಅವಧಿಯಲ್ಲಿಯೇ ಭಾಷಾಂತರಗೊಳ್ಳಲು ಆರಂಭವಾದವು.

೬. ಸ್ಥಳೀಯರಿಗೆ ಪರಿಚಿತವಾದ ಛಂದೋ ಪ್ರಕಾರ ಹಾಗೂ ಧಾರ್ಮಿಕ ಹೆಸರುಗಳ ಮಾದರಿಯಲ್ಲಿ ಕ್ರೈಸ್ತ ಮತದ ತತ್ವಗಳನ್ನು ಪುನರ್‌ಲೇಖಿಸಿದರೆ ಅವರ ಪ್ರೀತ್ಯಾದಾರಗಳಿಗೆ ಪಾತ್ರರಾಗಬಹುದು. ಇದರಿಂದ ಧರ್ಮದ ಪ್ರಸಾರ, ಪ್ರಚಾರಕ್ಕೆ ಹಾದಿ ಸುಗಮವಾಗಬಹುದೆಂಬ ನಿರೀಕ್ಷೆ ಇದಕ್ಕೆ ಪ್ರೇರಣೆಯಾಗಿರುವ ಸಾಧ್ಯತೆಯಿದೆ.

೭. ಬೈಬಲ್‌ಗಳ ಕನ್ನಡ ಭಾಷಾಂತರವನ್ನು ಗಮನಿಸಿದರೆ ಕರಾವಳಿಯ ಮಂಗಳೂರು, ಉತ್ತರ ಕರ್ನಾಟಕದ ಧಾರವಾಡ ಮತ್ತು ಹೈದರಾಬಾದ್ ಕರ್ನಾಟಕದ ಬಳ್ಳಾರಿ ಮುಖ್ಯ ಕೇಂದ್ರವಾಗಿದ್ದು ಇಲ್ಲಿಂದ ಬೈಬಲ್ ಭಿನ್ನ ರೂಪಗಳಲ್ಲಿ ಭಾಷಾಂತರಗೊಂಡಿರುವುದು ಕಂಡುಬರುತ್ತದೆ.



## ಅಧ್ಯಾಯ-೩

# ಆಧುನಿಕ ಶಿಕ್ಷಣ ಮತ್ತು ಭಾಷಾಂತರ

೩.೧. ಪಠ್ಯ ಪುಸ್ತಕಗಳ ಭಾಷಾಂತರ

೩.೨. ಕನ್ನಡ ಸಾಹಿತ್ಯವನ್ನು ಶಾಲಾಪಠ್ಯಕ್ರಮಕ್ಕೆ ಅಳವಡಿಸುವ ಪ್ರಯತ್ನ

೩.೩. ಶಾಲಾಪಠ್ಯಗಳ ಭಾಷಾಂತರ ಸ್ವರೂಪ

## ಆಧುನಿಕ ಶಿಕ್ಷಣ ಮತ್ತು ಭಾಷಾಂತರ

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಚಟುವಟಿಕೆಯಲ್ಲಿ ಪಠ್ಯಪುಸ್ತಕಗಳ ಭಾಷಾಂತರ ಸಹ ಗಮನಾರ್ಹವಾದುದು. ಬ್ರಿಟೀಶ್ ಆಡಳಿತವು ಕೈಗೊಂಡ ಪ್ರಮುಖ ಸುಧಾರಣೆಯಲ್ಲಿ ಶಿಕ್ಷಣವೂ ಒಂದು. ನಾಡಿನಲ್ಲಾದ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಪಲ್ಲಟಗಳಿಗೆ ಶಿಕ್ಷಣ ಕ್ರಮವೇ ಮೂಲಕಾರಣ: ಮೂಲಧಾತು. ಹೀಗಾಗಿಯೇ ಶಿಕ್ಷಣವನ್ನು ಮನುಷ್ಯನ ಮೂಲಭೂತ ಅವಶ್ಯಕತೆಯಾಗಿ ರೂಪಿಸಿದ ಬ್ರಿಟೀಶ್ ಆಡಳಿತ ಅದನ್ನು ಧರ್ಮ ಹಾಗೂ ರಾಜಕೀಯ ಹಿನ್ನೆಲೆಯಲ್ಲಿ ಗ್ರಹಿಸಿಕೊಂಡಿತು. ವಸಾಹತುಶಾಹಿಯ ಸಂವಹನದ ಪ್ರಧಾನ ಕೇಂದ್ರಗಳಾದ 'ಧರ್ಮ' ಮತ್ತು 'ರಾಜಕಾರಣ' ಒಂದಕ್ಕೊಂದು ಪೂರಕವಾಗಿ ಆಧುನಿಕ ಶಿಕ್ಷಣವನ್ನು ಪಶ್ಚಿಮದಿಂದ ಇಲ್ಲಿಗೆ ಭಾಷಾಂತರಿಸಿಕೊಂಡವು.

''ಬ್ರಿಟಿಷರ ಸಂಪರ್ಕ ನಮಗೆ ಬಂದ ಮೇಲೆ ನಮ್ಮ ದೇಶದಲ್ಲಿ ನಡೆದ ಬದಲಾವಣೆಯ ಪ್ರಕ್ರಿಯೆಗಳೂ ಒಂದು ದೃಷ್ಟಿಯಿಂದ ಭಾಷಾಂತರಗಳೇ ಆಗಿವೆ. ವಿದ್ಯಾವಂತರು ಇಂಗ್ಲಿಷ್ ಭಾಷೆಯನ್ನು ಕಲಿತದ್ದು, ಮಿಶನರಿಗಳು ಮತಾಂತರ ನಡೆಸಿದ್ದು, ಭೂಮಿಗಳನ್ನು ವಿಂಗಡಿಸಿ ಜಮಿನ್ದಾರ, ರೈತವಾರಿಯಂಥ ವ್ಯವಸ್ಥೆಗಳಲ್ಲಿ ಅವುಗಳನ್ನು ಸೇರಿಸಿದ್ದು, ಸಂಚಾರದ ಹೊಸ ಸಾಧನಗಳು, ಹೊಸ ರಸ್ತೆಗಳು, ಅಂಚೆ ತಂತಿಯಂಥ ಹೊಸ ವ್ಯವಸ್ಥೆಗಳು, ಕೋರ್ಟು ಕಛೇರಿಗಳು "ಇಂಥ ಎಲ್ಲಾ ಕಾರ್ಯ ವ್ಯವಸ್ಥೆಗಳು ಭಾಷಾಂತರ ರೂಪಗಳೇ ಆಗಿವೆ" (ಕುರ್ತಕೋಟಿ ೧೯೯೮ ಪು.೪). ಎಂದರೆ ಹತ್ತೊಂಬತ್ತನೇ ಶತಮಾನದಲ್ಲಾದ ಬಹುತೇಕ ಪಲ್ಲಟಗಳು ಭಾಷಾಂತರಗಳೇ ಆಗಿವೆಯೆಂದಾಯಿತು.

ಈ ರೀತಿಯಲ್ಲಿ ಹತ್ತೊಂಬತ್ತನೇ ಶತಮಾನದಲ್ಲಾದ ಎಲ್ಲಾ ಪರಿವರ್ತನೆ ಪಲ್ಲಟಗಳ ಹಿಂದೆ ಆಧುನಿಕ ಶಿಕ್ಷಣದ ಪ್ರಭಾವ, ಪ್ರೇರಣೆಗಳಿವೆ. ಈ ಶಿಕ್ಷಣ ಕ್ರಮ ತನ್ನ ಸ್ವರೂಪ ಮತ್ತು ತಾತ್ವಿಕತೆಯಿಂದ ಇದಕ್ಕೂ ಪೂರ್ವದ ಸಾಂಪ್ರದಾಯಿಕ ಎನ್ನಬಹುದಾದ ಶಿಕ್ಷಣ ಪದ್ಧತಿಗಿಂತ ಭಿನ್ನವಾದುದು. ಆಧುನಿಕ ಶಿಕ್ಷಣ ಪರಿಕಲ್ಪನೆಯೆ ಕನ್ನಡಿಗರಿಗೆ (ಭಾರತೀಯರಿಗೂ) ಅಪರಿಚಿತವಾದುದು. ಅಪರಿಚಿತ ಪರಿಕಲ್ಪನೆಯ ಪರಿಚಯ ಮತ್ತು ಅನುಷ್ಠಾನದಲ್ಲಿ ಬ್ರಿಟೀಶ್

ಅಧಿಕಾರಿಗಳು ಮತ್ತು ಮಿಶನರಿಗಳು ಪ್ರಮುಖ ಪಾತ್ರವಹಿಸಿದ್ದಾರೆ. ಆಧುನಿಕ ಶಿಕ್ಷಣ ಕ್ರಮ ಪಶ್ಚಿಮದಿಂದ ಕನ್ನಡದ ಸಂದರ್ಭಕ್ಕೆ ಅಳವಡಿಕೆಗೊಂಡಿರುವುದರೊಂದಿಗೆ ಇದರ ಭಾಗವಾಗಿ 'ಶಾಲಾಪಠ್ಯ ಪುಸ್ತಕ'ಗಳು ಮತ್ತು ಶಾಲಾಪಠ್ಯಗಳು ಸಹ ಬಂದಿವೆ. ಹೀಗೆ ಆಧುನಿಕ ಶಿಕ್ಷಣ ಕನ್ನಡಕ್ಕೆ ಹೇಗೆ ಬಂದವು ಎಂಬುದನ್ನು ಮುಂದೆ ಗಮನಿಸಬಹುದು.

ಆಧುನಿಕಪೂರ್ವ ಸಂದರ್ಭದಲ್ಲಿ ಮಠ-ಮಂದಿರಗಳು ಮತ್ತು ಕೆಲವು ಮನೆಗಳಲ್ಲಿ ಸಹ ಮಕ್ಕಳಿಗೆ ವಿದ್ಯಾಭ್ಯಾಸ ನೀಡುವ ಪರಂಪರೆಯೊಂದಿತ್ತು. ಈ ಅವಕಾಶವು ಕೆಲವರಿಗೆ ಮಾತ್ರ ದೊರೆಯುತ್ತಿದ್ದರಿಂದ ಆಧುನಿಕ ಶಿಕ್ಷಣ ಬಂದಾಗ ಹಳ್ಳಿಗಳಲ್ಲಿ ಶಾಲೆಗಳು ಸ್ಥಾಪನೆಗೊಂಡವು. ಇದರಿಂದಾಗಿ ಎಲ್ಲರಿಗೂ ಶಿಕ್ಷಣ ಪಡೆಯಲು ಅವಕಾಶ ದೊರೆಯಿತು. ಹೀಗೆ ಸಾಂಪ್ರದಾಯಿಕ ಹಂತದಿಂದ ಶಿಕ್ಷಣ ವ್ಯವಸ್ಥೆಯು ಆಧುನಿಕತೆಗೆ ಪರಿವರ್ತನೆಗೊಂಡಿತು. ಬ್ರಿಟೀಶ್ ಆಡಳಿತವು ಪ್ರಸ್ತುತ ಸಂದರ್ಭದಲ್ಲಿ ತಮ್ಮ ದೇಶದಲ್ಲಿನ ಶೈಕ್ಷಣಿಕ ಸ್ವರೂಪವನ್ನು ಇಲ್ಲಿನ ಶೈಕ್ಷಣಿಕ ಸ್ವರೂಪಕ್ಕೆ ಹೊಂದಿಸುವ ಪ್ರಯತ್ನ ಮಾಡಿತು. ಇದರ ಹಿಂದೆ ಪಶ್ಚಿಮದವರಿಗೆ ಸ್ವ-ಹಿತಾಸಕ್ತಿಯ ಪ್ರೇರಣೆಯಿದ್ದರೂ ಶಿಕ್ಷಣದ ಪರಿಣಾಮ ದೇಶಿಯರಲ್ಲಿ ಹೊಸ ಸಂಚಲನವನ್ನು ನೀಡಿರುವುದು ಉಲ್ಲೇಖಾರ್ಹ.

ಈ ರೀತಿಯ ಸಂಚಲನವು ಕನ್ನಡದ ಭೂಮಿಕೆಯಲ್ಲಿ ಉದ್ಭವಗೊಳ್ಳಲು ಅಥವಾ ಮೈದಾಳಲು ಕಾರಣಗಳೇನೆಂದರೆ ''ನಾಡಿನ ಆಡಳಿತವನ್ನು ವಹಿಸಿಕೊಂಡು ಬ್ರಿಟೀಶರ ದೃಷ್ಟಿಯಲ್ಲಿ ಆಗಿನ ದೇಶೀಯ ಶಿಕ್ಷಣ ಪದ್ಧತಿಯಲ್ಲಿದ್ದ ಮುಖ್ಯ ದೋಷಗಳೆಂದರೆ, ಶಿಕ್ಷಣ ವ್ಯಾಪಕವಾಗಿರದೆ ಕೆಲವೇ ಜನ ಅದರ ಪ್ರಯೋಜನ ಪಡೆಯುತ್ತಿದ್ದರೆಂಬುದು ಒಂದು. ಇನ್ನೂ ಪ್ರಾಥಮಿಕ ಮಟ್ಟದ ಅಕ್ಷರ ಲೆಕ್ಕಗಳ ತಿಳುವಳಿಕೆ ಇಲ್ಲವೇ ಕೆಲವೇ ಕಾವ್ಯ-ಶಾಸ್ತ್ರ ಗ್ರಂಥಗಳ ಪಠಣ, ಇಷ್ಟನ್ನು ಬಿಟ್ಟರೆ ಪ್ರಪಂಚದ ಅನೇಕ ಆಗುಹೋಗುಗಳ ಮತ್ತು ಉಪಯುಕ್ತ ವಿಷಯಗಳ ಪರಿಜ್ಞಾನ ಇಲ್ಲದೆ ಹೋದದ್ದು ಎರಡನೆಯ ಕೊರತೆಯಾಗಿ ಕಂಡಿತು. ಇತರೆ ಲೋಪಗಳೆಂದರೆ ಉಪಾಧ್ಯಾಯರಿಗೆ ಮೂಲಭೂತ ತರಬೇತಿಯಾಗಲಿ, ತಕ್ಕ ಯೋಗ್ಯತೆಯಾಗಲಿ ಇಲ್ಲದಿದ್ದುದು, ಅದರಂತೆ ಮಕ್ಕಳು ಕಲಿಯಲು ಯಾವುದೇ ಬಗೆಯ ಪಠ್ಯ ಪುಸ್ತಕಗಳು ಇಲ್ಲದಿದ್ದುದು'' (ಹಾವನೂರ, ೨೦೦೦, ಪು.೬೫) ಹೀಗಾಗಿ ಈ ಕುರಿತಾದ ಆಲೋಚನೆಗಳು ಆರಂಭಗೊಂಡವು.

**೩.೧. ಪಠ್ಯ ಪುಸ್ತಕಗಳ ಭಾಷಾಂತರ**

ಶಿಕ್ಷಣದಲ್ಲಿನ ಮೂಲ ಸಮಸ್ಯೆ ಮತ್ತು ಕೊರತೆಗಳನ್ನು ಸರಿಪಡಿಸುವುದರೊಂದಿಗೆ ಹೊಸ ಸಾಧ್ಯತೆಗಳಿಗಾಗಿ ಮಿಶನರಿಗಳು ಆಧುನಿಕ ಶಿಕ್ಷಣವನ್ನು ಕಾರ್ಯರೂಪಕ್ಕೆ ತಂದವು. 'ಆಧುನಿಕ ಶಿಕ್ಷಣ'ವೆ ಪಶ್ಚಿಮದಿಂದ ಇಲ್ಲಿಗೆ ಬಂದಿದ್ದರಿಂದ ಪಠ್ಯ ಪುಸ್ತಕಗಳನ್ನು ಸಹ ಬೇರೆ ಬೇರೆ ಮೂಲಗಳಿಂದ ಕನ್ನಡಕ್ಕೆ ತಂದುಕೊಳ್ಳುವುದು ಅನಿವಾರ್ಯವಾಯಿತು. ದೇಶೀಯ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯ ಪುಸ್ತಕದ ಪರಿಕಲ್ಪನೆಯೇ ಇರಲಿಲ್ಲ. ಯಾಕೆಂದರೆ ಎಲ್ಲದಕ್ಕೂ, ಎಲ್ಲಾ ವಯಸ್ಸಿನವರಿಗೂ 'ಅಮರಕೋಶ'ವೊಂದೆ ಉತ್ತರವಾಗಿತ್ತು. ಅಥವಾ ಪ್ರತ್ಯೇಕವಾದ ಪಠ್ಯದ ಅವಶ್ಯಕತೆ ಇರಲಿಲ್ಲ ಎಂತಲೂ ಹೇಳಬಹುದು. ಆದರೆ ಮೂಲಭೂತವಾಗಿ ಆಧುನಿಕ ಶಿಕ್ಷಣ ನಿಂತಿರುವುದೆ 'ಪಠ್ಯ ಪುಸ್ತಕ'ದ ಪರಿಕಲ್ಪನೆಯಲ್ಲಿ. ಇದರಿಂದಾಗಿ ಪಠ್ಯ ಪುಸ್ತಕಗಳು ಶಿಕ್ಷಣಕ್ಕೆ ಅನಿವಾರ್ಯ. ಹೀಗಾಗಿ ಪಠ್ಯ ಪುಸ್ತಕಗಳನ್ನು ರೂಪಿಸಿಕೊಳ್ಳುವ ಪ್ರಯತ್ನ ಈ ಅವಧಿಯಲ್ಲಿ ಮುನ್ನೆಲೆಗೆ ಬಂದಿತು. ದೇಶೀಯ ಭಾಷೆಗಳಲ್ಲಿ ಪಠ್ಯ ಪುಸ್ತಕಗಳು

ಇಲ್ಲದ ಕಾರಣ ಮತ್ತು ಅದನ್ನು ರಚಿಸುವ ಇಚ್ಛಾಶಕ್ತಿಯ ಕೊರತೆಯಿಂದಾಗಿ ಈಗಾಗಲೆ ಬೇರೆ ಬೇರೆ ಭಾಷೆಗಳಲ್ಲಿ ಸಿದ್ಧಗೊಂಡಿರುವ ಪಠ್ಯ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಪ್ರಯತ್ನಗಳು ನಡೆದವು.

ಸರಿ ಸುಮಾರು ೧೮೨೦ರ ನಂತರದಲ್ಲಿ ಆಧುನಿಕ ಶಿಕ್ಷಣದ ಪ್ರಸಾರ ಆರಂಭಗೊಂಡಿತು. ಬಹುಕಾಲದವರೆಗೆ ಭಾಷಾಂತರ ಚಟುವಟಿಕೆಯೇ ಶಾಲಾಪಠ್ಯಗಳ ಅವಶ್ಯಕತೆಯನ್ನು ಪೂರೈಸಿರುವುದು ಭಾಷಾಂತರ ಪ್ರಕ್ರಿಯೆಯ ಸಂದರ್ಭದಲ್ಲಿ ಮುಖ್ಯವಾದುದು. ಆಧುನಿಕ ಶಿಕ್ಷಣದ ಸಂದರ್ಭದಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಮಹಿಳೆಯರಿಗೆ ನೀಡಿದ ಶೈಕ್ಷಣಿಕ ಅವಕಾಶ ಹಾಗೂ ಅವರಿಗಾಗಿ ಪ್ರತ್ಯೇಕ ಪಠ್ಯ ಮತ್ತು ಶಾಲೆಗಳನ್ನು ತೆರೆದಿರುವುದು. ಈ ಸಂಗತಿ ಪೂರ್ವದ ಶಿಕ್ಷಣದ ಕ್ರಮದಿಂದ ಆಧುನಿಕ ಶಿಕ್ಷಣದಲ್ಲಾದ ಒಂದು ಮುಖ್ಯ ಬದಲಾವಣೆಯನ್ನು ತಿಳಿಸುತ್ತದೆ.[೧]

ಸಾಂಪ್ರದಾಯಿಕ ಶಿಕ್ಷಣವನ್ನು ಬದಲಾಯಿಸಿ ಅದರ ಜಾಗದಲ್ಲಿ ಪಶ್ಚಿಮ ಮೂಲದ ಶಿಕ್ಷಣವನ್ನು ತಂದು ಅನುಷ್ಠಾನಗೊಳಿಸಿರುವ ಕ್ರಮದೊಂದಿಗೆ ಅದರ ಅಂಗವಾಗಿ ಬಂದಿರುವ ಪಠ್ಯ ಪುಸ್ತಕ ಹಾಗೂ ಶಿಕ್ಷಣದ ಸ್ವರೂಪ, ವಯೋಮಾನ ಮತ್ತು ಲಿಂಗಗಳ ಹಿನ್ನೆಲೆಯಲ್ಲಿ ರೂಪುಗೊಂಡ ನಿರ್ಧಾರಗಳೆಲ್ಲಾ ಭಾಷಾಂತರದ ರೂಪಗಳೇ ಆಗಿವೆ.

'ಪಠ್ಯ ಪುಸ್ತಕ'ಗಳ ಪರಿಕಲ್ಪನೆಯೇ ಪಶ್ಚಿಮದಿಂದ ಭಾಷಾಂತರಗೊಂಡಿರುವುದರೊಂದಿಗೆ ವಿದ್ಯಾರ್ಥಿಗಳಿಗೆ ಅವಶ್ಯಕವಿದ್ದ ಪಠ್ಯ ಪುಸ್ತಕಗಳನ್ನು ಬೇರೆ ಬೇರೆ ನೆಲೆಗಳಿಂದ ಕನ್ನಡಕ್ಕೆ ತಂದುಕೊಂಡರು. ಅವುಗಳೆಂದರೆ 'ಅಂಕ ಗಣಿತದ ಮೊದಲ ಪುಸ್ತಕ' (೧೮೭೫), 'ಕನ್ನಡ ಶಿಸ್ತು ಬೋಧನೆ ವರ್ಣಮಾಲೆ' (೧೯೯೬), 'ಗಣಿತ ತತ್ವಗಳು' (೧೮೭೦), 'ಚಿಕ್ಕವರಿಗೆ ತಕ್ಕಂಥ ಪಾಠಗಳು' (೧೮೫೪), 'ನೀನು ವಿಜ್ಞಾನಿಯಾಗು' (೧೮೫೯), 'ಇಂದಿನ ವಿಜ್ಞಾನಿ ಮತ್ತು ಇಂದಿನ ಮಾನವ' (೧೯೯೩), 'ಪದಾರ್ಥ ವಿಜ್ಞಾನದ ಮೂಲ ತತ್ವಗಳು' (೧೯೯೧), ಇತ್ಯಾದಿ. ಇಲ್ಲಿನ ಯಾವುದೇ ಒಂದು ಕೃತಿ ನೇರವಾಗಿ ಕನ್ನಡದಲ್ಲಿ ರಚನೆಗೊಂಡವಲ್ಲ. ಗ್ಯಾರೆಟ್, ಜಗ್ಲರ್, ಜೇಮ್ಸ್ ಬಿ ಮತ್ತು ಥಿಓಡರ್ ಮುಂತಾದ ಮಿಶನರಿಗಳು ಈಗಾಗಲೇ ಇಂಗ್ಲಿಷ್ ಮತ್ತಿತರ ಭಾಷೆಗಳಲ್ಲಿರುವ ಕೃತಿಗಳನ್ನು ಅನುಸರಿಸಿ ಕನ್ನಡದ ಪಠ್ಯ ಪುಸ್ತಕಗಳಾಗಿ ರೂಪಿಸಿದರು. ಇವುಗಳನ್ನು ಗಮನಿಸಿದಾಗ ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ರಚನೆಗೊಂಡ ಪಠ್ಯಗಳು ಮೂಲಭೂತವಾಗಿ ಭಾಷಾಂತರ ಕ್ರಮದಿಂದಲೇ ಬಂದವುಗಳು ಎಂಬುದು ತಿಳಿದುಬರುತ್ತದೆ.

ಹೀಗೆ ಇಂಗ್ಲಿಷರಿಂದ ಪರಿವರ್ತನೆಗೊಂಡ ಅಥವಾ ಭಾಷಾಂತರಗೊಂಡ ಆಧುನಿಕ ಶಿಕ್ಷಣದ ಭಾಗವಾಗಿ 'ಶಾಲಾ ಪಠ್ಯ ಪುಸ್ತಕ'ಗಳು ರೂಪಗೊಂಡವು. ಈ ಪರಿಕಲ್ಪನೆ ಕೆಲವು ವಿಚಾರಗಳಲ್ಲಿ ಕನ್ನಡಿಗರಿಗೆ ಹೊಸದಾದುದು.

೧. ಪಠ್ಯಗಳನ್ನು ಸಿದ್ಧಪಡಿಸುವಲ್ಲಿ ಲಿಂಗ, ವಯೋಮಾನಗಳನ್ನು ಗಣನೆಗೆ ತೆಗೆದುಕೊಂಡು ಮಹಿಳಾ ಶಿಕ್ಷಣಕ್ಕಾಗಿ, ಮಕ್ಕಳಿಗಾಗಿ ಎನ್ನುವ ರೀತಿಯಲ್ಲಿ ಪಠ್ಯ ಪುಸ್ತಕಗಳ ರಚನೆಯಾದುದು ಕಂಡು ಬರುತ್ತದೆ. ಈ ರೀತಿಯಲ್ಲಿ ಭಾಷಾಂತರಗೊಂಡ ಶಿಕ್ಷಣ ಕ್ರಮದಿಂದಾಗಿ ಮಹಿಳೆಯರಿಗಾಗಿ ಪ್ರತ್ಯೇಕ ಶಾಲೆ-ಕಾಲೇಜುಗಳನ್ನು ತೆರೆದಿರುವಂತೆ ಅವರಿಗಾಗಿಯೇ ಪ್ರತ್ಯೇಕ ಪಠ್ಯಕ್ರಮ ಸಹ ಸಿದ್ಧಗೊಂಡಿರುವುದನ್ನು ಕಾಣಬಹುದು. ಇಂತಹ ಪಠ್ಯಕ್ರಮದ ವ್ಯಾಪ್ತಿಗೆ ಒಳಪಡುವ ಪುಸ್ತಕಗಳೆಂದರೆ 'ಕನ್ನಡ ಕಲಿಕೆಯ ಮೊದಲ ಪುಸ್ತಕ' (೧೯೬೩) ಇದರಲ್ಲಿ ಹೆಣ್ಣು ಮಕ್ಕಳ ಉಪದೇಶ,

ವಿಕ್ಟೋರಿಯಾ ರಾಣಿಸ್ತುತಿ ಮುಂತಾದ ಭಾಗಗಳಿವೆ. ಬಸವಪ್ಪಶಾಸ್ತ್ರಿಯವರು ಬರೆದ 'ದಮಯಂತೀ ಸ್ವಯಂವರ' ಸಹ ಬಾಲಕಿಯರಿಗಾಗಿಯೇ ಸಿದ್ಧಗೊಂಡ ಪಠ್ಯವಾಗಿದೆ.

'ಬಾಲವ್ಯಾಕರಣ' (೧೮೬೩), 'ಬಾಲಕರು ಓದುವ ಪಾಠಗಳು' (೧೮೩೩), 'ಬಾಲಕರ ಕನ್ನಡ ಪಾಠಗಳ ಮೊದಲ ಪುಸ್ತಕ' (೧೮೬೬), ಎರಡನೆಯ ಪುಸ್ತಕ (೧೮೬೬), 'ಬಾಲಕರು ಓದತಕ್ಕ ಪಾಠಗಳು' (೧೮೬೮), 'ಬಾಲಕರ ಗೀತೆಗಳು' (೧೮೬೯) ಇತ್ಯಾದಿ. ಈ ಎಲ್ಲಾ ಪಠ್ಯಗಳನ್ನು ಸಂಪಾದಿಸಿದವನು ಜೆ.ಮ್ಯಾಕ್ ಎಂಬಾತ. ಇವುಗಳೆಲ್ಲವು ಆಧುನಿಕ ಶಿಕ್ಷಣ ಕ್ರಮದಿಂದ ರೂಪಗೊಂಡ ಪಠ್ಯಕ್ರಮದ ಫಲಿತಗಳಾಗಿವೆ. 'ಪಠ್ಯಕ್ರಮ'ವೆಂಬುದು ಪಶ್ಚಿಮದಿಂದ ಕನ್ನಡಕ್ಕೆ ಬಂದಂತೆ, ಈ ಹಿನ್ನೆಲೆಯಲ್ಲಿ ರೂಪುಗೊಂಡ ಪಠ್ಯಗಳು ಸಹ ಬೇರೆ ಬೇರೆ ಮೂಲಗಳಿಂದ ಭಾಷಾಂತರ, ಪುನರ್‌ಲೇಖಗಳ ಮಾದರಿಯಲ್ಲಿ ಕನ್ನಡಕ್ಕೆ ಬಂದಿವೆ.

೨. ಪಶ್ಚಿಮದ ಕೆಲವು ಮಹತ್ವದ ಜ್ಞಾನಕ್ಷೇತ್ರಗಳನ್ನು ಪರಿಚಯಿಸುವ ಮೂಲಕವೂ ಪಠ್ಯ ಪುಸ್ತಕಗಳನ್ನು ರಚಿಸಿದರು. ವಿಜ್ಞಾನ, ತಂತ್ರಜ್ಞಾನ, ಪರಮಾಣು, ಆಧುನಿಕ ಬೇಸಾಯ, ಭೂಗೋಳ, ಸೌರವಲಯ ಮುಂತಾದ ವಿಷಯಗಳನ್ನು ಶಾಲಾ ವಿದ್ಯಾರ್ಥಿಗಳಿಗೆ ತಿಳಿಸಬೇಕೆಂದು ಕೆಲವನ್ನು ನೇರವಾಗಿ ಭಾಷಾಂತರಿಸಿಕೊಂಡರೆ, ಇನ್ನೂ ಕೆಲವನ್ನು ಬಹು ಮೂಲಗಳಿಂದ ಭಾಷಾಂತರಿಕೊಂಡು ಪಠ್ಯ ಪುಸ್ತಕಗಳನ್ನು ಸಿದ್ಧಪಡಿಸಿದರು.

೩. ಈಗಾಗಲೇ ನಮ್ಮಲ್ಲಿರುವ ವ್ಯಾಕರಣ, ಶಾಸ್ತ್ರಸಂಬಂಧಿ ಕೃತಿಗಳನ್ನು ಪಶ್ಚಿಮದ ಜ್ಞಾನ ಪ್ರಣಾಳಿಕೆಯಲ್ಲಿ: ವೈಧಾನಿಕತೆಯಲ್ಲಿ ಪಠ್ಯ ಪುಸ್ತಕಗಳಾಗಿ ಪ್ರಸ್ತುತಪಡಿಸಿರುವುದು ಗಮನಾರ್ಹವಾಗಿದೆ.

೪. ಕನ್ನಡ ಪ್ರಾಚೀನ ಕಾವ್ಯಗಳನ್ನು ಕಾಲಾನುಕ್ರಮದಲ್ಲಿ ಜೋಡಿಸುವ, ಅದಕ್ಕೊಂದು ಚಾರಿತ್ರಿಕ ನೆಲೆಯನ್ನು ಗುರುತಿಸುವ ರೀತಿಯಲ್ಲಿ ಪ್ರಾಚೀನ ಕಾವ್ಯಗಳನ್ನಾಯ್ದು ವಿವಿಧ ಭಾಗಗಳಲ್ಲಿ ವಿಂಗಡಿಸಿಕೊಂಡು ಪಠ್ಯ ಪುಸ್ತಕಗಳಾಗಿ ಪುನರ್‌ಲೇಖಿಸುವ ಪ್ರಯತ್ನ ಮಾಡಿದರು. ಈ ಸಂಬಂಧಿತ ಶಾಲಾಪಠ್ಯ ಪುಸ್ತಕಗಳ ಭಾಷಾಂತರ ಪಟ್ಟಿಯನ್ನು ಅನುಬಂಧ ೧ರಲ್ಲಿ ಕೊಡಲಾಗಿದೆ.

ಹೀಗೆ ಶೈಕ್ಷಣಿಕ ಕ್ರಾಂತಿಗೆ ಕಾರಣವಾದ ಬ್ರಿಟೀಶ್ ಆಡಳಿತವು ಮಿಶನರಿಗಳ ಮತ್ತು ದೇಶಿಯರಿಂದ ಹೊಸ ಜ್ಞಾನ ಶಿಸ್ತುಗಳಿಗೆ ಸಂಬಂಧಿಸಿದ ಬಹುತೇಕ ಪಠ್ಯಗಳನ್ನು ಭಾಷಾಂತರದ ಮೂಲಕವೇ ಪಡೆದುಕೊಂಡಿರುವುದು ಮಹತ್ವದ್ದಾಗಿದೆ. ಈ ವೇಳೆಯಲ್ಲಿ ಪಠ್ಯವನ್ನು ವಯೋಮಾನ ಮತ್ತು ಲಿಂಗಗಳಿಗೆ ಅನುಸಾರವಾಗಿ ರೂಪಿಸಿಕೊಂಡಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಶಾಲಾಪಠ್ಯಗಳಿಗೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ಗುರುತಿಸಬಹುದು.

೧. ಶಾಲಾ ವಿದ್ಯಾರ್ಥಿಗಳಿಗಾಗಿ ಪ್ರಾಚೀನ ಕಾವ್ಯ ಪುರಾಣಗಳನ್ನು ಸರಳಭಾಷಾಂತರ, ಗದ್ಯಭಾಷಾಂತರ ಮತ್ತು ಪುನರ್‌ಲೇಖಗಳ ಮಾದರಿಗಳಲ್ಲಿ ಪಠ್ಯಗಳನ್ನಾಗಿ ರೂಪಿಸಿಕೊಂಡರು.

೨. ಪಶ್ಚಿಮದ ಚರಿತ್ರೆ, ಸಾಹಿತ್ಯ ಮತ್ತು ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ವಿಚಾರಗಳನ್ನು ನೀತಿಕತೆಯ ಸ್ವರೂಪದಲ್ಲಿ ಪರಿವರ್ತಿಸಿಕೊಳ್ಳುವ ಪ್ರಯತ್ನಗಳು ನಡೆದವು.

೩. ಕನ್ನಡದ ಪುರಾಣ ಕಥೆಗಳ ಭಾಗಗಳನ್ನು ಮಕ್ಕಳ ವಯಸ್ಸು, ಲಿಂಗಾಧಾರಿತ ನೆಲೆಯಲ್ಲಿ ಪುನರ್‌ಲೇಖಿಸುವ ಪರಂಪರೆಯನ್ನು ಶಾಲಾಪಠ್ಯಗಳ ಸಂದರ್ಭದಲ್ಲಿ ರೂಪಿಸಿಕೊಂಡರು.

೪. ಶಾಲಾಪಠ್ಯಗಳನ್ನು ಹೊಸ ಸಾಹಿತ್ಯ ಪ್ರಕಾರಗಳಾದ ಭಾವಗೀತೆ, ಕಥೆ ಮತ್ತು ಶಿಶುಗೀತೆ ಇತ್ಯಾದಿ ಮಾದರಿಗಳಿಗೆ ಹೊಂದಿಸಿಕೊಳ್ಳಲು ಪ್ರಯತ್ನಿಸಿದರು.

ಹೀಗೆ ಭಾಷಾಂತರದ ಹಲವು ಮಾದರಿಗಳ ಮೂಲಕ ಪಠ್ಯಗಳನ್ನು ಕನ್ನಡದ ಓದಿಗೆ ಮರುರೂಪಿಸುವ ಪ್ರಯತ್ನದಲ್ಲಿ ಕನ್ನಡದ ಶಾಲಾಪಠ್ಯಗಳು ಸಿದ್ಧಗೊಂಡವು.

**೩.೨ ಕನ್ನಡ ಸಾಹಿತ್ಯವನ್ನು ಶಾಲಾಪಠ್ಯ ಕ್ರಮಕ್ಕೆ ಅಳವಡಿಸುವ ಪ್ರಯತ್ನ**

ಹತ್ತೊಂಬತ್ತನೆಯ ಶತಮಾನದಲ್ಲಿನ ಪ್ರಮುಖ ಪುನರ್‌ಲೇಖಿಗಳಲ್ಲಿ ಶಾಲಾಪಠ್ಯ ಪುಸ್ತಕಗಳು ಪ್ರಧಾನವಾಗಿ ಸೇರಿಕೊಂಡಿರುವುದನ್ನು ಕಾಣಬಹುದು. ಶಾಲಾಪಠ್ಯಗಳ ಬೇಡಿಕೆಗೆ ಅನುಸಾರವಾಗಿ ಮಿಶನರಿಗಳು, ಕ್ರೈಸ್ತ ಅಧಿಕಾರಿಗಳು ಮತ್ತು ದೇಶೀಯ ವಿದ್ವಾಂಸರು ಬೇರೆ ಬೇರೆ ಮಾದರಿಗಳಲ್ಲಿ ಪಠ್ಯಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದರು. ಇದರಿಂದಾಗಿಯೇ ಪ್ರಾಚೀನ ಮಹಾಕಾವ್ಯ ಪುರಾಣಗಳು ಮತ್ತು ಇವುಗಳ ಕೆಲವು ಆಯ್ದ ಭಾಗಗಳು ಶೈಕ್ಷಣಿಕ ಉದ್ದೇಶದಿಂದ ಪುನರ್‌ಲೇಖಕ್ಕೆ ಒಳಗಾಗುವ ಮೂಲಕ ಹೊಸ ಸಾಧ್ಯತೆಯೊಂದನ್ನು ಕಂಡುಕೊಂಡಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಸುಮಾರು ೧೮೬೨ ರಿಂದ ೬೬ರ ಅವಧಿಯಲ್ಲಿ 'ಕಥಾಮಂಜರಿ', 'ರಾವಣ ದಿಗ್ವಿಜಯ', 'ಚನ್ನಬಸವ ಪುರಾಣ'ದ ಕೆಲವು ಭಾಗಗಳು, ಕಥಾಸಪ್ತತಿಗಳು, ಶಾಲಾಪಠ್ಯಗಳಾಗಿ ಪರಿವರ್ತನೆಗೊಂಡಂತೆ 'ಕಲಾವತೀ ಪರಿಣಯ', 'ಮಿತ್ರಾವಿಂದ ಗೋವಿಂದ', 'ದಮಯಂತೀ ಸ್ವಯಂವರ'. 'ಅದ್ಭುತ ರಾಮಾಯಣ' ಇತ್ಯಾದಿಗಳು ಸಹ ಶಾಲಾಪಠ್ಯಗಳ ರೂಪದಲ್ಲಿ ಹೊಸ ಓದಿಗಾಗಿ ಪುನರ್‌ಲೇಖಿಗೊಂಡಿವೆ.

ಆಧುನಿಕ ಶಿಕ್ಷಣದ ಭಾಗವಾಗಿ ರೂಪಗೊಂಡ ಪಠ್ಯಪುಸ್ತಕಗಳು ಆರಂಭದಲ್ಲಿ ಸಿದ್ಧಗೊಂಡಿರುವುದೇ ಭಾಷಾಂತರ ಚಟುವಟಿಕೆಯ ಮೂಲಕ. ಈ ಹಿನ್ನೆಲೆಯಲ್ಲಿ ಕೆಲವು ಪಠ್ಯಗಳನ್ನು ಚರ್ಚಿಸಬಹುದು. ಇದರಲ್ಲಿ ಪ್ರಮುಖವಾದವುಗಳೆಂದರೆ, 'ಸಂಣಕರ್ಣಾಟಕ ಕಾವ್ಯ ಮಾಲೆ' (೧೮೬೫) ಮತ್ತು 'ಪ್ರಾಕ್ಕಾವ್ಯ ಮಾಲಿಕೆ' ( Conarese poftical Anthology. 1965) ಇತ್ಯಾದಿ. ಸಂಣಕರ್ಣಾಟಕ ಕಾವ್ಯಮಾಲೆಯಲ್ಲಿ ಬಸವ ಪುರಾಣ,ಪ್ರಭುಲಿಂಗ ಲೀಲೆ, ಚಂದ್ರಪ್ರಭಾ ಪುರಾಣ, ಜಗನ್ನಾಥ ವಿಜಯ, ಭಾಗವತ ಮುಂತಾದ ಕೃತಿಗಳಿಂದಾಯ್ದ ಕಾವ್ಯಭಾಗಗಳಿವೆ. ಈ ಕಾವ್ಯ ಭಾಗಗಳನ್ನು ವಿವಿಧ ವಿಷಯಗಳಿಗೆ ಅನುಸಾರವಾಗಿ ಆಯ್ಕೆ ಮಾಡಿಕೊಂಡಿರುವುದಲ್ಲದೆ, ಅವುಗಳಿಗೆ ಟೀಕು ಮತ್ತು ಕಠಿಣ ಪದಗಳಿಗೆ ಅರ್ಥವನ್ನು ಸೂಚಿಸಿದ್ದಾರೆ.

ಇವುಗಳನ್ನು ಗಮನಿಸಿದಾಗ ಯಾಕಾಗಿ ಆಧುನಿಕ ಶಿಕ್ಷಣ ಕ್ರಮದಲ್ಲಿ ಈ ಮಾದರಿಯಲ್ಲಿ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದರು? ಎಂಬ ಪ್ರಶ್ನೆ ಮೂಡುವುದು ಸಹಜ. ಪ್ರಾಚೀನ ಕಾವ್ಯ ಭಾಗಗಳನ್ನು ಆಯ್ದುಕೊಂಡು ಶಿಕ್ಷಣದ ಸಂದರ್ಭದಲ್ಲಿ ಹೊಸ ಓದಿಗೆ ಒಡ್ಡುವ, ಆ ಮೂಲಕ ಅದರ ಅರ್ಥವ್ಯಾಪ್ತಿಯನ್ನು ಹಿಗ್ಗಿಸುವ ಅಥವಾ ಸೀಮಿತಗೊಳಿಸುವ ಪ್ರಯತ್ನಗಳು ಒಂದೆಡೆ ನಡೆದರೆ, ಇನ್ನೊಂದೆಡೆ ಅವುಗಳಿಗೆ ಬರೆದಿರುವ ಟೀಕು ಮತ್ತು ಪದಗಳ ಅರ್ಥ ಕಾವ್ಯವನ್ನು ಮರುರೂಪಿಸಿಕೊಂಡು ಅವುಗಳಿಗೆ ನಿರ್ದಿಷ್ಟ ಅರ್ಥಕೊಡುವ ಕೆಲಸ ಸಹ ನಡೆಯಿತು. ಹೀಗಾಗಿ

ಸಾಹಿತ್ಯ ಪರಂಪರೆಯಲ್ಲಿನ ಕಾವ್ಯಗಳು ಶಾಲಾಪಠ್ಯಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸುವ ಸಾಧ್ಯತೆಗಳನ್ನು ಕಂಡುಕೊಂಡವು ಎನ್ನಬಹುದು. ಈ ಮಾದರಿಯ ವಿಶಿಷ್ಟ ಗುಣವೆಂದರೆ, ಈಗಾಗಲೇ ಇರುವ ಕಾವ್ಯ ಒಂದು ನಿರ್ದಿಷ್ಟ ಅರ್ಥ ಸಂದರ್ಭಗಳಲ್ಲಿ ರೂಪುಗೊಂಡಿದ್ದರೆ, ಅದನ್ನು ಶಾಲಾಪಠ್ಯಗಳ ಸಂದರ್ಭದಲ್ಲಿ ವಿಷಯವಾರು ವಿಂಗಡಿಸಿಕೊಂಡು ಕೆಲವು ನಿರ್ದಿಷ್ಟ ಕಾವ್ಯ ಭಾಗಗಳನ್ನು ಇದಕ್ಕೆ ಹೊಂದುವಂತೆ ಆಯ್ಕೆ ಮಾಡಿಕೊಳ್ಳಲಾಯಿತು. ಇಲ್ಲಿ ಬಹುಪಠ್ಯಗಳನ್ನು ಆಧರಿಸಿ 'ಪ್ರಾಕ್ಕಾವ್ಯ ಮಾಲಿಕೆ' ಎಂಬ ಆಧುನಿಕ ಶಿಕ್ಷಣದ 'ಏಕಪಠ್ಯ'ವೊಂದನ್ನು ರೂಪಿಸುವ ಪ್ರಯತ್ನ ನಡೆದಿದೆ. ಹೀಗಾಗಿ ಸಾಹಿತ್ಯ ಪಠ್ಯವೊಂದು 'ಸಾಹಿತ್ಯಾಧ್ಯಯನ ಪಠ್ಯ'ವಾಗಿ ಭಾಷಾಂತರಗೊಂಡಿದೆ.

ಪಠ್ಯ ಪುಸ್ತಕಗಳನ್ನು ರಚಿಸುವ ಸಂದರ್ಭದಲ್ಲಿ ಮಿಶನರಿಗಳು ಯಾವ ಹಿನ್ನೆಲೆಯಲ್ಲಿ ಕೃತಿಗಳನ್ನು ಆಯ್ದುಕೊಂಡವು ಮತ್ತು ಹೇಗೆ ಅವುಗಳನ್ನು ವಿಂಗಡಿಸಿಕೊಂಡವು ಎಂಬುದರ ಕುರಿತು ಖಚಿತ ಮಾಹಿತಿ ದೊರೆಯುವುದು ಕಷ್ಟ. ಆದರೂ ಲಭ್ಯ ಶಾಲಾಪಠ್ಯಗಳನ್ನು ಗಮನಿಸಿ ಹಾಗೂ ಅವುಗಳ ಕುರಿತು ಈವರೆಗೆ ಬಂದಿರುವ ಮಾಹಿತಿಗಳನ್ನು ಆಧರಿಸಿ ಒಂದೆರೆಡು ಸಂಗತಿಗಳನ್ನು ಗಮನಿಸಬಹುದಾಗಿದೆ. ೧೮೬೫ರಲ್ಲಿ ಸಿದ್ಧಗೊಂಡ 'ಸಂಣ ಕರ್ಣಾಟಕ ಕಾವ್ಯಮಾಲೆ'ಯಲ್ಲಿ ಕೇವಲ ಕಾವ್ಯಭಾಗಗಳ ಆಯ್ದ ಭಾಗ ಮತ್ತು ಅವುಗಳಿಗೆ ಬರೆದ ಟೀಕು, ಅರ್ಥಗಳು ಮಾತ್ರ ಇದ್ದರೆ, ೧೮೬೮ರಲ್ಲಿ ವರ್ಥರ ಸಂಪಾದಿಸಿದ 'ಪ್ರಾಕ್ಕಾವ್ಯ ಮಾಲಿಕೆ' ಅದಕ್ಕಿಂತ ಭಿನ್ನ ತಳಹದಿಯನ್ನು ಹೊಂದಿದೆ. ಇಲ್ಲಿ ಶಾಲಾಪಠ್ಯವು ಧಾರ್ಮಿಕ ನೆಲೆಯಲ್ಲಿ ವಿಭಜನೆಗೊಂಡಿರುವುದರೊಂದಿಗೆ ಕೃತಿಯಲ್ಲಿರುವ ಅರ್ಥ ಮತ್ತು ಭಾವಾನುವಾದಗಳಿಂದ ಈ ಪಠ್ಯವು ಒಂದು ಭಾಷಾಂತರ ಪಠ್ಯವಾಗಿಯೂ ರೂಪುಗೊಂಡಿದೆ.

'ಪ್ರಾಕ್ಕಾವ್ಯ ಮಾಲಿಕೆ'ಯಲ್ಲಿ ಕಾವ್ಯ ಭಾಗಗಳನ್ನು ಧರ್ಮದ ಹಿನ್ನೆಲೆಯಲ್ಲಿ ಆಯ್ದು ವಿಂಗಡಿಸಿಕೊಳ್ಳಲಾಗಿದೆ. ಬ್ರಾಹ್ಮಣ ಮತಕ್ಕೆ ಜೈಮಿನಿ ಭಾರತ, ಆದಿಪುರಾಣ(?), ಭಾಗವತ, ದಾಸರ ಪದಗಳನ್ನು, ವೀರಶೈವ ಮತಕ್ಕೆ ಬಸವಪುರಾಣ, ಚನ್ನಬಸವಪುರಾಣ, ಸರ್ವಜ್ಞನ ವಚನಗಳು ಮತ್ತು ರಾಜಶೇಖರ ವಿಳಾಸದಿಂದಾಯ್ದು ಪದ್ಯಗಳನ್ನು ಆಯ್ದುಕೊಂಡರೆ, ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಶಾಸ್ತ್ರಸಾರ ಮತ್ತು ಧರ್ಮಪರೀಕ್ಷೆಯ ಕೆಲವು ಭಾಗಗಳನ್ನು ಮತ್ತು ಕ್ರೈಸ್ತ ಧರ್ಮದ ಸಂದರ್ಭದಲ್ಲಿ ದೇವಸ್ತೋತ್ರ, ಇಹಪರಬೇಧ, ಸಾಯಂಕಾಲದ ಗೀತೆಗಳ ಕೆಲವು ಪದ್ಯಗಳನ್ನು ಆಯ್ದುಕೊಂಡಿದ್ದಾರೆ.[೨] ಶಾಲಾ ಪಠ್ಯಗಳ ಸಂದರ್ಭದಲ್ಲಿ ಪ್ರಾಚೀನ ಸಾಹಿತ್ಯ ಮತ್ತು ಸಮಕಾಲೀನ ಸಾಹಿತ್ಯದ ವಿಚಾರಗಳನ್ನು ಆಯ್ದು ಜೋಡಿಸುವಾಗ ಧರ್ಮವನ್ನು ವಿಂಗಡಣೆಯ ಮಾನದಂಡವಾಗಿ ಬಳಸಿರುತ್ತಾರೆ. ಜೊತೆಗೆ ಪದ್ಯ ಭಾಗಗಳನ್ನು ಮಾತ್ರ ಆಯ್ದುಕೊಂಡಿದ್ದು, ಅವುಗಳಿಗೆ ಅರ್ಥ ಭಾವಾನುವಾದಗಳನ್ನು ನೀಡಿದ್ದಾರೆ. ಆಧುನಿಕಪೂರ್ವ ಕನ್ನಡ ಸಾಹಿತ್ಯದ ಜೀವ ದ್ರವ್ಯವೇ ಧರ್ಮ. ಸಾಹಿತ್ಯದಿಂದ ಧರ್ಮವನ್ನು ಬೇರ್ಪಡಿಸಿ ನೋಡುವುದು ಸಮಂಜಸವಲ್ಲ. ಒಂದು ವೇಳೆ ಈ ಬಗೆಯ ಪ್ರಯತ್ನಗಳು ನಡೆದರೆ ಅದೊಂದು ಆರೋಪವಾಗಿಯೇ ಉಳಿಯುತ್ತದೆ. ಇವೆಲ್ಲವನ್ನು ಗಮನಿಸಿಯೇ ಮಿಶನರಿಗಳು ಧಾರ್ಮಿಕ ಹಿನ್ನೆಲೆಯಲ್ಲಿ ಕಾವ್ಯಭಾಗಗಳನ್ನು ವಿಂಗಡಿಸಿಕೊಂಡಿದ್ದವು ಎನ್ನಬಹುದು.

ಈ ರೀತಿ ಕಾವ್ಯಭಾಗಗಳನ್ನು ಆಯ್ದುಕೊಂಡು ಅವುಗಳಿಗೆ ಅರ್ಥ, ಭಾವಾನುವಾದ ನೀಡುವುದರಿಂದ ವಿದ್ಯಾರ್ಥಿಗಳಿಗೆ ಸರಳವಾಗಿ ಮತ್ತು ಸುಲಭವಾಗಿ ಪಠ್ಯ ದಕ್ಕಬೇಕೆಂಬ ಉದ್ದೇಶವಿರಬಹುದು. ಆದರೆ ಇದು

ಮುಂದುವರಿದು ಭಾವಾನುವಾದವನ್ನು ಇಂಗ್ಲಿಷಿನಲ್ಲಿ ನೀಡಿರುವುದು ಯಾಕೇ? ಯಾರಿಗೆ? ಎಂಬ ಪ್ರಶ್ನೆಗಳಿಗೆ ದಾರಿಮಾಡಿಕೊಡುತ್ತದೆ. ಬಹುಶಃ ಶಿಕ್ಷಣದ ಮಾಧ್ಯಮ ಇಂಗ್ಲಿಷ್ ಆದ್ದರಿಂದ, ಪಠ್ಯಗಳಿಗೆ ಪೂರಕವಾಗಿ ಶಿಕ್ಷಣ ಕ್ರಮವು ಒದಗಿಸುವ ಹೆಚ್ಚಿನ ಮಾಹಿತಿಯನ್ನು (ಕಠಿಣ ಪದದ ಅರ್ಥ, ಭಾವಾನುವಾದ, ಪ್ರಶ್ನೋತ್ತರ ಇತ್ಯಾದಿಗಳು) ಶಿಕ್ಷಣ ಮಾಧ್ಯಮದ ಭಾಷೆಯಲ್ಲಿ ನೀಡಬೇಕೆಂಬ ಕಾರಣದಿಂದ ಹೀಗೆ ಮಾಡಿರಬಹುದು.

ಶೈಕ್ಷಣಿಕ ವ್ಯವಸ್ಥೆ ಸಂಪೂರ್ಣವಾಗಿ ಇಂಗ್ಲಿಷಿನಿಂದ ಕನ್ನಡದ ಸಂದರ್ಭದಲ್ಲಿ ರೂಪುಗೊಂಡಿರುವುದರಿಂದ ಇಂತಹ ಸಂದರ್ಭದಲ್ಲಿ ಕಾವ್ಯಭಾಗಗಳಿಗೆ ಬರೆದ ಭಾವಾನುವಾದ ಇಂಗ್ಲಿಷಿನಲ್ಲಿರುವುದು ಇದರ ಮುಂದುವರಿಕೆಯೇ ಆಗಿದೆ. ಯಾಕೆಂದರೆ ಬ್ರಿಟೀಶ್ ಆಡಳಿತ ಶೈಕ್ಷಣಿಕ ಅವಶ್ಯಕತೆಗಾಗಿ ಆಧುನಿಕತೆಗಾಗಿ ಆಧುನಿಕ ಶಾಲಾ ಪಠ್ಯಗಳನ್ನು ಸೃಷ್ಟಿಸಿಕೊಂಡಂತೆ ಪಠ್ಯಗಳನ್ನು ಬೋಧಿಸುವ ಉಪಾಧ್ಯಾಯರಿಗೆ ಸಹ ತರಬೇತಿ ಶಾಲೆಗಳನ್ನು ತೆರೆದಿತ್ತು. ಈ ತರಬೇತಿಯಲ್ಲಿ ಮೊದಮೊದಲು ಪಾಲ್ಗೊಂಡವರು ವಿದೇಶಿಯರೆ. ಅವರಿಗೆ ಇಲ್ಲಿನ ಸಾಹಿತ್ಯ ಪರಂಪರೆಯನ್ನು ಅರ್ಥೈಸುವುದರೊಂದಿಗೆ, ಮಕ್ಕಳಲ್ಲಿನ ಭಾಷಿಕ ಜ್ಞಾನವನ್ನು ಹೆಚ್ಚಿಸುವ ದೃಷ್ಟಿಯಿಂದ ಸಹ ಕಾವ್ಯಗಳಿಗೆ ಇಂಗ್ಲಿಷಿನಲ್ಲಿ ಭಾವಾನುವಾದ ಮತ್ತು ಅರ್ಥಗಳನ್ನು ಬರೆದಿರಬೇಕು.

ಹೀಗೆ ಕನ್ನಡದ ನೆಲೆಯಲ್ಲಿ ಶಿಕ್ಷಣದ ಆಧುನಿಕ ರೂಪ ಭಾಷಾಂತರದಿಂದ ಅನುಷ್ಠಾನಗೊಂಡಿರುವುದು ಹಾಗೂ ಇದರ ಭಾಗವಾಗಿ ಬಂದಿರುವ ಪಠ್ಯಗಳು ಸಹ ಭಾವಾನುವಾದ, ಭಾಷಾಂತರಗಳಿಂದ ಕೂಡಿರುವುದು ಶಾಲಾ ಪಠ್ಯಪುಸ್ತಕ ಮತ್ತು ಭಾಷಾಂತರದ ಸಂದರ್ಭಕ್ಕೆ ಕನ್ನಡಿ ಹಿಡಿದಂತಿದೆ.

**೩.೩. ಶಾಲಾಪಠ್ಯಗಳ ಭಾಷಾಂತರ ಸ್ವರೂಪ**

ಈ ಮೊದಲು ಚರ್ಚಿಸಿರುವಂತೆ ಆಧುನಿಕ ಶಿಕ್ಷಣ ಕ್ರಮ ಕನ್ನಡದ ಸಂದರ್ಭದಲ್ಲಿ ಭಾಷಾಂತರ ಗೊಂಡಿರುವುದಾಗಿದ್ದು, ಇದರ ಭಾಗವಾಗಿ ಬಂದಿರುವ ಪಠ್ಯಪುಸ್ತಕಗಳು ಭಾಷಾಂತರದ ಮಾದರಿಗಳಾದ ಭಾವಾನುವಾದ, ನೇರ ಭಾಷಾಂತರ ಮತ್ತು ಪುನರ್‌ಲೇಖಗಳ ಮಾದರಿಯಲ್ಲಿ ಸಿದ್ಧಗೊಂಡಿರುವವುಗಳಾಗಿವೆ. ಪ್ರಾಚೀನ ಕಾವ್ಯಗಳನ್ನು ಪುನರ್‌ಲೇಖಿಸಿಕೊಳ್ಳುವುದರೊಂದಿಗೆ ಬೈಬಲ್‌ನ ವಿವಿಧ ವಿಚಾರಗಳನ್ನು ಮತ್ತು ಹೊಸ ಜ್ಞಾನ ಶಿಸ್ತುಗಳಿಗೆ ಸಂಬಂಧಿಸಿದ ಬಹುತೇಕ ಪಠ್ಯಗಳನ್ನು ಪುನರ್‌ಲೇಖಿಸಿಕೊಂಡಿರುವುದನ್ನು ಕಾಣುತ್ತೇವೆ. ಬೈಬಲ್‌ನ್ನು ಗಮನದಲ್ಲಿರಿಸಿಕೊಂಡು 'ಬಾಲಏಸುವಿನ ಕಥೆ', 'ಏಸುಕ್ರಿಸ್ತನ ಅವತಾರ' ಮತ್ತು 'ಜ್ಞಾನ ಬೋಧಕ' ಇತ್ಯಾದಿ ಕೃತಿಗಳು ಬೈಬಲ್‌ನ ಪುನರ್‌ಲೇಖಗೊಂಡಿವೆ. ಹೀಗೆ ಪುನರ್‌ಲೇಖ, ನೇರ ಭಾಷಾಂತರಗಳ ಮೂಲಕ ಹೊಸ ಬಗೆಯ ಆಲೋಚನೆಗಳಿಗೆ ಅವಕಾಶ ದೊರಕಿತು. ಮಹಿಳೆಯರಿಗೆ ಪ್ರತ್ಯೇಕವಾಗಿ ಶಾಲೆಗಳು, ಪಠ್ಯಗಳು ಸಿದ್ಧಗೊಂಡಂತೆ ಅವರಿಗಾಗಿಯೇ ಮಾದರಿ ಕೃತಿಗಳು ರಚನೆಗೊಂಡವು. ಹೆಣ್ಣು ಮಕ್ಕಳಿಗಾಗಿ ಸಿದ್ಧಗೊಂಡ ಕಸೂತಿ ಕಲೆ, ಸಂಗೀತ, ಅಡುಗೆ ಕಲೆಯಂತಹ ವಿಷಯಗಳನ್ನು ಆಧುನಿಕ ಶಿಕ್ಷಣ ಕ್ರಮದಲ್ಲಿ ಪಠ್ಯಗಳ ಮೂಲಕ ಬೋಧಿಸುವ ಕ್ರಮ ಮುಂಚೂಣಿಗೆ ಬಂದಿತು. ವಿಭಿನ್ನ ಮಾದರಿಯ ಜ್ಞಾನವನ್ನು ನಮ್ಮ ಸಂದರ್ಭಕ್ಕೆ ಹೊಂದಿಸಿಕೊಳ್ಳುವ ಈ ಪ್ರಯತ್ನ ಮುಂದಿನ ದಿನಗಳಲ್ಲಿ ಪ್ರತ್ಯೇಕ ವಿಭಾಗಗಳಾಗಿ ಮಾರ್ಪಾಡಾಗಿರುವುದು ಗಮನಾರ್ಹವಾಗಿದೆ.

ಹೀಗೆ ಶೈಕ್ಷಣಿಕ ಅಗತ್ಯತೆಗಾಗಿ ಅನೇಕ ವಿಚಾರಗಳನ್ನು ಬೇರೆ ಬೇರೆ ಕಡೆಗಳಿಂದ 'ಕನ್ನಡದ್ದಾಗಿಸಿ'ಕೊಳ್ಳುವ ಚಟುವಟಿಕೆ ಮುಂದುವರಿಯಿತು. ಇಂಗ್ಲಿಷ್ ಮತ್ತಿತರ ಭಾಷೆಗಳಿಂದ ಭಾಷಾಂತರಗೊಂಡ ಪಠ್ಯಗಳೆಂದರೆ ಗಣಿತನ್ಯಾಯ (೧೮೭೦), 'ಗಣಿತ ಸಂಗ್ರಹ' (೧೮೫೮), 'ಬಾಲಗೀತೆ ಮುಕ್ತಕಲಾಪ' (೧೮೭೦), 'ಇಸೋಪನ ನೀತಿ ಕಥೆ', 'ಶಾಲಾ ಪದ್ಧತಿ', 'ಗಣಿತ ಪುಸ್ತಕ ಪೂರ್ಣಾಂಕ', 'ಬೀಜಗಣಿತ', 'ಭೂಗೋಳ ವಿದ್ಯೆ' ಇತ್ಯಾದಿ ಕೃತಿಗಳು. ಇವುಗಳೆಲ್ಲ ಶೈಕ್ಷಣಿಕ ಅಗತ್ಯತೆಗಾಗಿ ಬೇರೆ ಬೇರೆ ಭಾಷೆಗಳಿಂದ ಭಾಷಾಂತರ, ರೂಪಾಂತರದ ಮೂಲಕ ಕನ್ನಡಕ್ಕೆ ಬಂದವುಗಳಾಗಿವೆ. (ಅನುಬಂಧ ೧ನ್ನು ಗಮನಿಸಿ)

ದೇಶೀಯ ಹಾಗೂ ಪಶ್ಚಿಮದ ಕೃತಿಗಳು ಶಾಲಾಪಠ್ಯಗಳಾಗಿ ಕನ್ನಡದಲ್ಲಿ ರೂಪುಗೊಂಡಂತೆ ಕನ್ನಡ ಕಾವ್ಯ, ಪುರಾಣ ಇತ್ಯಾದಿಗಳೂ ಸಹ ಶಾಲಾ ಪಠ್ಯಗಳಾಗಿ ಮಾರ್ಪಾಡಾಗಿವೆ. ನಳೋಪಖ್ಯಾನ, ನಳಚರಿತ್ರೆ, ದಮಯಂತಿ ಸ್ವಯಂವರ ಇತ್ಯಾದಿ ಕೃತಿಗಳು ಶೈಕ್ಷಣಿಕ ಉದ್ದೇಶಕ್ಕಾಗಿ ಮತ್ತೆ ರೂಪುಗೊಂಡಿರುವ ಬಗ್ಗೆ ಹಾವನೂರ ಅವರು 'ಹೊಸಗನ್ನಡ ಅರುಣೋದಯ' (೨೦೦೦) ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. ಕುತೂಹಲದ ಸಂಗತಿಯೆಂದರೆ ಒಂದು ಕೃತಿ ಭಿನ್ನ ಉದ್ದೇಶ ಅಥವಾ ತುರ್ತಿನ ಕಾರಣದಿಂದ ಕೆಲವೊಂದು ನಿರ್ದಿಷ್ಟ ಬದಲಾವಣೆಗಳ ಮೂಲಕ ವಿಭಿನ್ನ ಹೆಸರುಗಳಲ್ಲಿ ಪ್ರತ್ಯೇಕ ಪಠ್ಯಗಳಾಗಿ ಪುನರ್‌ರೂಪಗೊಳ್ಳುವುದು. ಈ ಕ್ರಮ ಭಾಷಾಂತರದ ಗಮನಾರ್ಹ ಸಾಧ್ಯತೆಯೂ ಆಗಿದೆ ಎನ್ನುವುದನ್ನು ಗಮನಿಸಬೇಕಾಗಿದೆ.. ಇದೇ ಮಾದರಿಯಲ್ಲಿ ನಳಚರಿತ್ರೆ, ಭಾಗವತ ಮತ್ತು ಜೈಮಿನಿ ಭಾರತದಂತಹ ಅನೇಕ ಕೃತಿಗಳು ಹಲವಾರು ಕಾರಣಗಳಿಂದ ಪುನರ್‌ಲೇಖಗೊಂಡಿವೆ. ಈ ಪ್ರಯತ್ನ ಶಿಕ್ಷಣದ ಸಂದರ್ಭದಲ್ಲಿ ಹೆಚ್ಚೆಚ್ಚು ನಡೆದಿರುವುದನ್ನು ಕಾಣಬದುದಾಗಿದೆ.

ಬಸವಪ್ಪಶಾಸ್ತ್ರಿಯವರು 'ದಮಯಂತೀ ಸ್ವಯಂವರ'ವನ್ನು ನಳಚರಿತ್ರೆಯಿಂದ ಪುನರ್‌ಲೇಖಿಸಿದ್ದಾರೆ. ಈ ಪಠ್ಯ ಬಾಲಕಿಯರ ವಿದ್ಯಾಭ್ಯಾಸಕ್ಕಾಗಿ ಪ್ರತ್ಯೇಕವಾಗಿ ಸಿದ್ಧಗೊಂಡಿದ್ದು, ಮೂಲದಲ್ಲಿಯ ನಳಚರಿತ್ರೆಯು ಇಲ್ಲಿ 'ದಮಯಂತೀ ಸ್ವಯಂವರ'ವಾಗಿ ಪುನರ್‌ಲೇಖಗೊಂಡಿದೆ. ಈ ಕ್ರಮ ಓದಿನ ಹೊಸ ಸಾಧ್ಯತೆಯೂ ಅಧ್ಯಯನದ ಭಿನ್ನ ನಿರ್ವಚನವೂ ಆಗಿದೆ.

ಶಾಸ್ತ್ರಿಯವರು 'ನಳೋಪಖ್ಯಾನ'ವನ್ನು ಸ್ತ್ರೀ ವಿದ್ಯಾಭ್ಯಾಸಕ್ಕೆ ಅಳವಡಿಸುವ ಹಿನ್ನೆಲೆಯಿಂದಾಗಿ 'ದಮಯಂತೀ ಸ್ವಯಂವರ' ವೆಂದು ಪುನರ್‌ಲೇಖಿಸಿದ್ದಾರೆ. ಒಂದು ರೀತಿಯಿಂದ ಇದು ಪ್ರಯೋಗವೂ ಹೌದು. ಬಾಲಕಿಯರಿಗಾಗಿ ರೂಪುಗೊಂಡಿರುವ ಈ ಪಠ್ಯದಲ್ಲಿ ನಳ ಮತ್ತು ದಮಯಂತಿಯರ ಸೌಂದರ್ಯವರ್ಣನೆ, ಹಂಸದ ಮಾತುಗಳು, ಮದುವೆಯ ವಯಸ್ಸಿನ ಕುರಿತ ಪ್ರಸ್ತಾಪ, ವಿವಾಹದ ಬಗ್ಗೆ ತಂದೆ, ತಾಯಿ, ಗುರು ಹಿರಿಯರ ಜವಾಬ್ದಾರಿಯುತ ತೀರ್ಮಾನ, ತನ್ನ ವರನನ್ನು ತಾನೇ ಆಯ್ಕೆ ಮಾಡಿಕೊಳ್ಳುವ ವಧುವಿನ ಸ್ವಾತಂತ್ರ್ಯ ಇತ್ಯಾದಿ ವಿಷಯಗಳಿಂದಾಗಿ ಬಾಲಕಿಯರಿಗಾಗಿಯೇ ಪೂರ್ಣ ಪ್ರಮಾಣದಲ್ಲಿ ಮರುರೂಪಗೊಳ್ಳಬೇಕು ಎಂಬುದಕ್ಕೆ ಸಮನಾಗಿ 'ಮೂಲ ಪಠ್ಯ'ದ ವಿಷಯಗಳನ್ನು ಹೊಂದಿಸಿಕೊಳ್ಳುವ ಪ್ರಯತ್ನ ನಡೆದಿದೆ. ಈ ಮಾದರಿಯಲ್ಲಿಯೇ ದಮಯಂತೀ ಸ್ವಯಂವರ ರೂಪುಗೊಂಡಿದ್ದು ಇದು ಪುನರ್‌ಲೇಖ ಕೃತಿಯೂ ಆಗಿದೆ.

ಹೀಗೆ ಬಂದಿರುವ ಶಾಲಾ ಪಠ್ಯಗಳನ್ನು ಗಮನಿಸಿದರೆ, ಆಧುನಿಕತೆಯ ಹೊಸ ಆಲೋಚನೆಗಳಿಗೆ ಈ ಪಠ್ಯಗಳು ಪೀಠಿಕೆಗಳಾದವು. ಅಲ್ಲದೆ ನೇರ ಭಾಷಾಂತರ, 'ರೂಪಾಂತರ' ಮತ್ತು ಪುನರ್‌ಲೇಖಗಳಿಂದ ಭಾಷಾಂತರದ ಸಂದರ್ಭದಲ್ಲಿ ಹೊಸದಾದ ಚಿಂತನೆಗಳನ್ನು ರೂಪಿಸಿಕೊಳ್ಳುವ ಪ್ರಯತ್ನಗಳು ಇವುಗಳ ಮೂಲಕ ನಡೆದಿರುವವು. ಸಮಾಜದಲ್ಲಿ ನಡೆಯಬೇಕಾದ ಅಥವಾ ಕೈಗೊಳ್ಳಬೇಕಾದ ಅನೇಕ ಪ್ರಗತಿಪರ ಕೆಲಸಗಳ ಕುರಿತ ಚರ್ಚೆಯನ್ನು ಈ ಪಠ್ಯಗಳಲ್ಲಿ ಸಾಂಕೇತಿಕವಾಗಿ ನಡೆದಿವೆ. ಈ ಕ್ರಮ ಹೊಸದಾದ ಮತ್ತು ಅಪರಿಚಿತವಾದ ವಿಷಯ ಅಥವಾ ವಿಚಾರಗಳನ್ನು ಪರಿಚಯ ಮಾಡಿಕೊಳ್ಳುವ ಹಾಗೂ ಸ್ಪಷ್ಟಪಡಿಸಿಕೊಳ್ಳುವ ಉದ್ದೇಶದಿಂದಲೂ ನಡೆದಿದೆ. ಹಾಗೆಯೇ ಈಗಾಗಲೇ ಇರುವುದನ್ನು ಹೊಸ ಅರ್ಥಗಳಿಗೆ ಹೊಂದಿಸುವ ಕಾರಣಕ್ಕಾಗಿಯೂ ಈ ಬಗೆಯ ಪ್ರಯತ್ನಗಳು ನಡೆದಿವೆ.

ಈ ರೀತಿ ಶೈಕ್ಷಣಿಕ ಉದ್ದೇಶದಡಿಯಲ್ಲಿ ಭಾಷಾಂತರಗೊಂಡ ಹಾಗೂ ಪುನರ್‌ಲೇಖಗೊಂಡ ಪಠ್ಯಗಳನ್ನು ಗಮನಿಸಿದಾಗ ಅವುಗಳಲ್ಲಿ ಕಾವ್ಯ ಭಾಗಗಳೇ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟವಾಗಿರುವುದು ಕಂಡುಬರುತ್ತದೆ. ಇದು ಪ್ರಕಟಗೊಂಡ ಕಾಲ-ಸಂದರ್ಭಗಳನ್ನು ಗಮನಿಸಿದರೆ, ಈ ಸಂದರ್ಭದಲ್ಲಿ ಕನ್ನಡದಲ್ಲಿ ಗದ್ಯ ಪರಂಪರೆಯೊಂದು ರೂಪುಗೊಳ್ಳಲು ಹೊಸ ದಾರಿಗಳನ್ನು ಹುಡುಕುತ್ತಿತ್ತು. ಹೀಗಿದ್ದರೂ ಆಧುನಿಕ ಶಿಕ್ಷಣ ಕ್ರಮದಲ್ಲಿ ಅಧಿಕ ಸಂಖ್ಯೆಯಲ್ಲಿ ಕಾವ್ಯ ಭಾಗಗಳೇ ಪಠ್ಯಗಳಾಗಿ ಮತ್ತೆ ಮತ್ತೆ ಸಂಪಾದನೆಗೊಂಡಿರುವುದು ಕುತೂಹಲಕಾರಿಯಾಗಿದೆ. ಯಾಕಾಗಿ ಈ ಕ್ರಮ ಮುನ್ನೆಡೆಗೆ ಬಂತು ಎಂಬುದರ ಕುರಿತು ಆಲೋಚಿಸಬೇಕಾಗಿದೆ.

ಆಧುನಿಕಪೂರ್ವ ಕನ್ನಡ ಸಾಹಿತ್ಯದಲ್ಲಿ ಕಾವ್ಯ ಪರಂಪರೆ ಮುಂಚೂಣಿಯಲ್ಲಿದ್ದಿರುವುದು ಪ್ರಮುಖ ಕಾರಣವಾಗಿರುವುದರೊಂದಿಗೆ ಇದನ್ನರಿತ ರೈಸ್‌ನಂಥ ಮಿಶನರಿಗಳು ದೇಶೀಯರಿಗೆ ಪ್ರಿಯವಾದ ಕಾವ್ಯದಲ್ಲಿಯೇ ಶಾಲಾ ಪಠ್ಯಗಳನ್ನು ಮತ್ತು ಧಾರ್ಮಿಕ ವಿಚಾರಗಳನ್ನು ಪ್ರಕಟಿಸಬೇಕೆಂಬ ಬಯಕೆಗಳನ್ನು ಹೊಂದಿದ್ದರು. ಈ ಆಸಕ್ತಿ ಸಹ ಗದ್ಯ ಪರಂಪರೆ ರೂಪುತಾಳುತ್ತಿದ್ದ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾವ್ಯ ಭಾಗಗಳು ಪಠ್ಯಗಳಾಗಿ ಸಂಪಾದನೆಗೊಳ್ಳಲು ಪ್ರೇರಣೆಯಾಗಿರಬಹುದು. ಇನ್ನೊಂದು ಮುಖ್ಯ ಕಾರಣವೆಂದರೆ,೧೯ನೇ ಶತಮಾನದ ಸಂದರ್ಭದಲ್ಲಿ ಧರ್ಮ ಮತ್ತು ಆರಾಧನೆಯ ಭಾಗವಾಗಿ ಕೆಲವು ಕಾವ್ಯಗಳು ವಾಚನವಾಗುತ್ತಿದ್ದವು. ಅವುಗಳಲ್ಲಿ 'ಕುಮಾರವ್ಯಾಸ ಭಾರತ' ಮತ್ತು ಷಡಕ್ಷರಿಯ 'ರಾಜಶೇಖರ ವಿಳಾಸ' ಪ್ರಮುಖವಾದವು. ಈ ಕಾವ್ಯಗಳು ಗಮಕವಾಚನಗೊಳ್ಳುತ್ತಿದ್ದರಿಂದ ಬೇಗನೆ ಮತ್ತು ಹೆಚ್ಚಿನ ಸಹೃದಯರನ್ನು ಧಾರ್ಮಿಕ ಹಿನ್ನೆಲೆಯಲ್ಲಿ ತಲುಪುತ್ತಿತ್ತು. ಈ ಪರಂಪರೆಯ ಪ್ರಭಾವದಿಂದಲೂ ಸಹ ಕಾವ್ಯ ಭಾಗಗಳು ಹೆಚ್ಚಿನ ಪ್ರಮಾಣದಲ್ಲಿ ಶಾಲಾಪಠ್ಯಗಳಾಗಿ ಸಂಪಾದನೆಗೊಳ್ಳಲು, ರೂಪುಗೊಳ್ಳಲು ಪೂರಕವಾಗಿರಬಹುದು.

ಹೀಗೆ ೧೯ನೇ ಶತಮಾನದಲ್ಲಿನ ಸಾಂಸ್ಕೃತಿಕ ಪರಿಸರ, ಮಿಶನರಿಗಳು ಕೈಗೊಂಡ ಕಾರ್ಯಕ್ರಮ ಮತ್ತು ಹೊಸ ಸಾಧ್ಯತೆಗಳನ್ನು ಗುರುತಿಸಿಕೊಳ್ಳುವ ಸಲುವಾಗಿ ಕಾವ್ಯ ಭಾಗಗಳು ಹೆಚ್ಚಾಗಿ ಸಂಪಾದನೆಗೊಂಡಿರುವ ಸಾಧ್ಯತೆಯಿದೆ.

ಈಗಾಗಲೇ ಪಶ್ಚಿಮದಲ್ಲಿದ್ದ ಶಿಕ್ಷಣ ಕ್ರಮವನ್ನು ಕನ್ನಡ ಶಿಕ್ಷಣ ಕ್ರಮ ತನ್ನ ಭಾಷೆಗೆ ಅನ್ವಯಿಸಿಕೊಳ್ಳುವ ಪ್ರಯತ್ನ ಮಾಡಿದಂತೆ ಭಾರತೀಯ ಬಹುತೇಕ ದೇಶೀಯ ಭಾಷೆಗಳು ಸಹ ಈ ಮಾದರಿಯನ್ನು ಅನುಸರಿಸಿವೆ. ರಾಜಕೀಯ ವ್ಯವಸ್ಥೆಗೆ ಪೂರಕವಾಗಿ ಹಾಗೂ ಅದರ ಭಾಗವಾಗಿ ರೂಪುಗೊಂಡ ಶಿಕ್ಷಣ ಕ್ರಮ ಪಶ್ಚಿಮದಿಂದ

ಕನ್ನಡಕ್ಕೆ ಭಾಷಾಂತರಗೊಂಡಿರುವುದೇ ಆಗಿದೆ. ಈ ಬಗೆಯಲ್ಲಿ ಭಾಷಾಂತರವಾಗುವಾಗ ಕನ್ನಡದಲ್ಲಿ ಇದುವರೆಗೆ ಇದ್ದ ಶಿಕ್ಷಣ ಕ್ರಮ ಯಾವ ಸ್ವರೂಪದ್ದು, ಈ ಪ್ರದೇಶಕ್ಕೆ ಯಾವ ಮಾದರಿಯ ಶಿಕ್ಷಣವನ್ನು ರೂಪಿಸಬೇಕು ಎಂಬುದರಿಂದ ಆಧುನಿಕ ಶಿಕ್ಷಣಕ್ರಮ ಮೈದಾಳಿದೆ. ಹಾಗೆಯೇ ಇದೇ ಮಾದರಿಯಲ್ಲಿ ಇದರ ಭಾಗವಾಗಿ ಬಂದಿರುವ ಪಠ್ಯಗಳು  ಸಹ ರೂಪುಗೊಂಡಿವೆ.

ಒಟ್ಟಾರೆಯಾಗಿ ಹೇಳುವುದಾದರೆ, ಆಧುನಿಕಪೂರ್ವ ಕನ್ನಡ ಸಾಹಿತ್ಯ ಪರಂಪರೆಯ ಕಾವ್ಯ ಭಾಗಗಳನ್ನು ಆಯ್ದುಕೊಂಡು, ಕೆಲವನ್ನು ನೇರ ಭಾಷಾಂತರಿಸುವ ಇನ್ನೂ ಕೆಲವನ್ನು ಪುನರ್‌ಲೇಖಿಗೊಳಿಸುವ ಮೂಲಕ ಶಾಲಾಪಠ್ಯಗಳನ್ನು ಸಿದ್ಧಪಡಿಸಿಕೊಳ್ಳುವ ಪ್ರಯತ್ನಗಳು ನಡೆದವು. ಇಂತಹ ಸಂದರ್ಭದಲ್ಲಿ ವಯೋಮಾನ, ಲಿಂಗಗಳ ಹಿನ್ನೆಲೆಯಲ್ಲಿ ಅವುಗಳನ್ನು ಮರುರೂಪಿಸಿಕೊಳ್ಳುವ ಕ್ರಮವನ್ನು ಅನುಸರಿಸಿದರು. ಹಾಗೆಯೇ ಧಾರ್ಮಿಕ ನೆಲೆಯಲ್ಲಿ ಕಾವ್ಯಭಾಗಗಳನ್ನು ವಿಂಗಡಿಸುವ ಕ್ರಮವನ್ನು ಶಿಕ್ಷಣದ ಅವಶ್ಯಕತೆಗಾಗಿ ಅನುಸರಿಸಿದರು. ಅಧ್ಯಯನದ ಮಾದರಿಯೂ ಆದ ಈ ಕ್ರಮ ಮುಂದಿನ ದಿನಗಳಲ್ಲಿ ವಿಭಿನ್ನ ಆಯಾಮ ಪಡೆದುಕೊಂಡಿರುವುದು ಕುತೂಹಲಕಾರಿಯಾಗಿದೆ.

ಆಧುನಿಕ ಶಿಕ್ಷಣ ಕ್ರಮದಿಂದಾಗಿ ಹೊಸ ಜ್ಞಾನಶಿಸ್ತುಗಳು ಶಿಕ್ಷಣವನ್ನು ಸೇರಿಕೊಂಡವು. ಗಣಿತ, ವಿಜ್ಞಾನ, ವೈದ್ಯಕೀಯ, ಸಂಗೀತ ಮುಂತಾದವುಗಳನ್ನು ವಿವಿಧ ಪಠ್ಯಗಳ ಮೂಲಕ ಅಧ್ಯಯನ ಮಾಡಲು ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಿದರು. ಹೀಗೆ ಹೊಸ ಜ್ಞಾನಶಾಖೆಗಳ ಪರಿಚಯ ಮತ್ತು ಅನುಷ್ಠಾನ ಭಾಷಾಂತರದ ಮೂಲಕವೇ ಶಿಕ್ಷಣದಲ್ಲಿ ರೂಪುಗೊಂಡಿರುವುದು ವಿಶಿಷ್ಟವೆನಿಸಿಕೊಂಡಿದೆ.

ಈ ಬಗೆಯಲ್ಲಿ ಪಶ್ಚಿಮದಿಂದ ಬಂದು ಕನ್ನಡದಲ್ಲಿ ಸಂದರ್ಭದಲ್ಲಿ ರೂಪುಗೊಂಡ ಆಧುನಿಕ ಶಿಕ್ಷಣ ಕ್ರಮ ಹಾಗೂ ಇದರ ಭಾಗವಾಗಿ ಸಿದ್ದಗೊಂಡ ಶಾಲಾಪಠ್ಯ ಪುಸ್ತಕಗಳು ನೇರ ಭಾಷಾಂತರ, 'ರೂಪಾಂತರ', ಪುನರ್‌ಲೇಖಿ ಇತ್ಯಾದಿ ಮಾದರಿಗಳಲ್ಲಿ ಕನ್ನಡದಲ್ಲಿ ರೂಪತಾಳಿದವು ಎಂಬುದು ಸ್ಪಷ್ಟವಾಗುತ್ತದೆ.

ಹಾಗೆಯೇ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಚಟುವಟಿಕೆಯ ವೈವಿಧ್ಯತೆಗಳನ್ನು ಶ್ರೀಯವರ ಭಾಷಾಂತರ ಕೆಲಸದಲ್ಲಿಯೂ ನಾವು ನೋಡುತ್ತೇವೆ. ಇವರ ಭಾಷಾಂತರ ಪ್ರಕ್ರಿಯೆಯನ್ನು ಕನ್ನಡ ಸಾಹಿತ್ಯಾಧ್ಯಯನ ಶಿಸ್ತೊಂದರ ರೂಪುಗೊಳ್ಳುವಿಕೆಯ ಭಾಗವಾಗಿ ಗ್ರಹಿಸಬಹುದಾಗಿದೆ. ಶ್ರೀಯವರ ಒಟ್ಟೂ ಸಾಹಿತ್ಯ ರಚನೆಯೇ ಪುನರ್‌ಲೇಖವಾಗಿರುವಂತೆ ಕನ್ನಡ ಸಾಹಿತ್ಯ ಅಧ್ಯಯನದ ಶಿಸ್ತೊಂದನ್ನು ಭಾಷಾಂತರದ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿದ್ದು ಗಮನಾರ್ಹವಾಗಿದೆ. ಕನ್ನಡವನ್ನು ವಿಶ್ವವಿದ್ಯಾಲಯದ ಕಲಿಕೆಯ ವಸ್ತುವಾಗಿ ರೂಪಿಸಿದ್ದು, ಅದರ ಮೊದಲ ಕನ್ನಡ ಪ್ರೊಫೆಸರ್ ಆಗಿದ್ದು ಇತ್ಯಾದಿ ಸಂಗತಿ ಈ ಅಂಶವನ್ನು ಸೂಚಿಸುತ್ತದೆ.

ಆಧುನಿಕ ಪೂರ್ವ ಕನ್ನಡ ಸಾಹಿತ್ಯದ ಸಾಂಸ್ಕೃತಿಕ ಚಹರೆಯನ್ನು ಗುರುತಿಸಿದ ಬಿ.ಎಂ.ಶ್ರೀಯವರು ಆಧುನಿಕ ಸಂದರ್ಭದಲ್ಲಿ ಇದಕ್ಕೊಂದು ಸ್ಥಳಾವಕಾಶ ಕೊಡುವ, ಹೊಸ ಸಾಧ್ಯತೆಗೆ ಅವಕಾಶ ನೀಡುವ ಪ್ರಯತ್ನ ಮಾಡಿದ್ದಾರೆ. ಇದರ ಹಿಂದೆ ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದಿರುವ ಭಾಷಾಂತರ ಪ್ರಕ್ರಿಯೆಯ ಪ್ರೇರಣೆ ಪ್ರಭಾವಗಳಿವೆಯೇ ಎಂಬುದನ್ನು ಗುರುತಿಸುವ ಅಗತ್ಯವಿದೆ, ಈ ಹಿನ್ನೆಲೆಯಲ್ಲಿ ಮುಂದೆ ಚರ್ಚಿಸಲು ಪ್ರಯತ್ನಸಲಾಗುವುದು. 'ಇಂಗ್ಲಿಷ್

ಗೀತಗಳು' ಪೂರ್ವದ ಕನ್ನಡ ಸಾಹಿತ್ಯವು ಕನ್ನಡ ಸಾಹಿತ್ಯ ಪಠ್ಯಗಳಾಗಿ ಭಾಷಾಂತರಗೊಂಡ ಪ್ರಕ್ರಿಯೆಯಿಂದ ಪ್ರಮುಖವಾಗಿ ಕೆಲವು ಅಂಶಗಳನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ,

೧. ಕನ್ನಡ ಸಾಹಿತ್ಯವನ್ನು ಆಧುನಿಕ ಶಿಕ್ಷಣದ ಸಾಮಾಗ್ರಿಯಾಗಿ ಬಳಸಿರುವುದು.

೨. ಕನ್ನಡ ಸಾಹಿತ್ಯವನ್ನು ಒಂದು ಅಧ್ಯಯನ ಶಿಸ್ತಾಗಿ ರೂಪಿಸಿರುವುದು.

ಇದು ಮುಂದೆ ವಿಸ್ತಾರಗೊಂಡು ಬಹು ಆಯಾಮವನ್ನು ಪಡೆದುಕೊಂಡಿತು.

**ಟಿಪ್ಪಣಿ**

೧. ಸಾಂಪ್ರದಾಯಿಕ ಶಿಕ್ಷಣದಲ್ಲಿ ಉಪಾಧ್ಯಾಯರಿಗೆ ಪ್ರತ್ಯೇಕ ತರಬೇತಿಗಳಿರಲಿಲ್ಲ. ಗುರು-ಶಿಷ್ಯ ಪರಂಪರೆ ಮುಂದುವರಿದು ಗುರುವಿನ ನಂತರ ಶಿಷ್ಯ ಮತ್ತೆ ಗುರುವಾಗುತ್ತಿದ್ದನು. ಆದರೆ ಆಧುನಿಕ ಶಿಕ್ಷಣ ವ್ಯವಸ್ಥೆ ಪ್ರತ್ಯೇಕ ತರಬೇತಿಯನ್ನು ಜಾರಿಗೆ ತಂದಿತು. ಈ ಪಂರಪರೆ ಮುಂದಿನ ದಿನಗಳಲ್ಲಿ ತರಬೇತಿ ಸಂಸ್ಥೆಗಳಾಗಿ ಮಾರ್ಪಾಡಾಗಿರುವುದು.

೨. ಹೆಚ್ಚಿನ ವಿವರಕ್ಕೆ ನೋಡಿ, 'ಕನ್ನಡಕ್ಕೆ ಬಾಸೆಲ್ ಮಿಶನರಿಗಳ ಕೊಡುಗೆ' (೨೦೦೩), ಗೀತಾ ಎ.ಎಸ್ ನಂದಿಹಾಳ್, ಕಿಟೆಲ್ ಮಹಾವಿದ್ಯಾಲಯ, ಧಾರವಾಡ.



## ಗ್ರಂಥಸಂಪಾದನೆ ಮತ್ತು ಭಾಷಾಂತರ ಪ್ರಕ್ರಿಯೆ

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ 'ಭಾಷಾಂತರ' ಮತ್ತು 'ಸ್ವತಂತ್ರ' ರಚನೆಗಳೊಂದಿಗೆ ಆಧುನಿಕ ಪೂರ್ವ ಕನ್ನಡದ ಕೃತಿಗಳನ್ನು ಸಂಕಲಿಸುವ, ಸಂಪಾದಿಸುವ ಕೆಲಸಗಳು ನಡೆದವು. ಆಧುನಿಕ ನೆಲೆಯಿಂದ ಗ್ರಂಥಸಂಪಾದನೆಯನ್ನು ಮೊದಲು ಆರಂಭಿಸಿದವರು ಮಿಶನರಿಗಳಾದರೂ ಪ್ರಾಚೀನ ಕಾವ್ಯಗಳಿಗೆ ಟೀಕು, ವ್ಯಾಖ್ಯಾನಗಳನ್ನು ಬರೆಯುವ ಕೆಲಸದ ರೂಪದಲ್ಲಿ ದೇಶೀಯರು ನಿರಂತರವಾಗಿ ಸಂಪಾದನೆಯ ಕೆಲಸವನ್ನು ನಡೆಸಿಕೊಂಡು ಬಂದಿದ್ದರು. ಅಂದರೆ ಸಂಪಾದನೆಯೆಂಬುದು ಕೇವಲ ಇಂದು ನಿನ್ನೆಯದಲ್ಲ ಮೊದಲೇ ಇತ್ತು ಎಂಬುದನ್ನು ಈ ಟೀಕು, ವ್ಯಾಖ್ಯಾನಗಳು ಸಮರ್ಥಿಸುತ್ತವೆ. ಯಾವುದೇ ಒಂದು ಕೃತಿಗೆ ಟೀಕು ಅಥವಾ ವ್ಯಾಖ್ಯಾನಗಳನ್ನು ಬರೆಯುವುದೆಂದರೆ ಆಯಾ ಕಾಲ, ಸಂದರ್ಭಕ್ಕೆ ಅನುಸಾರವಾಗಿ ಪಠ್ಯವೊಂದನ್ನು ಹೊಂದಿಸಿಕೊಳ್ಳುವ ಅಂದರೆ ಸಂಪಾದಿಸುವ ಕೆಲಸವೇ ಆಗಿದೆ. ಪೂರ್ವದ ಕೃತಿಯೊಂದನ್ನು ವ್ಯಾಖ್ಯಾನಿಸುವುದು, ಟೀಕು ಬರೆಯುವುದು ಎಂದರೆ ಅದು ಕೃತಿಯ ಸಂಪಾದನೆಯ ಕೆಲಸವೇ ಆಗಿರುತ್ತದೆ.

### ೪.೧. ಭಾಷಾಂತರದ ಮಾದರಿಯಾಗಿ ಗ್ರಂಥಸಂಪಾದನೆ

"ಗ್ರಂಥಸಂಪಾದನೆ ಭಾರತದಲ್ಲಿ ಶಾಸ್ತ್ರರೂಪ ತಳೆದುದು ಪಾಶ್ಚಾತ್ಯ ಪ್ರಭಾವದಿಂದ" (ಕೆ.ಎಂ. ಮ್ಯಾಥ್ಯು ೧೯೯೪, ಪು. ೭೦) ಲಾದರೂ ಕನ್ನಡದ ಸಂದರ್ಭದಲ್ಲಿ ಸರಿಸುಮಾರು ಹತ್ತೊಂಬತ್ತನೇ ಶತಮಾನದ ಮಧ್ಯಭಾಗದಿಂದ 'ಗ್ರಂಥಸಂಪಾದನಾ' ಚಟುವಟಿಕೆ ಆರಂಭಗೊಂಡಿತು ಎನ್ನಬಹುದು. ಮಿಶನರಿಗಳು ಧಾರ್ಮಿಕ ಹಿನ್ನೆಲೆಯಲ್ಲಿ ಬೈಬಲ್‌ನ್ನು ಬೇರೆ-ಬೇರೆ ಮಾದರಿಯಲ್ಲಿ ಭಾಷಾಂತರಿಸಿ ಸಂಪಾದಿಸುವ ಕೆಲಸವನ್ನು ಮಾಡಿದ್ದಾರೆ. ಬೈಬಲ್‌ನ್ನು ಯಾರಿಗಾಗಿ ಸಿದ್ಧಪಡಿಸುತ್ತೇವೆ ಎಂಬುದರೊಂದಿಗೆ ಇವರು ತಮ್ಮ ಭಾಷಾಂತರವನ್ನು ನಿರ್ಧರಿಸುವ ಮತ್ತು ಅದನ್ನು ಸಂಪಾದಿಸುವ ಕೆಲಸವನ್ನು ಮಾಡಿದರು. ಹೀಗಾಗಿ ಸಾಮಾನ್ಯರಿಗಾಗಿ ಚರ್ಚುಗಳಿಗಾಗಿ ಮಕ್ಕಳಿಗಾಗಿ ಮತ್ತು ಮಹಿಳೆಯರಿಗಾಗಿ ಪ್ರತ್ಯೇಕ ಬೈಬಲ್‌ನ್ನು ಸಂಪಾದಿಸಿದ್ದಾರೆ. ಇದರೊಂದಿಗೆ ಮಿಶನರಿಗಳು ಶೈಕ್ಷಣಿಕ ಅಗತ್ಯಕ್ಕಾಗಿ ಮತ್ತು ಅಧ್ಯಯನದ ಹಿನ್ನಲೆಯಲ್ಲಿ ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಅವುಗಳಿಗೆ ಪೂರಕವಾದ ಮುನ್ನುಡಿಗಳನ್ನು

ಬರೆಯುವ ಪರಂಪರೆಗೆ ಅಸ್ತಿವಾರ ಹಾಕಿದರು. ಹಾಗೂ ತಮಗೆ ಅಗತ್ಯ ಕಂಡಲ್ಲಿ ಅವುಗಳನ್ನು ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ. ಅವುಗಳನ್ನಿಲ್ಲಿ ಚರ್ಚಿಸಲು ಪ್ರಯತ್ನ ಮಾಡಲಾಗಿದೆ.

ವಸಾಹತು ಸಂದರ್ಭದಲ್ಲಿ ಸಂಪಾದನೆಗೊಂಡ ಕೃತಿಗಳ ಬಗ್ಗೆ ಗಮನಹರಿಸುವುದಾದರೆ, ಬಾಸೆಲ್ ಮಿಶನ್ನಿನ ಮೊಗ್ಲಿಂಗನು 'ಬಬ್ಲಿಯಾಥೆಕಾ ಕರ್ನಾಟಿಕಾ' ಮಾಲಿಕೆಯ ಮೂಲಕ ಪ್ರಾಚೀನ ಕೃತಿಗಳ ಪ್ರಕಟಣೆಗೆ ತೊಡಗಿದನು. ಈ ಮಾಲಿಕೆಯಲ್ಲಿ ಬಂದ ಕೃತಿಗಳೇದರೆ 'ಜೈಮಿನಿ ಭಾರತ' (೧೮೮೮) 'ತೊರವೆ ರಾಮಾಯಣ'(?) 'ದಾಸರ ಪದಗಳು' (೧೮೫೦) 'ಕುಮಾರ ವ್ಯಾಸ ಭಾರತ', ಕನಕದಾಸರ 'ಹರಿಭಕ್ತಿಸಾರ', ಭೀಮ ಕವಿಯ 'ಬಸವ ಪುರಾಣ' ಇತ್ಯಾದಿ. ೧೮೬೫ರಲ್ಲಿ ಜಾನ್ ಗ್ಯಾರಟ್ 'ಪಂಚತಂತ್ರ'ವನ್ನು ಸಂಪಾದಿಸಿದರೆ, ಫರ್ಡಿನಂಡ್ ಕಿಟೆಲ್ 'ನಾಗವರ್ಮನ ಕನ್ನಡ ಛಂದಸ್ಸು' (೧೮೭೫), 'ಕೇಶಿರಾಜನ ಶಬ್ದಮಣಿ ದರ್ಪಣ' (೧೮೮೨)ವೆಂಬ ಎರಡು ಶಾಸ್ತ್ರೀಯ ಕೃತಿಯನ್ನು ಸಂಪಾದಿಸಿರುವುದು ಗಮನಾರ್ಹವಾಗಿದೆ. ಇವರ ನಂತರದಲ್ಲಿ ದೇಶಿಯ ವಿದ್ವಾಂಸರು ಹಲವಾರು ಕೃತಿಗಳನ್ನು ಸಂಪಾದಿಸಿದ್ದಾರೆ.

ಕಿಟೆಲ್ ಸಂಪಾದಿಸಿದ 'ನಾಗವರ್ಮನ ಛಂದೋಂಬುಧಿ' (೧೮೭೫) ಮಾದರಿ ಸಂಪಾದನಾ ಕೃತಿಯಾಗಿ ರೂಪುಗೊಂಡಿದೆ. ಕೃತಿಯ ಆರಂಭದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಕುರಿತು ಸುದೀರ್ಘ ಮುನ್ನುಡಿಯಿದೆ. ಇದನ್ನು ಕನ್ನಡ ಸಾಹಿತ್ಯಾಧ್ಯಯನವು ಸಾಹಿತ್ಯ ಚರಿತ್ರೆ ರಚನೆಯ ಮೊದಲ ಪ್ರಯತ್ನವೆಂದು ಗೌರವಿಸಿದೆ. ಇದರಲ್ಲಿ ಜೈನ, ವೈದಿಕ ಮತ್ತು ವೀರಶೈವ ಕವಿಗಳಿಂದ ಬೆಳೆದು ಬಂದ ಕಾವ್ಯ ಪರಂಪರೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ನಿರೂಪಿಸುವ ಈ ಮೊದಲ ಪ್ರಯತ್ನವು ಸಂಪೂರ್ಣವಾಗಿ ಇಂಗ್ಲಿಷಿನಲ್ಲಿದೆ. ಒಂದು ರೀತಿಯಲ್ಲಿ ಇಂಗ್ಲಿಷ್ ಬಲ್ಲ ಓದುಗರಿಗೆ ಕನ್ನಡ ಸಾಹಿತ್ಯ ನಡೆದು ಬಂದ ದಾರಿಗಳನ್ನು ಪರಿಚಯಿಸುವ ಪ್ರಯತ್ನವಿದಾಗಿದೆ. ಕನ್ನಡದ ಶಾಸ್ತ್ರಗ್ರಂಥವೊಂದನ್ನು ಶಾಸ್ತ್ರೀಯವಾಗಿ ಸಂಪಾದಿಸುವಾಗ ಅದರ ಓದಿಗೆ ಪೂರಕವೆಂಬಂತೆ ಇಂಗ್ಲಿಷಿನಲ್ಲಿ ಮುನ್ನುಡಿಯನ್ನು ಬರೆದಿದ್ದು ಮತ್ತು 'ಮೂಲ' ಗ್ರಂಥದಲ್ಲಿನ ಸೂತ್ರರೂಪದ ಕಂದ ಪದ್ಯಗಳಿಗೆ ಅರ್ಥವ್ಯಾಖ್ಯಾನವನ್ನು ಕೊಡುವಾಗ ಇಂಗ್ಲಿಷಿನ ವ್ಯಾಕರಣದ ಅಂಶಗಳನ್ನು ಬಳಸಿರುವುದು ಹಾಗೂ ಇಂಗ್ಲಿಷಿನ ಸಂದರ್ಭದಲ್ಲಿಯೇ ವ್ಯಾಖ್ಯಾನವನ್ನು ನೀಡಿರುವುದು ಕಂಡುಬರುತ್ತದೆ. ಅಂದರೆ ಇದರ ನಿರ್ದಿಷ್ಟ ಓದುಗರು ಇಂಗ್ಲಿಷ್ ಬಲ್ಲವರು ಎಂಬುದು ನಿಜವಾಗುತ್ತದೆ; ಅವರಿಗಾಗಿ ಸಿದ್ಧಗೊಂಡಿದೆ.

ಇದೇ ರೀತಿ ಕಿಟೆಲ್ ಸಂಪಾದಿಸಿದ ಇನ್ನೊಂದು ಕೃತಿ 'ಕೇಶರಾಜನ ಶಬ್ದಮಣಿ ದರ್ಪಣ' (೧೮೮೨). ಈ ಸಂಪಾದನ ಕೃತಿಯ ಸ್ವರೂಪ ಹೇಗಿದೆಯೆಂದರೆ, ಮೊದಲು ಮೂಲಕೃತಿಯ ಸೂತ್ರ, ಎಡೆಗಡೆಗೆ 'ಇಂಗ್ಲಿಷಿ'ನಲ್ಲಿ ಸೂತ್ರಾರ್ಥ, ಪ್ರತಿ ಸೂತ್ರದ ಕೆಳಗೆ ಕ್ರಮವಾಗಿ ಪದಚ್ಛೇದ, ಅನ್ವಯ, ಟೀಕು, ವೃತ್ತಿ ಪ್ರಯೋಗಗಳನ್ನು ಕೊಡಲಾಗಿದೆ. ಅಡಿ ಟಿಪ್ಪಣಿಯಲ್ಲಿ ಛಂದಸ್ಸು ವ್ಯಾಕರಣಗಳಿಗೆ ಸಂಬಂಧಿಸಿದಂತೆ ಮುಖ್ಯ ವಿಚಾರಗಳನ್ನು ಇಂಗ್ಲಿಷಿನಲ್ಲಿಯೇ ಕೊಟ್ಟಿದ್ದಾರೆ. ಈ ಸಂಪಾದನೆಯ ವೈಧಾನಿಕತೆಯು ತಾತ್ವಿಕವಾಗಿ ಸಂಪಾದನಾ ಚಟುವಟಿಕೆಯೂ ಹೇಗೆ ಭಾಷಾಂತರದ ಚಟುವಟಿಕೆಯೂ ಆಗಿತ್ತು ಎಂಬುದನ್ನು ಸೂಚಿಸುತ್ತದೆ.

### ೪.೨. ಭಾಷಾಂತರದ ಸ್ವರೂಪ

ಯಾವುದೇ ಕೃತಿಯ ಸಂಪಾದನೆಯು ಮೂಲಭೂತವಾಗಿ ಒಂದು ಓದೇ ಆಗಿದೆ. ಸಂಪಾದನಾಕಾರ ತನ್ನ ಕಾಲ, ಸಂದರ್ಭಗಳ ಹಿನ್ನೆಲೆಯಲ್ಲಿ ಕೃತಿಯೊಂದನ್ನು ಮರುರೂಪಿಸುವ ಅಥವಾ ಹೊಸ ಓದಿಗೆ ಸಿದ್ಧಗೊಳಿಸುವ ಕೆಲಸವನ್ನು ಮಾಡುತ್ತಾನೆ. ಹೀಗೆಯೇ ಕಿಟಲ್ 'ನಾಗವರ್ಮನ ಛಂದೋಂಬುಧಿ' ಮತ್ತು 'ಕೇಶಿರಾಜನ ಶಬ್ದಮಣಿ ದರ್ಪಣ'ವನ್ನು ಸಂಪಾದಿಸಿರುವುದು. ಮೂಲ ಲೇಖಕ ತನ್ನ ಕೃತಿಯನ್ನು ಸೃಷ್ಟಿಸಿದರೆ, ಸಂಪಾದಕ ಆ ಕೃತಿಯನ್ನು ಕಾಲಮಾನಕ್ಕೆ ಅನುಸಾರವಾಗಿ ಅಧಿಕೃತಗೊಳಿಸುತ್ತಾನೆ. ಕೃತಿಯೊಂದನ್ನು ಸಂಪಾದಿಸುವಾಗ ಸಂಪಾದಕನು ಮೊದಲ ಹಂತದಲ್ಲಿ ಆ ಕೃತಿಯ ಹಸ್ತಪ್ರತಿಯನ್ನು ಸಂಗ್ರಹಿಸಬೇಕು. ಹಸ್ತಪ್ರತಿಯ ಮೂಲವೇ ಸಂಪಾದನಾಕಾರನಿಗೆ ಪ್ರಮಾಣವಾಗಿದ್ದು ಅದರ ಬಗ್ಗೆ ಪವಿತ್ರಭಾವವಿರುತ್ತದೆ. ಈ ಬಗೆಯಲ್ಲಿ 'ಮೂಲ'ದ ಕುರಿತಾದ ಪಾವಿತ್ರತೆ ಭಾಷಾಂತರಕಾರಗೂ ಇರುತ್ತದೆ. ಸಂಗ್ರಹಿಸಿದ ಹಸ್ತಪ್ರತಿಗಳೊಂದಿಗೆ ಕೃತಿಗೆ ಸಂಬಂಧಿಸಿ ಏನಾದರೂ ಲಿಖಿತ ದಾಖಲೆಗಳಿದ್ದರೆ ಅವುಗಳ ಸಾಕ್ಷ್ಯಗಳನ್ನು ಸರಿ ನೋಡಿ ವ್ಯಾಖ್ಯಾನಿಸಬೇಕಾಗುತ್ತದೆ. ಗ್ರಂಥಸಂಪಾದನೆಯಲ್ಲಿ ''ಎಷ್ಟು ಸಾಧ್ಯವೋ ಅಷ್ಟು ಹಿಂದಕ್ಕೆ ಸರಿದು ಪ್ರಮಾಣ ಪಾಠವನ್ನು ಮತ್ತೆ ಪಡೆಯುವುದು'' (ಕೆ.ಎಂ.ಮ್ಯಾಥ್ಯು, ೧೯೯೪, ಪು. ೭೨) ಮುಖ್ಯವಾಗುತ್ತದೆ. ಈ ರೀತಿ ಮೂಲ ಮಾಹಿತಿ ಹಾಗೂ ಅದರ ಕುರಿತು ಈವರೆಗೆ ಬಂದಿರುವ ಇತರ ವಿಷಯಗಳನ್ನು ಬಳಸಿಕೊಳ್ಳುವುದರೊಂದಿಗೆ ಸಂದರ್ಭಾನುಸಾರ ಬೇರೆ ಬೇರೆ ಕೃತಿಗಳಿಂದ ಉದಾಹರಣೆಯನ್ನು ಕೊಡುವ ಮೂಲಕ ಗ್ರಂಥವೊಂದನ್ನು ಸಂಪಾದಿಸಲಾಗುವುದು. ಈ ಅರ್ಥದಲ್ಲಿ ಸಂಪಾದನೆಯ ಕೆಲಸವು ಒಂದು ಬಗೆಯ ಓದು, ಅರ್ಥೈಸುವಿಕೆಯಾಗಿದ್ದು ಗ್ರಂಥಸಂಪಾದನೆಯ ಕೆಲಸದ ಈ ಸ್ವರೂಪವು ತಾತ್ವಿಕವಾಗಿ ಭಾಷಾಂತರವೇ ಆಗಿದೆಯೆಂಬುದು ಸ್ಪಷ್ಟವಾಗುತ್ತದೆ. ಅಂದರೆ ೯ನೇ ಶತಮಾನದ ಕಾವ್ಯವೊಂದನ್ನು ಸಂಪಾದಿಸುವ ಮೂಲಕ ೧೯ನೇ ಶತಮಾನಕ್ಕೆ ಭಾಷಾಂತರಿಸುತ್ತಿರುತ್ತಾರೆ.

ಸಂಪಾದನೆಯ ಗ್ರಂಥವೊಂದನ್ನು ಪುನರ್‌ಲೇಖಿಸಿದಂತೆ ಅದರ ಭಾಗವಾಗಿ ನಡೆಯುವ ಪಾಠ ನಿಷ್ಕರ್ಷೆ, ವ್ಯಾಖ್ಯಾನ, ಸಾರಾಂಶ ನೀಡುವಿಕೆ, ಸಮಕಾಲೀನ ಉದಾಹರಣೆಗಳನ್ನು ಕೊಡುವಿಕೆ ಇವೆಲ್ಲ ಅದರ ಪೂರಕ ಸಂಗತಿಗಳಾಗಿರುತ್ತಿದ್ದು, ಸಂಪಾದನಾ ಕೆಲಸವು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳೆರಡನ್ನು ಇದಕ್ಕೆ ಬಳಸಿದೆ. ಹಾಗೇ ನೋಡಿದರೆ ಕಿಟೆಲ್ ನಾಗವರ್ಮನ ಛಂದೋಂಬುಧಿಯನ್ನು 'ನಾಗವರ್ಮನ ಕನ್ನಡ ಛಂದಸ್ಸು' (೧೮೭೫) ಎಂದು ಪುನರ್‌ಲೇಖಿಸಿ ಸಂಪಾದಿಸಿರುತ್ತಾರೆ.

೧೮೭೪ರಲ್ಲಿ ಬಾಸೆಲ್ ಮಿಶನ್ನಿನವರು ಪ್ರಕಟಿಸಿದ 'ಕರ್ನಾಟಕ ಕಾವ್ಯಮಾಲೆ' ಒಂದು ಸಂಕಲನ (ಸಂಪಾದನೆ) ಗ್ರಂಥ. ಇದರ ಸಂಪಾದಕರು ಕಿಟೆಲ್. ಈ ಸಂಕಲನದಲ್ಲಿ ಸರ್ವಜ್ಞ, ಲಕ್ಮೀಶ, ಕುಮಾರವ್ಯಾಸ, ದಾಸರು, ಮಹಾಲಿಂಗರಂಗ ಷಡಕ್ಷರಿ, ವಿರುಪಾಕ್ಷ ಪಂಡಿತ, ಸೋಮನಾಥ, ಕೇಶಿರಾಜ, ನಾಗವರ್ಮ ಮೊದಲಾದ ಕವಿಗಳ ಕೃತಿಗಳಿಂದ ಆಯ್ದ ಭಾಗಗಳಿವೆ. ಪ್ರಸ್ತಾವನೆಯಲ್ಲಿ ಈ ಕವಿಗಳ ಜೀವನ, ಕಾಲಗಳ ವಿಚಾರವನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡಲಾಗಿದೆ. ಕನ್ನಡ ಭಾಷೆಯ ಸ್ತುತಿ, ಕನ್ನಡ ಛಂದಸ್ಸಿನ ವಿವರ, ಒಳ್ಳೆಯ ಕಾವ್ಯದ ಲಕ್ಷಣ, ಇತ್ಯಾದಿ ವಿಚಾರಗಳ ಕುರಿತಾದ ೧೦೩ ಭಾಗಗಳಿವೆ. ಪ್ರತಿಯೊಂದು ಪದ್ಯಕ್ಕೂ 'ಪರಿಚ್ಛೇದ', 'ಅನ್ವಯ' ಮತ್ತು

‘ಟೀಕು’ ಎಂಬ ಮೂರು ಭಾಗಗಳಲ್ಲಿ ‘ಪದವಿಭಾಗ’, ‘ಪದಾನ್ವಯ’ ಮತ್ತು ವಿಮರ್ಶೆಯನ್ನು ಕೊಡಲಾಗಿದೆ. ಈ ಪ್ರಯತ್ನ ಪ್ರಾಚೀನ ಕಾವ್ಯಗಳನ್ನು ಆಧುನಿಕ ಓದಿಗೆ ಅಳವಡಿಸಿಕೊಳ್ಳುವ ಪ್ರಯತ್ನದಲ್ಲಿ ಆಗಿದೆ. (ಉದ್ಧೃತ, ವಿದ್ಯಾಶಂಕರ, ೧೯೭೧, ಪು. ೨೩೦).

ಸೂಸನ್ ಬಾಸ್‌ನೆಟ್ ೧೬ನೇ ಶತಮಾನದಲ್ಲಾದ ಬೈಬಲ್‌ಗಳ ಭಾಷಾಂತರದ ಕುರಿತು ವಿವರಿಸುತ್ತ ಬೈಬಲ್‌ಗಳ ಸಂಪಾದನೆಯ ಚಟುವಟಿಕೆಯನ್ನು ಭಾಷಾಂತರ ಚಟುವಟಿಕೆಯೆಂದೆ ಪರಿಭಾವಿಸಿದ್ದಾರೆ (ಉದ್ಧೃತ, ತಾರಕೇಶ್ವರ, ೨೦೦೪). ಅವರು ಮೂಲದ ಹಸ್ತಪ್ರತಿಯನ್ನು ಗಮನದಲ್ಲಿರಿಸಿಕೊಂಡು ಇತರ ಹಸ್ತಪ್ರತಿಯ ಓರೆಕೊರೆಗಳನ್ನು ತಿದ್ದುವುದು, ಜನಸಾಮಾನ್ಯರಿಗೆ ಅರ್ಥವಾಗುವಂತೆ ಪರಿಷ್ಕರಿಸುವ ಇತ್ಯಾದಿ ಚಟುವಟಿಕೆಗಳು ಅಲ್ಲಿ ನಡೆವುದನ್ನು ತಾತ್ವಿಕವಾಗಿ ಭಾಷಾಂತರವೇ ಎಂದು ಪರಿಗಣಿಸುತ್ತಾರೆ. ಅಂದರೆ ಶಾಸ್ತ್ರೀಯವಾಗಿ ನಡೆಯುವ ಯಾವೊಂದು ಕೃತಿಯ ಸಂಪಾದನಾ ಕೆಲಸ ಭಾಷಾಂತರವೆ ಎಂದಾಯಿತು. ಈ ಚಟುವಟಿಕೆ ಹೇಗೆ ತಾತ್ವಿಕವಾಗಿ ಭಾಷಾಂತರವೇ ಆಗಿದೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸುವುದಾದರೆ, ಸಂಪಾದನೆಯಲ್ಲಿ ‘ಮೂಲ ಪಾಠ’ದ ಕುರಿತ ಪವಿತ್ರಭಾವವಿರುವಂತೆ ಭಾಷಾಂತರದ ಸಂದರ್ಭದಲ್ಲಿಯೂ ಮೂಲದ ಕುರಿತು ಇದೇ ಭಾವವಿರುತ್ತದೆ. ಸಂಪಾದನಾಕಾರ ಕೃತಿಯನ್ನು ತನ್ನ ಕಾಲ, ಸಂದರ್ಭದಲ್ಲಿ ರೂಪಿಸಿಕೊಂಡಂತೆ ಭಾಷಾಂತರಿಸಲು ಪ್ರಯತ್ನಿಸುತ್ತಾನೆ. ಗ್ರಂಥಸಂಪಾದನೆಯಲ್ಲಿ ನಡೆಯುವ ಅರ್ಥ, ವ್ಯಾಖ್ಯಾನ, ಉದಾಹರಣೆಗಳನ್ನು ಕೊಡುವ ಕೆಲಸವೆಲ್ಲ ಕೃತಿಯನ್ನು ಮತ್ತೆ ರೂಪಿಸುವ ಅಥವಾ ಭಾಷಾಂತರಿಸುವ ಕೆಲಸವಾಗಿದೆ.

‘‘ಗ್ರಂಥಸಂಪಾದನೆಯಲ್ಲಿ ಎರಡು ಭಾಗಗಳನ್ನು ಗುರುತಿಸಬಹುದು. ಮೊದಲನೆಯದು ಪಾಠ ಸಂಪ್ರದಾಯ ನಿರ್ಣಯ. ಇಲ್ಲಿ ಹಸ್ತಪ್ರತಿಯ ಮೂಲಪಾಠವನ್ನು ಅಥವಾ ಅದಕ್ಕೆ ಸಮೀಪವಾದ ಪಾಠವನ್ನು ರಚಿಸುವುದಕ್ಕೆ ಅವಶ್ಯವಿರುವ ನಂಬಲಾರ್ಹವಾದ ಹಸ್ತಪ್ರತಿಗಳನ್ನು ಇಲ್ಲವೆ ಲಿಖಿತ ಆಧಾರಗಳನ್ನು ಸಂಗ್ರಹಿಸುವ ಕೆಲಸ ನಡೆಯುತ್ತದೆ. ಎರಡನೆಯದು, ಪಾಠ ಪರಿಷ್ಕರಣ. ಇಲ್ಲಿ ಸಿಗುವ ಎಲ್ಲಾ ಸಾಕ್ಷ್ಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅತ್ಯುತ್ತಮ ಹಸ್ತಪ್ರತಿ ಇಲ್ಲವೆ ದಾಖಲೆಗಳಲ್ಲಿ ಕಂಡುಬರುವ, ಆದರೆ ನಂಬಲು ಯೋಗ್ಯವಲ್ಲದ ಅಂಶಗಳನ್ನು ಹಸ್ತಪ್ರತಿಯ ಸಂಪ್ರದಾಯದಿಂದ ತೆಗೆದು ಹಾಕುವುದು ಪಾಠ ಪರಿಷ್ಕರಣ’’ (ಉದ್ಧೃತ, ಕೆ.ಎಂ.ಮ್ಯಾಥ್ಯು, ೧೯೯೪, ಪು. ೭೨). ಗ್ರಂಥಸಂಪಾದನೆಯಲ್ಲಿ ಬಹುಮುಖ್ಯವಾಗಿ ಕಂಡುಬರುವ ‘ಮೂಲ ಪಾಠ’ವೆಂಬ ಪರಿಕಲ್ಪನೆಯೇ ಭಾಷಾಂತರದ ‘ಮೂಲ’ದ ಪರಿಕಲ್ಪನೆಗೆ ಸಮನಾದುದಾಗಿದೆ. ಇಲ್ಲಿಯೂ ಭಾಷಾಂತರದಂತೆ ಮೂಲದ ಕುರಿತು ಪವಿತ್ರವಾದ ಭಾವವನ್ನು ಹೊಂದಿರಲಾಗುತ್ತದೆ. ಈ ಪಾವಿತ್ರ್ಯತೆ ಮಾಹಿತಿ ಹಾಗೂ ಮೂಲಕ್ಕೆ ಚ್ಯುತಿಯಾಗದಂತೆ ಸಂಪಾದನೆ ನಡೆಯಬೇಕು ಎಂಬ ಕಡೆಗೆ ಇರುತ್ತದೆ.

ಈಗಾಗಲೇ ಇರುವ ಒಂದು ‘ಮೂಲ ಕೃತಿ’ ಅನೇಕ ಲಿಪಿಕಾರರಿಂದ ಪ್ರತಿಯಾಗಿರುತ್ತದೆ. ಈ ರೀತಿ ಪ್ರತಿಯಾಗಿದ್ದರಲ್ಲಿ ತನಗೆ ಲಭ್ಯ ಪ್ರತಿಗಳಲ್ಲಿ ಸಂಪಾದನಾಕಾರರು ಮೂಲಕ್ಕೆ ಹತ್ತಿರವಾದ ಕೃತಿಯೊಂದನ್ನು ಸಂಪಾದನೆಯ ಮೂಲಕ ಪುನರ್‌ರಚಿಸುತ್ತಾರೆ. ಈ ರೀತಿ ಸಂಪಾದಿಸುವಾಗ ತನ್ನ ಕಾಲ, ಸಂದರ್ಭಗಳಿಗೆ ಅನುಗುಣವಾಗಿ ಅವುಗಳಿಗೆ ಅರ್ಥ, ತಾತ್ಪರ್ಯ, ವ್ಯಾಖ್ಯಾನ ನೀಡುತ್ತಾರೆ. ಸಂಪಾದನಾ ಕೃತಿಗಳಲ್ಲಿ ನಡೆಯುವ ವ್ಯಾಖ್ಯಾನ

ಹಸ್ತಪ್ರತಿಯಲ್ಲಿರುವ ಭಾಷೆಯಾಗಿರದೆ ಬೇರೆ ಭಾಷೆಯಾಗಿರುವುದೇ ಹೆಚ್ಚು. ಕಿಟೆಲ್ 'ಛಂದೋಂಬುಧಿ' ಹಾಗೂ 'ಶಬ್ದಮಣಿ ದರ್ಪಣ'ದ ಸಂಪಾದನೆಯ ಸಂದರ್ಭದಲ್ಲಿ ಮೂಲದ ಪದಗಳಿಗೆ ಕನ್ನಡದಲ್ಲಿ ಅರ್ಥಕೊಡುವಾಗ ೧೯ನೇ ಶತಮಾನದ ಭಾಷೆ ಬಳಸಿದ್ದಾರೆ. ಹಾಗೂ ಈ ಕೃತಿಯ ಓದುಗರು ಇಂಗ್ಲಿಷ್ ಬಲ್ಲವರು ಎಂಬುದು ಸಂಪಾದನಾಕಾರರ ಪ್ರಜ್ಞೆಯಲ್ಲಿದ್ದರಿಂದ ಕಂದಪದ್ಯ, ಸೂತ್ರಗಳನ್ನು ಇಂಗ್ಲಿಷಿನಲ್ಲಿ ವ್ಯಾಖ್ಯಾನಿಸುವದರೊಂದಿಗೆ, ಅವುಗಳಿಗೆ ಇಂಗ್ಲಿಷ್ ಭಾಷೆಯಲ್ಲಿನ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಈ ಎಲ್ಲಾ ಚಟುವಟಿಕೆ ಭಾಷಾಂತರದ ಕೆಲಸವೇ ಆಗಿದೆ. ಆದ್ದರಿಂದ ಸಂಪಾದನಾ ಕೆಲಸದಲ್ಲಿ ನಡೆವ ಪಠ್ಯವೊಂದರ ಪುನರ್‌ರಚನೆ ತಾತ್ವಿಕವಾಗಿ ಭಾಷಾಂತರವೇ ಆಗಿದೆ.

೧೯ನೇ ಶತಮಾನದಲ್ಲಿ ನಡೆದಿರುವ ಈ ಸಂಪಾದನಾ ಕೆಲಸ ಭಾಷಾಂತರವೆಂದು ನಡೆದಿರಲಿಲ್ಲ. ಬದಲಿಗೆ ಪಾರಂಪರಿಕ ಶಾಸ್ತ್ರೀಯ ಕೃತಿಗಳನ್ನು ಸಮಕಾಲೀನ ಓದುಗರಿಗೆ ಒದಗಿಸುವ ಆ ಮೂಲಕ ಅದನ್ನು ಅರ್ಥಮಾಡಿಕೊಳ್ಳುವ ನೆಲೆಯಲ್ಲಿ ಸಂಪಾದನಾ ಚಟುವಟಿಕೆ ನಡೆದಿದೆ. ಹಸ್ತಪ್ರತಿಯಿಂದ ಒಂದು ಕೃತಿ ಮುದ್ರಣಕ್ಕೆ ಒಳಗಾಗುವುದೇ ಪುನರ್‌ಲೇಖ ಎನಿಸಿಕೊಳ್ಳುತ್ತದೆ. ಈ ಕ್ರಮಕ್ಕೆ ಸಂಪಾದನಾ ಕೃತಿಗಳು ಸೇರಿಕೊಂಡು ವಿಶಿಷ್ಟ ಮಾದರಿಯಲ್ಲಿ 'ಪುನರ್‌ಲೇಖ'ಗೊಂಡಿದೆ. ಭಾಷಾಂತರ ಸಂದರ್ಭದಲ್ಲಿ ಚರ್ಚಿಸುವ 'ಅಂತರ್ ಭಾಷಾಂತರ' ಹಾಗೂ 'ಆಂತರಿಕ ಭಾಷಾಂತರ'ಗಳೆರಡು ಸಂಪಾದನೆಯಲ್ಲಿ ನಡೆಯುತ್ತದೆ. ಹಳಗನ್ನಡದ ಪದಗಳಿಗೆ ೧೯ನೇ ಶತಮಾನದ ಕನ್ನಡದಲ್ಲಿ ಅರ್ಥ ಬರೆಯುವುದು 'ಆಂತರಿಕ ಭಾಷಾಂತರ'ವಾದರೆ, ಕನ್ನಡದ ಸೂತ್ರ ಮತ್ತು ಪದ್ಯಗಳನ್ನು ಇಂಗ್ಲಿಷಿನ ಸಂದರ್ಭದಲ್ಲಿ ವ್ಯಾಖ್ಯಾನ ಮಾಡಿಕೊಳ್ಳುವುದು 'ಅಂತರ್ ಭಾಷಾಂತರ' ಚಟುವಟಿಕೆಯಾಗಿದೆ. ಹೀಗೆ ಸಂಪಾದನಾ ಕೃತಿಗಳಲ್ಲಿ 'ಆಂತರಿಕ' ಮತ್ತು 'ಅಂತರ್ ಭಾಷಾಂತರ'ಗಳೆರಡನ್ನು ಸಂಪಾದನಾಕಾರ ಮಾಡುತ್ತಿದ್ದು, ಇದರಿಂದ ಹೊಸ ಓದುಗ ವರ್ಗಕ್ಕೆ, ಭಿನ್ನ ಓದಿಗೆ ಕೃತಿಯು ಸಂಪಾದನೆಗೊಳ್ಳುತ್ತಿತ್ತು. ತನ್ಮೂಲಕ ಕೃತಿಯೊಂದರ ಪುನರ್‌ರಚನೆ ಸಂಪಾದನೆಯಲ್ಲಿ ನಡೆಯುವುದು ಗಮನಾರ್ಹವಾದುದಾಗಿದೆ.

ಸಂಪಾದಕರು ಕೃತಿಯೊಂದನ್ನು ಸಂಪಾದಿಸುವ ಕೆಲಸವು ತಾತ್ವಿಕವಾಗಿ ಭಾಷಾಂತರವೇ ಆಗಿರುವಂತೆ ಕೃತಿಗಳ ಶೀರ್ಷಿಕೆಯನ್ನು ಸಹ ಭಾಷಾಂತರಿಸಿಕೊಂಡ ಉದಾಹರಣೆಗಳುಂಟು. ಕಿಟೆಲ್ 'ನಾಗವರ್ಮನ ಛಂದೋಂಬುಧಿ'ಯನ್ನು ಹಾಗೂ 'ಕೇಶಿರಾಜನ ಶಬ್ದಮಣಿ ದರ್ಪಣ'ವನ್ನು ಸಂಪಾದಿಸುವಾಗ ಅವುಗಳ ಶೀರ್ಷಿಕೆಯನ್ನು ಪುನರ್‌ಲೇಖಿಸಿದ್ದಾರೆ. ಛಂದೋಂಬುಧಿ 'ನಾಗವರ್ಮನ ಕನ್ನಡ ಛಂದಸ್ಸು' ಎಂದಾದರೆ ಶಬ್ದಮಣಿದರ್ಪಣ 'ಕೇಶಿರಾಜನ ಶಬ್ದಮಣಿ ದರ್ಪಣ' ಎಂಬ ಶೀರ್ಷಿಕೆಯನ್ನು ಪಡೆದುಕೊಂಡಿದೆ. ಪ್ರಾಚೀನವಾದ ಶಾಸ್ತ್ರ ಅಥವಾ ಇನ್ನಿತರ ವಿಷಯಗಳಿಗೆ ಸಂಬಂಧಿಸಿದ ಕೃತಿಯನ್ನು ಶಾಸ್ತ್ರೀಯವಾಗಿ ಆಧುನಿಕ ಸಂದರ್ಭದಲ್ಲಿ ಪುನರ್‌ರಚಿಸಿದಂತೆ ಅಂತಹ ಕೃತಿಗಳ ಶೀರ್ಷಿಕೆಯನ್ನು ಭಾಷಾಂತರಿಸಿಕೊಂಡಿರುವುದು ಕಂಡು ಬರುತ್ತದೆ.

ಆಧುನಿಕ ಸಂದರ್ಭದಲ್ಲಿ ನಡೆದ ಈ ಬಗೆಯ ಸಂಪಾದನಾ ಕಾಯಕವು ತಾತ್ವಿಕವಾಗಿ ಭಾಷಾಂತರವಾಗಿರುವಂತೆ ಶಬ್ದಕೋಶ ಸಹ ಇದರ ವ್ಯಾಪ್ತಿಗೆ ಬರುತ್ತದೆ. ಇದು ಸಹ ಭಾಷಾಂತರ ಕೃತಿಯೆ. ಯಾಕೆಂದರೆ ಯಾವುದೇ ಶಬ್ದಕೋಶದ ರಚನೆಯೆಂಬುದು ಒಂದು ಭಾಷೆಯ ಅರ್ಥವನ್ನು ಇನ್ನೊಂದು ಭಾಷೆಯಲ್ಲಿ ಬರೆಯುವುದೇ ಆಗಿದೆ (ಆಂತರಿಕ

ಸಮನಾರ್ಥಕ ಪದಕೋಶ). ಈ ರೀತಿ ಒಂದು ಭಾಷೆಯಲ್ಲಿನ ಪದದ ಅರ್ಥ, ಸಂದರ್ಭ ವ್ಯಾಕರಣ ವಿಚಾರ, ಪ್ರಾದೇಶಿಕ ಭಿನ್ನತೆ ಇತ್ಯಾದಿಗಳು ಶಬ್ದಕೋಶದಲ್ಲಿ ಬೇರೊಂದು ಭಾಷೆಯಲ್ಲಿ ಬರೆಯಲಾಗುತ್ತದೆ, ಎಂದರೆ ಭಾಷಾಂತರಿಸಲಾಗುತ್ತದೆ ಎಂದೇ ಅರ್ಥ.

ಇದರಿಂದಾಗಿ ಶಬ್ದಕೋಶಗಳನ್ನು ಸಹ ಭಾಷಾಂತರ ಕೃತಿಗಳೆಂದೆ ಪರಿಭಾವಿಸಿಕೊಳ್ಳುವುದಾಗಿದೆ. ಮುಂದಿನ ದಿನಗಳಲ್ಲಿ ಭಾಷಾಂತರದ ಹಿನ್ನೆಲೆಯಲ್ಲಿ ಶಬ್ದಕೋಶಗಳ ಕುರಿತು ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ.

ಈ ರೀತಿಯಲ್ಲಿ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರದ ಪ್ರಕ್ರಿಯೆಯಲ್ಲಿ ಸಂಪಾದನಾ ಚಟುವಟಿಕೆಯೂ ಸೇರಿಕೊಂಡಿರುವುದು ಗಮನಾರ್ಹ. ಸಂಪಾದನಾ ಕೆಲಸವು ತಾತ್ವಿಕವಾಗಿ ಭಾಷಾಂತರದ ಕೆಲಸವೇ ಆಗಿರುವುದು. ಇದರಲ್ಲಿ ನಡೆಯುವ ಬಹುತೇಕ ಕಾರ್ಯಗಳು ಭಾಷಾಂತರದ ನೆಲೆಯಿಂದಲೇ ನಡೆದಿರುವುದು ಮಹತ್ವದ್ದಾಗಿದೆ. ಹೀಗಾಗಿ ಸಂಪಾದನೆಯನ್ನು ಭಾಷಾಂತರದ ಕೆಲಸವೆಂದು ಕರೆದಿರುವುದು. ಇಷ್ಟಾದರೂ ಮುಂದಿನ ದಿನಗಳಲ್ಲಿ ಇವುಗಳ ಕುರಿತಾದ ವಿಸ್ತೃತ ಅಧ್ಯಯನ ನಡೆಯಬೇಕಾಗಿದೆ. ಒಂದು ವೇಳೆ ಇವುಗಳೆಲ್ಲಾ (ಶಬ್ದಕೋಶ, ಸಂಪಾದನೆ ಇತ್ಯಾದಿಗಳು) ಭಾಷಾಂತರದ ಹಿನ್ನೆಲೆಯಲ್ಲಿ ಚರ್ಚೆಗೆ ಒಳಗಾದರೆ ಭಾಷಾಂತರದ ಕುರಿತಾದ ಚಿಂತನೆ, ಸಿದ್ಧಾಂತಗಳನ್ನು ಇನ್ನೂ ವಿಸ್ತರಿಸುವ, ಪುನರ್‌ಪರಿಶೀಲಿಸುವ ಭಿನ್ನಚರ್ಚೆಗಳು ನಡೆಯಬೇಕಾಗುತ್ತದೆ.



## ಅಧ್ಯಾಯ-೫

# 'ಸಾಹಿತ್ಯಿ'ಕ ಭಾಷಾಂತರ ಚಟುವಟಿಕೆ

೫.೧. ಆಧುನಿಕ ಪಠ್ಯ ಮತ್ತು ಪ್ರಕಾರಗಳ ಭಾಷಾಂತರ

೫.೧.೧. ಆಧುನಿಕ ನಾಟಕ: ಪ್ರಕಾರ ಮತ್ತು ಪಠ್ಯ ಭಾಷಾಂತರ

೫.೧.೨. ಕಾದಂಬರಿ: ಪ್ರಕಾರ ಮತ್ತು ಪಠ್ಯ ಭಾಷಾಂತರ

೫.೨. ಸಾಹಿತ್ಯ ಕೃತಿಗಳ ಭಾಷೆಗಳು ಮತ್ತು ಭಾಷಾಂತರ

೫.೨.೧. ಸಂಸ್ಕೃತ

೫.೨.೨. ಇಂಗ್ಲಿಷ್

೫.೨.೩. ಬಂಗಾಳಿ

೫.೨.೪. ನೆರೆಯ ಭಾಷೆಗಳು

## 'ಸಾಹಿತ್ಯಿ'ಕ ಭಾಷಾಂತರ ಚಟುವಟಿಕೆ

ಬ್ರಿಟೀಶರ ಆಗಮನದಿಂದ ಯಾವಾಗ ಭಾರತವು ಅವರ ವಸಾಹತಾಗಿ ಪರಿವರ್ತನೆಗೊಂಡಿತೊ ಅಂದಿನಿಂದ ಈ ಪ್ರದೇಶಗಳಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಆಡಳಿತಾತ್ಮಕ ವ್ಯವಸ್ಥೆಗಳಲ್ಲಿ ಪರಿಣಾಮಕಾರಿ ಪಲ್ಲಟಗಳಾದವು. ಕರ್ನಾಟಕದಲ್ಲಿ ಈ ಪಲ್ಲಟ ೧೯ನೇ ಶತಮಾನದ ಕೊನೆಯ ವೇಳೆಗೆ ಆರಂಭವಾಯಿತು. ಸಾರ್ವತ್ರಿಕ ಶಿಕ್ಷಣದ ಭಾಗವಾಗಿ ಸಾಹಿತ್ಯವು ಆಧುನಿಕತೆಗೆ ತೆರೆದುಕೊಂಡಂತೆ ಹಲವು ಅಪರಿಚಿತ ಜ್ಞಾನಶಾಖೆಗಳನ್ನು ಪರಿಚಯಿಸಿಕೊಳ್ಳುವ ಚಟುವಟಿಕೆ ಸಹ ಇದೇ ಸಂದರ್ಭದಲ್ಲಿ ಆರಂಭಗೊಂಡಿತು. ಆಧುನಿಕ ಶಿಕ್ಷಣದ ಭಾಗವಾಗಿ ಬ್ರಿಟಿಶರು ಇಂಗ್ಲಿಷ್ ಭಾಷೆಯನ್ನು ಕಲಿಸುವುದರೊಂದಿಗೆ ಇಂಗ್ಲಿಷ್ ಸಾಹಿತ್ಯಾಧ್ಯಯನವನ್ನು ಈ ನೆಲದಲ್ಲಿ ರೂಪಿಸಿದರು. ಹೀಗಾಗಿ ಸಾಹಿತ್ಯಾಧ್ಯಯನದ ಮಾದರಿಯೊಂದು ದೇಶೀಯ ಭಾಷೆಗಳ ಸಂದರ್ಭದಲ್ಲಿ ಮುಂಚೂಣಿಗೆ ಬಂತು. ಇದರಿಂದಾಗಿ ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಹೊಸ ಹೊಸ ಆಲೋಚನೆಗಳು ಬೆಳಕು ಕಂಡುಕೊಂಡಂತೆ ಅನೇಕ ಬದಲಾವಣೆಗಳು, ಸೇರ್ಪಡೆ, ಸ್ವೀಕಾರಗಳು ಮತ್ತು ಭಾಷಾಂತರ ಚಟುವಟಿಕೆಗಳು ಸಾಮೂಹಿಕ ನೆಲೆಯಲ್ಲಿ ಕ್ರಿಯಾಶೀಲಗೊಂಡವು. ಇವನ್ನು ಗಮನದಲ್ಲಿರಿಸಿಕೊಂಡು 'ಇಂಗ್ಲಿಷ್ ಗೀತಗಳು' ಪೂರ್ವದ ಸಾಹಿತ್ಯಕ ಭಾಷಾಂತರ ಚಟುವಟಿಕೆಯನ್ನು ಗಮನಿಸಲು ಪ್ರಯತ್ನಿಸಲಾಗುವುದು.



ವಸಾಹತು ಸಂದರ್ಭದಲ್ಲಿ ನಡೆದ ಬಹುತೇಕ ಪಲ್ಲಟಗಳಿಗೆ ಪ್ರಮುಖ ವಾಹಿನಿ ಭಾಷಾಂತರವೇ ಆಗಿತ್ತು ಎಂಬುದರೊಂದಿಗೆ ಈ ಭಾಷಾಂತರ ಪ್ರಕ್ರಿಯೆ ವಸಾಹತು ಸಂದರ್ಭದಲ್ಲಿ ಅನಿವಾರ್ಯವೂ ಹೌದು ಎಂಬುದು ಅಷ್ಟೇ ನಿಜವಾಗಿದೆ. ಆಧುನಿಕ ಸಾಹಿತ್ಯ ಕೃತಿಗಳ ಭಾಷಾಂತರ ಕನ್ನಡದ ಸಂದರ್ಭದಲ್ಲಿ ಗಮನಾರ್ಹವಾದುದು. ಯಾಕೆಂದರೆ ಕನ್ನಡ ಸಾಹಿತ್ಯದ ಆಧುನಿಕ ಪ್ರವೇಶವೇ ಭಾಷಾಂತರದ ಮೂಲಕವಾಗಿರುವುದು. ಹಾಗೂ ಕನ್ನಡಕ್ಕೆ ಅವಶ್ಯಕವಾದ ಆಲೋಚನೆ, ಚಿಂತನೆ ಇತ್ಯಾದಿಗಳನ್ನು ಭಾಷಾಂತರದ ಮೂಲಕವೇ ಕಟ್ಟಿಕೊಳ್ಳಲು ಪ್ರಯತ್ನ ನಡೆದವು. ಇದರಿಂದಾಗಿ ಸಾಹಿತ್ಯಕೃತಿಗಳ ಭಾಷಾಂತರವನ್ನು ಗಮನಿಸುವುದು ಯತೋಚಿತವಾದುದಾಗಿದೆ.

ಕುರ್ತಕೋಟಿಯವರಂಥಹ ಅಧ್ಯಯನಕಾರರು ಭಾಷಾಂತರ ಪ್ರಕ್ರಿಯೆಯ ವ್ಯಾಪ್ತಿಯನ್ನು ಬಹು ವಿಸ್ತಾರವಾದ ನೆಲೆಯಲ್ಲಿ ಗ್ರಹಿಸಿಕೊಂಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[1] ಈ ಹಿನ್ನೆಲೆಯಲ್ಲಿ ಭಾಷಾಂತರದ

ಅರ್ಥವ್ಯಾಪ್ತಿಯನ್ನು ಗುರುತಿಸುವುದಾದರೆ ಆಧುನಿಕ ಸಾಹಿತ್ಯದಲ್ಲಿ ಕೇವಲ ಪಠ್ಯಗಳು ಮಾತ್ರ ಭಾಷಾಂತರಗೊಳ್ಳದೆ ಆಧುನಿಕ ಸಾಹಿತ್ಯ ಪ್ರಕಾರಗಳೂ ಭಾಷಾಂತರದ ನೆಲೆಯಲ್ಲಿ ರೂಪುಗೊಂಡಿರುವುದನ್ನು ಕಾಣಬಹುದು.

ಅಧ್ಯಯನದ ಅನುಕೂಲಕ್ಕಾಗಿ 'ಇಂಗ್ಲಿಷ್ ಗೀತಗಳು' ಪೂರ್ವದ ಸಾಹಿತ್ಯಿಕ ಭಾಷಾಂತರ ಚಟುವಟಿಕೆಯನ್ನು ಮುಖ್ಯವಾಗಿ ಎರಡು ಭಾಗಗಳಲ್ಲಿ ಗುರುತಿಸಿಕೊಳ್ಳಬಹುದಾಗಿದೆ. ಮೊದಲನೆಯದು 'ಪ್ರಕಾರಗಳ ಭಾಷಾಂತರ'ವಾದರೆ ಎರಡನೆಯದು 'ಪಠ್ಯಗಳ ಭಾಷಾಂತರ'. ಆಧುನಿಕ ಸಂದರ್ಭದಲ್ಲಿ ಇವೆರಡೂ ಏಕಕಾಲದಲ್ಲಿ ರೂಪುಗೊಂಡವುಗಳು. ಸಾಹಿತ್ಯ ಪ್ರಕಾರ ಮತ್ತು ಪಠ್ಯಗಳು ಹೇಗೆ ಭಾಷಾಂತರಗೊಂಡಿವೆ ಮತ್ತು ಹೀಗೆ ಭಾಷಾಂತರವಾಗುವಲ್ಲಿನ ಸನ್ನಿವೇಶದ ರೂಪ ಸ್ವರೂಪವನ್ನು ಗ್ರಹಿಸಿಕೊಳ್ಳುವುದು ಪ್ರಸ್ತುತ ಬರಹದ ಉದ್ದೇಶವಾಗಿದೆ.

**೫.೧. ಆಧುನಿಕ ಪಠ್ಯ ಮತ್ತು ಪ್ರಕಾರಗಳ ಭಾಷಾಂತರ**

ಆಧುನಿಕಪೂರ್ವ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಾವ್ಯ ಪ್ರಕಾರವು ಮುಂಚೂಣಿಯಲ್ಲಿರುವುದು ತಿಳಿದಿರುವ ಸಂಗತಿ. ಆದರೆ ಹತ್ತೊಂಬತ್ತನೇ ಶತಮಾನದ ವೇಳೆಗೆ ಇದರಲ್ಲಿ ಗಮನಾರ್ಹ ಬದಲಾವಣೆಯಾಯಿತು. ವಸಾಹತುಶಾಹಿಯ ಪರಿಣಾಮದಿಂದ ಪರಿಚಿತವಾದ ಆಧುನಿಕ ಸಾಹಿತ್ಯ ಪ್ರಕಾರಗಳು ಈ ಹಿಂದಿನ ಸಾಹಿತ್ಯ ಪ್ರಕಾರಗಳಿಗಿಂತ ಮುನ್ನೆಲೆಗೆ ಬಂದವು. ಹೀಗೆ ಮುಂಚೂಣಿಗೆ ಬಂದ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಆಧುನಿಕ ನಾಟಕ, ಸಾಮಾಜಿಕ ಹಾಗೂ ಗಂಭೀರ ನಾಟಕ ಪ್ರಕಾರ, ಕಾದಂಬರಿ ಮತ್ತು ಸಣ್ಣಕತೆ ಇತ್ಯಾದಿಗಳು ಪ್ರಮುಖವಾದವುಗಳಾಗಿದೆ. ಇವೆಲ್ಲ ಗದ್ಯಪರಂಪರೆಯ ಭಿನ್ನ ಸ್ವರೂಪದ ಸಂರಚನೆಯನ್ನು ಹೊಂದಿದವುಗಳಾಗಿದ್ದು ಪ್ರತ್ಯೇಕವಾದ ಅಸ್ಮಿತೆಯನ್ನು ಕಟ್ಟಿಕೊಂಡಿವೆ. ಹಾಗೇ ನೋಡಿದರೆ 'ಇಂಗ್ಲಿಷ್ ಗೀತಗಳು' ಪೂರ್ವದ ಒಟ್ಟು ಸಾಹಿತ್ಯ ರಚನೆಯು ಕಾವ್ಯದಿಂದ ಗದ್ಯಪರಂಪರೆಗೆ ತೆರೆದುಕೊಂಡಿತು ಅಥವಾ ಪಲ್ಲಟವಾಯಿತು ಎನ್ನಬಹುದು.

ಕನ್ನಡದಲ್ಲಿ ಇದುವರೆಗೆ ನಡೆದ ಸಾಹಿತ್ಯ ಪ್ರಕಾರಗಳ ಕುರಿತಾದ ಅಧ್ಯಯನಗಳು ಪ್ರಮುಖವಾಗಿ 'ಪ್ರಕಾರಗಳ ಉಗಮ'ದ ಸಂಕಥನವನ್ನು ಗುರುತಿಸುವ, ವಿನ್ಯಾಸಗೊಳಿಸುವ ಪ್ರಯತ್ನವನ್ನು ಮಾಡಿವೆ. ಆದರೆ ಪ್ರಕಾರಗಳ ಉಗಮಕ್ಕಿಂತ ಪ್ರಕಾರಗಳು 'ರೂಪುಗೊಳ್ಳುವಿಕೆ'ಯ ಸಂಕಥನಕ್ಕೆ ಸೇರಿದವುಗಳು ಎಂಬುದು ಗಮನಾರ್ಹ. ಆಧುನಿಕ ಸಂದರ್ಭದಲ್ಲಿ ಪಠ್ಯವೊಂದು ಒಂದೇ ಮೂಲವನ್ನು ಹೊಂದಿರುವುದನ್ನು ಕಾಣುತ್ತೇವೆ. ಈ ಪಠ್ಯವು ಇದರ ಭಾಷಾಂತರ ಎಂದು ಹೇಳವಾಗುವುದು. ಆದರೆ ಈ ಏಕಮೂಲದಂತೆ ಬಹುಮೂಲದಿಂದಲೂ ಭಾಷಾಂತರ ಅಥವಾ 'ರೂಪಾಂತರ' ಪಠ್ಯಗಳು ರೂಪುಗೊಳ್ಳುತ್ತವೆ. ಆಧುನಿಕ ಪೂರ್ವ ಕನ್ನಡ ಸಾಹಿತ್ಯಕ ಪಂಪ, ರನ್ನ ಮುಂತಾದ ಕವಿಗಳ ಕಾವ್ಯ, ವಚನಕಾರರ ವಚನ ಇತ್ಯಾದಿಗಳು ಇದಕ್ಕೆ ಉದಾಹರಣೆಯಾಗಿವೆ. ಹೀಗೆ ಪಠ್ಯದೊಂದಿಗೆ ಪ್ರಕಾರಗಳ ಭಾಷಾಂತರವನ್ನು ಗಮನಿಸುವಾಗ 'ಏಕಮೂಲ' ಎನ್ನುವುದು 'ಬಹುಮೂಲ'ವಾಗಿ ವಿಸ್ತರಿಸಿಕೊಳ್ಳತ್ತದೆ. ಭಾಷಾಂತರ ಅಧ್ಯಯನದ ಸಂದರ್ಭದಲ್ಲಿ ನಡೆದಿರುವ ಮೂಲದ ಕುರಿತಾದ ಚರ್ಚೆಗಳು ಆಧುನಿಕ ಸಂದರ್ಭದಲ್ಲಿ 'ಏಕಮೂಲ'ದೊಂದಿಗೆ 'ಬಹುಮೂಲ'ದ ಬಗ್ಗೆ ವಿಶ್ಲೇಷಣೆಗಳು ನಡೆದಿವೆ. ಈ ಹಿನ್ನೆಲೆಯಲ್ಲಿ ಪ್ರಕಾರಗಳ ರೂಪುಗೊಳ್ಳುವಿಕೆಯನ್ನು ಗಮನಿಸಬೇಕಾದ ಅಗತ್ಯವಿದೆ.

ಹತ್ತೊಂಬತ್ತನೇ ಶತಮಾನದಲ್ಲಿ ರೂಪುಗೊಂಡ ಸಾಹಿತ್ಯ ಪ್ರಕಾರಗಳಿಗೆ ಒಂದು ನಿರ್ದಿಷ್ಟ ಮೂಲವೆನ್ನುವುದಿಲ್ಲ ಅಥವಾ ಏಕಮೂಲದ ಈ ಕ್ರಮ ಸಮಂಜಸವು ಎನಿಸಲಿಲ್ಲ. ಹಾಗಾಗಿ ಬಹು ಮೂಲಗಳಿಂದ ಇವುಗಳನ್ನು ರೂಪಿಸಿಕೊಳ್ಳಲಾಯಿತು. ಇದು ಆ ಕಾಲದ ವಿಶಿಷ್ಟ ಗುಣವೂ ಹೌದು. ಆದರೆ ಈ ಸಾಹಿತ್ಯ ಪ್ರಕಾರಗಳ ಮೂಲ ಪ್ರಸ್ತುತ ಅವಧಿಯಲ್ಲಿ ಭಾಷಾಂತರ ಅಧ್ಯಯನವು ಪರಿಭಾವಿಸಿಕೊಂಡ ಮೂಲಕ್ಕಿಂತ ಭಿನ್ನವಾದುದು ಅಥವಾ ವಿಶಿಷ್ಟವಾದುದು. ಯಾಕೆಂದರೆ ಈ ಎರಡೂ ಮೂಲಗಳ ಮಧ್ಯೆ ತಾತ್ವಿಕವಾದ ವ್ಯತ್ಯಾಸಗಳಿವೆ. ಭಾಷಾಂತರದ ಸಂದರ್ಭದಲ್ಲಿ 'ಮೂಲ' ಎಂಬುದು ಪಠ್ಯ, ಪಠ್ಯದ ಭಾಷೆ, ವಸ್ತು, ವಿಷಯ ಇತ್ಯಾದಿಗಳನ್ನು ಪ್ರತಿನಿಧಿಸಿದರೆ, ಪ್ರಕಾರಗಳ ಸಂದರ್ಭದಲ್ಲಿ 'ಮೂಲ' ಎಂಬುದು ಇವೆಲ್ಲವುಗಳಿಗಿಂತ ಭಿನ್ನ ಅಂದರೆ ಪರಂಪರೆಯನ್ನು ಪ್ರತಿನಿಧಿಸುತ್ತದೆ. ಕನ್ನಡದ ಸಂದರ್ಭದಲ್ಲಿ ಆಧುನಿಕ ಸಾಹಿತ್ಯ ಪ್ರಕಾರಗಳು ಬಹುಮೂಲಗಳನ್ನಾಧರಿಸಿ ರೂಪುಗೊಂಡವುಗಳಾಗಿವೆ. ಕನ್ನಡ ಸಾಹಿತ್ಯ ಪರಂಪರೆಯೊಂದಿಗೆ, ಪಶ್ಚಿಮದ ಸಾಹಿತ್ಯ ಪ್ರಕಾರಗಳನ್ನು, ವಸಾಹತು ಸಂದರ್ಭದ ಅಗತ್ಯವನ್ನು ಮತ್ತು ಅಂದಿನ ಸಾಮಾಜಿಕ ತುರ್ತು ಇತ್ಯಾದಿ 'ಬಹುಮೂಲ'ಗಳನ್ನು ಹೊಂದಿವೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಪಂಪ ಮತ್ತಿತರ ಪೂರ್ವದ ಕವಿಗಳ ಕಾವ್ಯಗಳನ್ನು ಪುನರ್‌ಲೇಖದ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳಲಾದ ಮೂಲದ ಸ್ವರೂಪ, ಲಕ್ಷಣಗಳಿಗೂ ಆಧುನಿಕ ಸಾಹಿತ್ಯ ಪ್ರಕಾರಗಳ ರೂಪುಗೊಳ್ಳುವಿಕೆಯಲ್ಲಿ ಗುರುತಿಸಿಕೊಂಡ ಮೂಲಗಳಿಗೆ ಸ್ವಲ್ಪಪ್ರಮಾಣದ ಸಾಮ್ಯತೆಗಳಿವೆ. ಇವೆರಡರಲ್ಲಿ 'ಮೂಲ'ವೆಂಬುದು ಒಂದರ ಬದಲಿಗೆ 'ಬಹುಮೂಲ'ವಾಗಿದೆ. ಈ ಬಹುಮೂಲಗಳ ಮೂಲಕವೇ ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳನ್ನು ರೂಪಿಸಿಕೊಳ್ಳಲು ಕನ್ನಡದ ಬರಹಗಾರರು ಪ್ರಯತ್ನಿಸಿದರು.

### ೫.೧.೧. ಆಧುನಿಕ ನಾಟಕ: ಪ್ರಕಾರ ಮತ್ತು ಪಠ್ಯ ಭಾಷಾಂತರ

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರದ ಸಂದರ್ಭದಲ್ಲಿ ಆಧುನಿಕ ನಾಟಕ ಪ್ರಕಾರವು ಇತರ ಪ್ರಕಾರಗಳಿಗಿಂತ ಮುಂಚೂಣಿಯಲ್ಲಿತ್ತು. ಕನ್ನಡದ ಮುಂದೆ ಬೆಳೆದುನಿಂತ ಸಂಸ್ಕೃತ ಸಾಹಿತ್ಯ ಹಾಗೂ ವಸಾಹತುಶಾಹಿಯ ಪ್ರತಿನಿಧಿಯೂ, ಆಧುನಿಕತೆಯ ವಾಹಕವೂ ಆಗಿದ್ದ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಪ್ರೇರಣೆಗಳು ಆಧುನಿಕ ನಾಟಕ ಪ್ರಕಾರಕ್ಕಿದೆ. ಇದರಿಂದಾಗಿಯೇ ಶೇಷಗಿರಿರಾವ್ ಅವರು ''ಕಾದಂಬರಿ ಸಣ್ಣಕತೆಗಳಿಗೆ ಲಭ್ಯವಿಲ್ಲದ ಸಂಸ್ಕೃತ ಸಾಹಿತ್ಯದ ಪರಂಪರೆ ನಾಟಕ ಸಾಹಿತ್ಯಕ್ಕೆ ಲಭ್ಯವಿತ್ತು. ಇದನ್ನು ಒಂದು ಹಂತದವರೆಗೆ (೧೮೯೦) ಸರಿ ಎಂದಿಟ್ಟುಕೊಳ್ಳಬಹುದು'' (ಶೇಷಗಿರಿರಾವ್ ಎಲ್.ಎಸ್. ೨೦೦೭, ಪು.೧೫೫) ಎಂದಿರುವುದು. ಇವರ ಪ್ರಕಾರ ೧೮೬೦ರ ವರೆಗೆ ಅಂದರೆ ಕನ್ನಡದಲ್ಲಿ ನಾಟಕ ಪ್ರಕಾರವು ರೂಪುಗೊಳ್ಳುತ್ತಿದ್ದ ಅವಧಿಯಲ್ಲಿ ಸಂಸ್ಕೃತ ಸಾಹಿತ್ಯ ಪರಂಪರೆಯಿಂದ ಬೇಕಾದುದನ್ನು ಪಡೆದುಕೊಂಡಿತು ಎಂಬುದು. ಈ ಸಂದರ್ಭದಲ್ಲಿ ಸಂಸ್ಕೃತದಿಂದ ಹಲವಾರು ನಾಟಕ ಕೃತಿಗಳು ಕನ್ನಡದ ಸಂದರ್ಭಕ್ಕೆ ನೇರ ಭಾಷಾಂತರಗೊಂಡಿರುವುದಂತೂ ನಿಜ.[೨] ಹಾಗಂತ ಅದನ್ನೇ ಅನುಸರಿಸಿ ಈ ಪ್ರಕಾರ ರೂಪುಗೊಳ್ಳಲಿಲ್ಲ. ಪರಂಪರೆಯ ಪ್ರಶ್ನೆ ಬಂದಾಗ ಸಂಸ್ಕೃತ ಸಾಹಿತ್ಯದಿಂದ ಪಡೆದುಕೊಳ್ಳುವ ಹಾಗೂ ಆಧುನಿಕತೆಯ ಸಂದರ್ಭದಲ್ಲಿ ಅದನ್ನು ಇಂಗ್ಲಿಷ್ ಸಾಹಿತ್ಯದ ಮಾದರಿಯಲ್ಲಿ ರೂಪಿಸಿಕೊಳ್ಳುವ ಪ್ರಯತ್ನ ನಡೆದಿದೆ. ಇದರಿಂದ ತಿಳಿಯುವುದೇನೆಂದರೆ ಕನ್ನಡ ನಾಟಕ ಪ್ರಕಾರ ದೇಶೀಯ ಮೂಲದಿಂದಲೂ (ಸಂಸ್ಕೃತ ಮತ್ತಿತರ) ಹಾಗೂ

ಪಶ್ಚಿಮದಿಂದಲೂ ಸಂದರ್ಭಾನುಸಾರ ಬೇಕಾದುದನ್ನು ಸ್ವೀಕಾರ, ಸೇರ್ಪಡೆ, ಸ್ಥಳೀಕರಣದ ನೆಲೆಯಲ್ಲಿ ಪಡೆದುಕೊಂಡಿದೆ. ಮತ್ತು ಇದರ ಪಾಕದಿಂದ ಕನ್ನಡದಲ್ಲಿ ಸ್ವತಂತ್ರ ನಾಟಕ ಪ್ರಕಾರವೊಂದನ್ನು ರೂಪಿಸಿಕೊಳ್ಳಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಹದಿನೇಳನೇ ಶತಮಾನದವರೆಗೆ ಯಾವುದೇ ಮಾದರಿಯಲ್ಲಿಯೂ ನಾಟಕ ಒಂದು ಪ್ರಕಾರವಾಗಿ ದೊರೆತಿಲ್ಲ. ಹಾಗಂತ ಕನ್ನಡದ ಕವಿಗಳಿಗೆ 'ನಾಟಕೀಯತೆ' ಪ್ರಜ್ಞೆ ಇಲ್ಲವೆನ್ನುವಂತಿಲ್ಲ. ಯಾಕೆಂದರೆ ಪಂಪ ತನ್ನ ಕಾವ್ಯದಲ್ಲಿ ಬಳಸಿದ ನಾಟಕೀಯತೆಯ ಕೌಶಲ್ಯ ರನ್ನನ 'ಸಾಹಸ ಭೀಮವಿಜಯ'ದ ನಾಟಕೀಯತೆಯ ಸ್ವರೂಪ, ಇತ್ಯಾದಿಗಳು ಗಮನಾರ್ಹವಾದುದು. ಇಂತಹ ಮಾದರಿ ಆ ನಂತರದ ಕಾವ್ಯ ಪರಂಪರೆಯಲ್ಲಿಯೂ ಮುಂದುವರಿದಿದೆ. ಆದರೆ ಈ 'ನಾಟಕೀಯತೆ' ಎನ್ನುವುದು ನಾಟಕ ಪ್ರಕಾರವಾಗಿ ರೂಪುಗೊಳ್ಳಲು ಪ್ರಯತ್ನಿಸಲೇ ಇಲ್ಲ. ಒಂದು ವೇಳೆ ಇಂತಹ ಪ್ರಯತ್ನಗಳು ನಡೆದರೂ ಯಾವುದು ಲಭ್ಯವಿಲ್ಲ. ಹೀಗಾಗಿ ಸಿಂಗಾರಾರ್ಯನ 'ಮಿತ್ರಾವಿಂದ ಗೋವಿಂದ' (೧೭ನೇ ಶತಮಾನ) ಕನ್ನಡದ ಉಪಲಬ್ಧ ಮೊದಲ ನಾಟಕವೆಂದು ಗುರುತಿಸಲ್ಪಟ್ಟಿದೆ.

'ಮಿತ್ರಾವಿಂದ ಗೋವಿಂದ' ನಾಟಕ ಒಂದು ಸ್ವತಂತ್ರ ನಾಟಕವಲ್ಲ. ಸುಮಾರು ೪.೫ನೇ ಶತಮಾನದಲ್ಲಿ ಶ್ರೀಹರ್ಷ ರಚಿಸಿದ ಸಂಸ್ಕೃತದ 'ರತ್ನಾವಳಿ' ನಾಟಕದ ಭಾಷಾಂತರವಿದಾಗಿದೆ. ಇದನ್ನು 'ರೂಪಾಂತರ' ನಾಟಕವೆಂದು ಕರೆಯುವುದೇ ಸಮಂಜಸ. ಯಾಕೆಂದರೆ ಸಿಂಗಾರಾರ್ಯ ರತ್ನಾವಳಿಯನ್ನು ನೇರವಾಗಿ ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನ ಮಾಡಿಲ್ಲ. ಬದಲಿಗೆ ತನ್ನ ವೈಷ್ಣವ ಮತದ ಪ್ರೇಮವನ್ನು ಈ ಕೃತಿಯ ಮುಖೇನ ಪ್ರಕಟಿಸಲೋಸುಗ ನಾಟಕಕ್ಕೆ ಪೌರಾಣಿಕ ವೇಷಕಟ್ಟಿ ರೂಪಾಂತರಿಸಿದ್ದಾನೆ. ಹೀಗಾಗಿ ಕನ್ನಡದ ಮೊದಲ ನಾಟಕವೆಂದು ಗುರುತಿಸಲ್ಪಟ್ಟ 'ಮಿತ್ರಾವಿಂದ ಗೋವಿಂದ' ನಾಟಕ ಒಂದು ರೂಪಾಂತರ ಕೃತಿ. ಈ ಹಿನ್ನೆಲೆಯಲ್ಲಿ ಕನ್ನಡದ ನಾಟಕ ಪ್ರಕಾರ ಹೇಗೆ ರೂಪುಗೊಂಡಿತು ಎಂಬುದು ಗಮನಿಸಬಹುದು.

ಆಧುನಿಕ ಕನ್ನಡ ನಾಟಕ ಪ್ರಕಾರವು ಉಗಮವಾದುದು ಸುಮಾರು ಕ್ರಿ.ಶ.೧೮೮೦ ಕಾಲದಲ್ಲಿ. ನಾಟಕ ಸಾಹಿತ್ಯದ ಕುರಿತು ನಡೆದ ಇದುವರೆಗಿನ ಅಧ್ಯಯನಗಳು ಶಾಸನ, ಪ್ರಾಚೀನ ಕಾವ್ಯ ಮತ್ತು ಇತರ ಮೂಲಗಳಿಂದ ಇದರ ಮೂಲವನ್ನು ಗುರುತಿಸುವ ಪ್ರಯತ್ನ ಮಾಡಿವೆ. ಇಂತಹ ಸಂದರ್ಭದಲ್ಲಿ ಬಹುತೇಕ ಅಧ್ಯಯನಕಾರರು ನಾಟಕ ಪ್ರಕಾರವನ್ನು ಒಂದು 'ಸೃಷ್ಟಿ' ಎಂಬ ಹಿನ್ನೆಲೆಯಲ್ಲಿಯೇ ಗುರುತಿಸಲು ಮುಂದಾಗಿದ್ದರು. ಆದರೆ ಈ ಪ್ರಕಾರವು ಕನ್ನಡ ಸಾಹಿತ್ಯ ಪ್ರಕಾರವಾಗಿ ಯಾವ ಬಗೆಯಲ್ಲಿ ರೂಪುಗೊಂಡಿತು ಅಥವಾ ಅದರ ರೂಪುಗೊಳ್ಳುವಿಕೆ ಪ್ರಕ್ರಿಯೆಯ ಬಗ್ಗೆ ನಡೆದ ಅಧ್ಯಯನ ಕಡಿಮೆ ಎನ್ನಬೇಕು. ಹೀಗಾಗಿ ಇದೊಂದು ರೂಪುಗೊಂಡಿರುವ ಪ್ರಕ್ರಿಯೆ ಎಂಬ ಹಿನ್ನೆಲೆಯಲ್ಲಿ ಗಮನಿಸುವುದು ಮುಖ್ಯವಾಗಿದೆ.

ಕನ್ನಡದ ಸಂದರ್ಭದಲ್ಲಿ ಆಧುನಿಕ ನಾಟಕ ಪ್ರಕಾರವೊಂದು ರೂಪುಗೊಂಡಿರುವುದಕ್ಕೂ ಬ್ರಿಟೀಶ್ ಆಡಳಿತ ತಂದಿರುವ ಆಧುನಿಕ ಇಂಗ್ಲಿಷ್ ಶಿಕ್ಷಣದಿಂದಾದ ಒಟ್ಟಾರೆ ಪಲ್ಲಟಗಳಿಗೂ ಬಿಡಿಸಲಾರದ ನಂಟಿದೆ. ನಾಟಕ ಪ್ರಕಾರವು ರೂಪುಗೊಳ್ಳುವಿಕೆಗೆ ಆಧುನಿಕತೆಯು ಸಮರ್ಪಕವಾದ ಸ್ಥಳಾವಕಾಶವನ್ನು ಒದಗಿಸಿದೆ. ಹಾಗೂ ಆಧುನಿಕತೆಯಿಂದ ಅವಶ್ಯಕವಾದುದನ್ನು ಈ ನಾಟಕ ಪ್ರಕಾರ ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದೆ. ಇದರಿಂದಾಗಿ ಬಹುಮೂಲದಿಂದಲೂ ನಾಟಕ ಪ್ರಕಾರ ಪಡೆದುಕೊಂಡಿದೆ ಎಂದು ಈ ಹಿಂದೆ ಪ್ರಸ್ತಾಪಿಸಿದ್ದು. ಕನ್ನಡದ ನಾಟಕ

ಪ್ರಕಾರದ 'ರೂಪುಗೊಳ್ಳುವಿಕೆ'ಯು ಸಂಯೋಜನೆಯ ಕ್ರಮದಿಂದಾಗಿದೆ. ಸಂಯೋಜನೆಯಲ್ಲಿ ಪ್ರಧಾನವಾಗಿ ಎರಡು ಧಾರೆಗಳಿವೆ. ಮೊದಲನೆಯದು, ಆಧುನಿಕ ನಾಟಕ ಪ್ರಕಾರವು ಭಾರತೀಯ ಎಂದು ಕರೆಯಲಾದ ಸಂಸ್ಕೃತ ಸಾಹಿತ್ಯದಿಂದ ಹಾಗೂ ಸ್ಥಳೀಯ ಅಂಶಗಳನ್ನು ಪರಂಪರೆಯ ಭಾಗವಾಗಿ ಪಡೆದುಕೊಂಡಿದ್ದು ಎರಡನೆಯದು, ವಸಾಹತುಶಾಹಿಯಿಂದ ಪರಿಚಿತಗೊಂಡ ಇಂಗ್ಲಿಷಿನ ನಾಟಕ ಸಾಹಿತ್ಯವನ್ನು 'ರೂಪಾಂತರಿಸಿ' ಕನ್ನಡದ ಸಂದರ್ಭಕ್ಕೆ ಹೊಂದಿಸಿಕೊಂಡಿದ್ದು. ಈ ಎರಡೂ ಆ ಕಾಲದ ಚಾರಿತ್ರಿಕ ಸಂದರ್ಭಕ್ಕೆ ಪೂರಕವಾಗಿ ಒಂದನ್ನೊಂದು ಸಂಯೋಜನೆಗೊಳ್ಳುವ ಮೂಲಕ ಆಧುನಿಕ ನಾಟಕ ಪ್ರಕಾರ ರೂಪುಗೊಂಡಿದೆ. ಅದನ್ನು ಈ ಕೆಳಗಿನಂತೆ ಗಮನಿಸಬಹುದು.

ಸಂಸ್ಕೃತ ಸಾಹಿತ್ಯದ ಪ್ರಭಾವ ಪ್ರೇರಣೆ ಕನ್ನಡ ಸಾಹಿತ್ಯಕ್ಕೆ ಲಾಗಾಯ್ತಾನಿಂದಲೂ ಇದೆ ಎಂದು ಒಂದೆಡೆ ಕೆ.ವಿ.ನಾರಾಯಣ ಅವರು ಹೇಳುತ್ತಾರೆ. ಆದರೆ ನಾಟಕ ಪ್ರಕಾರದ ಹಿನ್ನೆಲೆಯಲ್ಲಿ ನೋಡಿದರೆ ಅದು ತಡವಾಗಿ ಅಂದರೆ ಹತ್ತೊಂಬತ್ತನೇ ಶತಮಾನದಲ್ಲಿ ಆಯಿತು ಎನ್ನಬಹುದು. 'ಮಿತ್ರಾವಿಂದ ಗೋವಿಂದ' ನಾಟಕವು ಹದಿನೇಳನೇ ಶತಮಾನದಲ್ಲಿ ಕನ್ನಡಕ್ಕೆ ರೂಪಾಂತರಗೊಂಡ ನಂತರ ೧೯ನೇ ಶತಮಾನದವರೆಗೆ ಯಾವುದೇ ರೀತಿಯಲ್ಲಿ ಸಂಸ್ಕೃತ ಭಾಷೆಯ ನಾಟಕ ಕನ್ನಡಕ್ಕೆ ಬಂದ ಉಲ್ಲೇಖಗಳು ದೊರೆಯುವುದಿಲ್ಲ. ಚುರಮುರಿಯವರ 'ಶಾಕುಂತಲ ನಾಟಕ' (೧೮೭೦)ವು 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸಂಸ್ಕೃತದಿಂದ ಭಾಷಾಂತರಗೊಂಡ ಮೊದಲ ನಾಟಕ ಎನ್ನಬಹುದು. ಇಲ್ಲಿಂದ ಸಂಸ್ಕೃತ ನಾಟಕಗಳ ಕನ್ನಡ ಭಾಷಾಂತರ ಚಟುವಟಿಕೆ ಆರಂಭವಾಯಿತು. ಈ ರೀತಿಯಲ್ಲಿ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಕೊಳ್ಳುವ ಸಂದರ್ಭದಲ್ಲಿ ಅದನ್ನು ಪ್ರಕಾರದ ಹಿನ್ನೆಲೆಯಲ್ಲಿಯೂ ಗ್ರಹಿಸುವ ಪ್ರಯತ್ನ ಮಾಡಿದ್ದರು. ಕನ್ನಡಿಗರಿಗೆ ಸಂಸ್ಕೃತ ಸಾಹಿತ್ಯ ಚಿರಪರಿಚಿತವಾಗಿರುವುದು ಮತ್ತು ಸಂಸ್ಕೃತದ ಪರಂಪರೆ ಕನ್ನಡದ ಪರಂಪರೆಯೂ ಆಗಿದ್ದರಿಂದ ಇದು ಸುಲಭವಾಯಿತು. ಒಂದೆಡೆ ಸಂಸ್ಕೃತದ ನಾಟಕಗಳನ್ನು ನೇರ ಭಾಷಾಂತರದ ಮೂಲಕ ಕನ್ನಡದ ರಂಗಭೂಮಿಗಾಗಿ ಸಿದ್ಧಗೊಳಿಸುತ್ತಿದ್ದರೆ, ಇನ್ನೊಂದೆಡೆ ರಂಗಭೂಮಿಯ ವಿಕಾಸ ನಾಟಕ ಪ್ರಕಾರದ ರೂಪುಗೊಳ್ಳುವಿಕೆಯ ಅನಿವಾರ್ಯತೆಯನ್ನು ಸೃಷ್ಟಿಸಿತ್ತು. ಹೀಗಾಗಿ ನಾಟಕ ಪ್ರಕಾರ ರೂಪುಗೊಳ್ಳುವ ಪ್ರಕ್ರಿಯೆಯಾಯಿತು.

ಹೀಗೆ ಒಂದೆಡೆ ದೇಶೀಯ ನಾಟಕ ಪರಂಪರೆಯ ಪ್ರಭಾವ ಆಧುನಿಕ ಸಂದರ್ಭದಲ್ಲಿ ಕನ್ನಡಗರಿಗೆ ಆಗುತ್ತಿದ್ದಂತೆ ಇಂಗ್ಲಿಷ್ ವಿದ್ಯಾಭ್ಯಾಸದ ಭಾಗವಾಗಿ ಇಂಗ್ಲಿಷ್ ನಾಟಕಗಳು ಕನ್ನಡಿಗರಿಗೆ ಪರಿಚಯವಾದವು. ಸಂಸ್ಕೃತ ನಾಟಕಗಳ ಭಾಷಾಂತರದ ಸಂದರ್ಭದಲ್ಲಿ ಪಾರ್ಸಿ ಕಂಪನಿ ಕರ್ನಾಟಕದಲ್ಲಿ ನಾಟಕ ಪ್ರಯೋಗಗಳನ್ನು ನಡೆಸಿತು. ''ಪಾರ್ಸಿಗಳಿಂದ ಕೆಲವು ಮಂದಿ ಕನ್ನಡಿಗರು ಅವರು ಪ್ರದರ್ಶಿಸುತ್ತಿದ್ದ 'ಇಂದ್ರಸಭಾ', 'ಗುಲೇಬಕಾವಲಿ' ಯಂಥ ಜನಪ್ರಿಯ ನಾಟಕಗಳನ್ನು ಹಿಂದೂಸ್ಥಾನ ಭಾಷೆಯಲ್ಲಿಯೇ ಅಭಿನಯಿಸಲು ತೊಡಗಿದರಂತೆ'' (ಮರುಳುಸಿದ್ದಪ್ಪ ಕೆ. ೨೦೦೨, ಪು. ೪೦). ಹೀಗೆ ರಂಗಭೂಮಿಯ ವಿಕಾಸದೊಂದಿಗೆ ಕನ್ನಡ ನಾಟಕ ಪ್ರಕಾರವು ರೂಪುಗೊಳ್ಳುವಿಕೆಯು ಸಂಬಂಧ ಹೊಂದಿದೆ. ಇದರಿಂದಾಗಿ ಬೇರೆ ಬೇರೆ ಭಾಷೆಯಿಂದ ನಾಟಕಗಳು ಕನ್ನಡದ ಸಂದರ್ಭದಲ್ಲಿಯೇ ಸಿದ್ಧಗೊಂಡಿರುವುದರೊಂದಿಗೆ ಅವುಗಳು ರಂಗಭೂಮಿಯ ಅವಶ್ಯಕತೆಯನ್ನು ಪೂರೈಸಿದವು.

ಪಾರ್ಸಿ ಕಂಪನಿಯಿಂದ ಪ್ರಭಾವಿತರಾದ ಮೈಸೂರು ಆಡಳಿತವು ನಾಟಕದ ಕುರಿತು ಆಸಕ್ತಿ ತಳೆದು ಈ ಕುರಿತು ಆಲೋಚಿಸಿದರೆ, ಉತ್ತರ ಕರ್ನಾಟಕದಲ್ಲಿ ಪ್ರದರ್ಶನ ನೀಡಿದ ಮರಾಠಿ ನಾಟಕ ಮಂಡಳಿಗಳು ಅಲ್ಲಿನ ಜನತೆಗೆ ನಾಟಕದ ಕುರಿತು ಕುತೂಹಲವನ್ನುಂಟು ಮಾಡಿತು. ಇದರ ಫಲವಾಗಿ ೧೮೭೨ರಲ್ಲಿ 'ಗದುಗಿನ ಶ್ರೀ ವೀರನಾರಾಯಣ ಪ್ರಸಾದಿತ ಕೃತಪುರ ನಾಟಕ ಮಂಡಳಿ' ಶಾಂತ ಕವಿಗಳ ಪ್ರೋತ್ಸಾಹದಿಂದ ಆರಂಭಗೊಂಡಿತು. ಈ ಚಾರಿತ್ರಿಕ ಅಂಶ ಸಹ ಕನ್ನಡದಲ್ಲಿ ಆಧುನಿಕ ನಾಟಕ ಪ್ರಕಾರ ರೂಪುಗೊಳ್ಳಲು ಪೂರಕವಾದ ಭೂಮಿಕೆಯನ್ನು ಸಿದ್ಧಗೊಳಿಸಿದೆ.

ಕನ್ನಡ ನಾಟಕ ಪ್ರಕಾರದ ಅಧ್ಯಯನ ಸಂದರ್ಭದಲ್ಲಿ ನಾಟಕ ಪ್ರಕಾರದ ರೂಪುಗೊಳ್ಳುವಿಕೆ ಮತ್ತು ರಂಗಭೂಮಿ ವಿಕಾಸವನ್ನು ಬೇರೆ ಬೇರೆಯಾಗಿ ನೋಡುವಂತಿಲ್ಲ. ವಿವಿಧ ಕಡೆಗಳಲ್ಲಿ ಬೆಳೆಯುತ್ತಿದ್ದ ರಂಗಭೂಮಿಯ ಕುರಿತಾದ ಆಸಕ್ತಿ ಮತ್ತು ಇದರಿಂದ ರಂಗಭೂಮಿಯ ವಿಕಾಸವು ನಾಟಕ ರಚನೆಗೆ ಅವಕಾಶ ನೀಡಿತ್ತು. ಅನಿವಾರ್ಯವಾಗಿ ಕನ್ನಡದಲ್ಲಿ ನಾಟಕಗಳು ಬೇಕಾದವು. ಹೀಗಾಗಿಯೇ ಪರಂಪರೆಯ ಭಾಗವಾಗಿ ಬಂದ ಸಂಸ್ಕೃತ ನಾಟಕಗಳ ನೇರ ಭಾಷಾಂತರ ಮತ್ತು ವಸಾಹತುಶಾಹಿಯನ್ನು ಕನ್ನಡದ ಸಂದರ್ಭದಲ್ಲಿ ಅರ್ಥೈಸಿಕೊಳ್ಳುವ ಅಥವಾ ಅದರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದರ ಭಾಗವಾಗಿ ಬಂದ ಪಶ್ಚಿಮದ ನಾಟಕಗಳ 'ಸ್ಥಳೀಕರಣ' ಇವೆರಡೂ ಕನ್ನಡದಲ್ಲಿ ನಾಟಕ ಪ್ರಕಾರವನ್ನು ರೂಪಿಸಿಕೊಳ್ಳುವ ಗುಣವನ್ನೇ ಹೊಂದಿದವುಗಳಾಗಿದ್ದವು. ಇದರೊಂದಿಗೆ ಜಾನಪದ ರಂಗಭೂಮಿಯೂ ಸೇರಿಕೊಂಡಿರುವುದು ಕುತೂಹಲಕಾರಿಯಾಗಿದೆ. ಹೀಗೆ ಬಹುಮೂಲಗಳಾದ ಸಂಸ್ಕೃತ ನಾಟಕದ ಪ್ರಭಾವ, ಇಂಗ್ಲಿಷ್ ನಾಟಕಗಳ ಅಳವಡಿಕೆ, ರಂಗಭೂಮಿಯ ವಿಕಾಸ ಮತ್ತು ಈ ಕುರಿತಾದ ಜನಸಮುದಾಯದ ಆಸಕ್ತಿ ಹಾಗೂ ಜಾನಪದ ರಂಗಭೂಮಿಯ ಸಂಬಂಧ, ಇವೆಲ್ಲವನ್ನು ಜೀರ್ಣಿಸಿಕೊಳ್ಳಲು ಪೂರಕವಾದ ಆಧುನಿಕ ಶಿಕ್ಷಣ ವಸಾಹತು ಸಂದರ್ಭದ ಗಮನಾರ್ಹ ಪಲ್ಲಟಗಳೆಲ್ಲ ಒಂದಕ್ಕೊಂದು ಸಂಯೋಜನೆಗೊಂಡು ಕನ್ನಡದಲ್ಲಿ ಆಧುನಿಕ ನಾಟಕ ಪ್ರಕಾರವೊಂದು ರೂಪುಗೊಳ್ಳಲು ಅಥವಾ ಭಾಷಾಂತರಗೊಳ್ಳಲು ಸಾಧ್ಯವಾಯಿತು. ಆರಂಭದಲ್ಲಿ ರಂಗಭೂಮಿಯ ಅಗತ್ಯಕ್ಕಾಗಿ ರಚನೆಗೊಂಡರೂ ನಂತರ ತನ್ನ ಅಸ್ಮಿತೆಯನ್ನು ಈ ಪ್ರಕಾರ ಕಾಯ್ದುಕೊಂಡಿದೆ. ಇದರಿಂದ ಒಟ್ಟಾರೆಯಾಗಿ ಭಾಷಾಂತರದ ಮೂಲಕ ಆಧುನಿಕ ನಾಟಕ ಪ್ರಕಾರವು ರೂಪುಗೊಂಡಿದೆ ಎನ್ನಬಹುದು.

'ಇಂಗ್ಲಿಷ್ ಗೀತಗಳು' ಪೂರ್ವದ ಅವಧಿಯಲ್ಲಿ ನಾಟಕಗಳು ಹೆಚ್ಚಿನ ಪ್ರಮಾಣದಲ್ಲಿ 'ಕನ್ನಡೀಕರಣ'ಗೊಂಡಿರುವುದು ಗಮನಾರ್ಹವಾಗಿದೆ. ಇತರ ಪ್ರಕಾರಗಳಿಗೆ ಹೋಲಿಸಿಕೊಂಡರೆ ನಾಟಕಗಳ ಭಾಷಾಂತರ ಮುಂಚೂಣಿಯಲ್ಲಿದೆ. ಇದರಲ್ಲಿ ಬಹುತೇಕ ನಾಟಕಗಳು 'ರೂಪಾಂತರ' ಅಥವಾ 'ಸ್ಥಳೀಕರಣದ' ಮೂಲಕ ಕನ್ನಡಕ್ಕೆ ಬಂದಿವೆ. ಈ ನಾಟಕಗಳ ಭಾಷಾಂತರ ಸುಮಾರು ೧೮೭೧ರ ಅವಧಿಯಲ್ಲಿ ಆರಂಭಗೊಂಡರೂ ೧೮೯೦ರ ನಂತರ ಹೆಚ್ಚಾಗಿ ನಡೆದಿವೆ. ನಾಟಕಗಳನ್ನು ಗಮನಿಸಿದರೆ ಶೇಕ್ಸ್‌ಪಿಯರ್‌ನ ನಾಟಕಗಳನ್ನು ಹೆಚ್ಚಿ ಸಂಖ್ಯೆಯಲ್ಲಿ ರೂಪಾಂತರಿಸಿಕೊಂಡಿರುವುದು ಕಂಡುಬರುತ್ತದೆ. ಉಳಿದಂತೆ, ಇತರ ನಾಟಕಕಾರರಾದ ಗೋಲ್ಡ್‌ಸ್ಮಿತ್, ಟೆನಿಸನ್ ಮುಂತಾದವರ ನಾಟಕಗಳು ಸಹ ಭಾಷಾಂತರಗೊಂಡಿವೆ. ಆದರೂ ಕನ್ನಡದ ಸಂದರ್ಭದಲ್ಲಿ ನಾಟಕಗಳ ರೂಪಾಂತರ ಆರಂಭವಾಗಿರುವುದೇ ಶೇಕ್ಸ್‌ಪಿಯರ ನಾಟಕದಿಂದ ಎಂಬುದು ಗಮನಿಸಬೇಕಾದ ಸಂಗತಿ.

ನಾಟಕಗಳ ಭಾಷಾಂತರ ೧೮೭೧ರಿಂದ ಆರಂಭಗೊಂಡಿದ್ದು ೨೧ನೇ ಶತಮಾನಕ್ಕೂ ಮುಂದುವರಿದಿದೆ. ೧೮೭೧ರಿಂದ ೧೯೦೦ರ ಅವಧಿಯಲ್ಲಿ ಸುಮಾರು ೧೫ ನಾಟಕಗಳು ಇಂಗ್ಲಿಷಿನಿಂದ ಕನ್ನಡಕ್ಕೆ ಬಂದರೆ ೧೯೦೦ ರಿಂದ ೧೯೨೧ರ ನಡುವೆ ಸರಿಸುಮಾರು ೨೮ ನಾಟಕಗಳು ಭಾಷಾಂತರಗೊಂಡಿವೆ. ಅಂದರೆ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸುಮಾರು ೪೯ ನಾಟಕಗಳು ಕನ್ನಡಕ್ಕೆ ಬಂದಿವೆ ಎಂದಾಯಿತು. ಇವುಗಳಲ್ಲಿ ೨೫% ನಾಟಕಗಳು ಗದ್ಯರೂಪದಲ್ಲಿ ಕನ್ನಡಕ್ಕೆ ಬಂದಿವೆ, ಅವುಗಳಲ್ಲಿ 'ಪದ್ಮಿನಿ' (೧೯೧೧), 'ನಗದವರನ್ನು ನಗಿಸುವ ಕಥೆ' (೧೮೭೧), 'ಭ್ರಾಂತಿ ವಿಲಾಸ'(೧೮೭೬), 'ಜಯಸಿಂಹರಾಜ ಚರಿತ್ರೆ' (೧೯೦೭), 'ಮಹೀಮಂಡನ' (೧೯೦೦) ಇತ್ಯಾದಿಗಳು. ಉಳಿದ ೭೫% ನಾಟಕಗಳು ಮೂಲದ ಪ್ರಕಾರದಲ್ಲಿಯೇ ಕನ್ನಡಕ್ಕೆ ರೂಪಾಂತರಗೊಂಡಿವೆ. ಈ ಗದ್ಯಾನುವಾದದ ನಾಟಕಗಳು ಬಹುಶಃ ಓದುಗರನ್ನು ಗಮನದಲ್ಲಿಟ್ಟುಕೊಂಡು ಬಂದವುಗಳಾಗಿವೆ. ಅಲ್ಲದೆ ಗಮನಿಸಬೇಕಾದ ಒಂದು ಸಂಗತಿಯೆಂದರೆ ಬಹುತೇಕ ಇಂಗ್ಲಿಷ್‌ನ ನಾಟಕಗಳ ಪರಿಚಯ ಕನ್ನಡಿಗರಿಗಾದದ್ದು 'ನಾಟಕ ಪಠ್ಯ' ದಿಂದಲೇ ಹೊರತು 'ರಂಗಕೃತಿ'ಯಿಂದಲ್ಲ. ಹೀಗಿದ್ದರೂ ನಾಟಕಗಳನ್ನು ಕನ್ನಡದ್ದಾಗಿಸಿಕೊಳ್ಳುವಾಗ ಸ್ಥಳೀಕರಣ ಮಾದರಿಯಲ್ಲಿ ಅವುಗಳನ್ನು 'ರಂಗಪಠ್ಯ'ಗಳಾಗಿ ರೂಪಿಸಿಕೊಂಡಿದ್ದು ಗಮನಿಸಬೇಕಾದ ವಿಚಾರವಾಗಿದೆ.

ಈ ರೀತಿಯಲ್ಲಿ ಇಂಗ್ಲಿಷ್‌ನ ಹೆಚ್ಚಿನ ನಾಟಕಗಳು ರಂಗಭೂಮಿಯ ಕಾರಣದಿಂದ ಭಾಷಾಂತರಗೊಂಡಿವೆ. ನಾಟಕಗಳನ್ನು ಮೊದಮೊದಲು ಕಥೆಗಳ ರೂಪದಲ್ಲಿ ಭಾಷಾಂತರಿಸಿಕೊಳ್ಳಲು ಪ್ರಯತ್ನಿಸಿದವರು (ಉದಾಹರಣೆಗೆ ನಗದವರನ್ನು ನಗಿಸುವ ಕಥೆ (೧೮೭೧), ಭ್ರಾಂತಿ ವಿಲಾಸ' ಇತ್ಯಾದಿ) ನಂತರದ ದಿನಗಳಲ್ಲಿ ಇಂಗ್ಲಿಷ್ ನಾಟಕಗಳಿಗೆ ಕನ್ನಡದ 'ವೇಷ ಕಟ್ಟು'ವ ಮಾದರಿಯಲ್ಲಿ 'ರಾಮವರ್ಮ ಲೀಲಾವತಿ', 'ಪಾಂಚಾಳೀ ಪರಿಣಯ' ಮುಂತಾದ ನಾಟಕಗಳು ಕನ್ನಡಕ್ಕೆ ಬಂದವು. ಶ್ರೀಕಂಠೇಶಗೌಡರಂಥ ಪ್ರಯೋಗಶೀಲರು 'ಪ್ರತಾಪರುದ್ರದೇವ', ಮತ್ತು 'ಪ್ರಮಿಳಾರ್ಜುನೀಯ' ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸುವುದನ್ನು ನೋಡಬಹುದಾಗಿದೆ.

ನಾಟಕ ಪ್ರಕಾರಕ್ಕೆ 'ಸಾಹಿತ್ಯಕ' ಮತ್ತು 'ರಂಗಭೂಮಿ'ಯೆಂಬ ಎರಡು ಆಯಾಮಗಳಿವೆ. ಇವು ಒಂದಕ್ಕೊಂದು ಪೂರಕವಾಗಿರುವುದರೊಂದಿಗೆ ಇತರ ಸಾಹಿತ್ಯ ಪ್ರಕಾರಗಳಿಗಿಂತ ವಿಶಿಷ್ಟವಾಗಿರುವುದಕ್ಕೆ ಕಾರಣವೂ ಆಗಿದೆ. ಹೀಗಾಗಿ ಕನ್ನಡದ ಸಂದರ್ಭದಲ್ಲಿ ಆಧುನಿಕ ರಂಗಭೂಮಿಯು ರೂಪುಗೊಳ್ಳುತ್ತಿದ್ದ ಕಾಲ ಹಾಗೂ ಆಧುನಿಕ ನಾಟಕಗಳ ಪ್ರಭಾವದಿಂದ ಇಲ್ಲಿನ ಪಾರಂಪರಿಕ ಕಸುವನ್ನು ಮೇಳೈಸಿಕೊಂಡು ಆಧುನಿಕ ಕನ್ನಡ ನಾಟಕ ಪ್ರಕಾರ ರೂಪುಗೊಂಡ ಕಾಲವು ಒಂದೇ ಆಗಿದೆ. ಇದರಿಂದ ಕನ್ನಡದ ನಾಟಕಕಾರರು ಭಾಷಾಂತರ ನಾಟಕಗಳನ್ನು ರಂಗಭೂಮಿಗಾಗಿ ಸಿದ್ಧಗೊಳಿಸುವ ಪ್ರಯತ್ನದತ್ತ ಆಧುನಿಕ ರಂಗಭೂಮಿಯನ್ನು ಅಭಿವೃದ್ಧಿಪಡಿಸಿದರು. ಈ ಪ್ರಯತ್ನ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ತರುವ ಪ್ರಯತ್ನದಲ್ಲಿಯೂ ನಡೆದಿದೆ. ಭಾಷಾಂತರಗೊಂಡ ಸಂಸ್ಕೃತನಾಟಕಗಳ ಪಟ್ಟಿಯನ್ನು ಅನುಬಂಧ ೬ ರಲ್ಲಿ ಕೊಡಲಾಗಿದೆ.

ಹೀಗೆ ರಂಗಭೂಮಿಯ ಅವಶ್ಯಕತೆಗಾಗಿ ಪಶ್ಚಿಮದ ನಾಟಕಗಳು ಹೆಚ್ಚೆಚ್ಚು 'ಕನ್ನಡೀಕರಣ' ಗೊಳ್ಳುವಾಗ 'ಸ್ಥಳೀಕರಣ' ಅಥವಾ 'ರೂಪಾಂತರ'ದ ಮಾದರಿಯನ್ನು ಆಯ್ದುಕೊಂಡಿರುವುದನ್ನು ಗಮನಿಸಬೇಕು. ಪರಕೀಯ ಸಾಂಸ್ಕೃತಿಕ ಜಗತ್ತಿನ ಕೃತಿಯೊಂದನ್ನು ಕನ್ನಡದ ನೆಲದ ಸಂಸ್ಕೃತಿಗೆ ಪರಿವರ್ತಿಸಿಕೊಳ್ಳುವ ಮೂಲಕ ಅದು ಕನ್ನಡದ್ದೇ

ಕೃತಿ ಎಂಬ ರೀತಿಯಲ್ಲಿ ಭಾಷಾಂತರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇದರಲ್ಲಿ ಎಷ್ಟು ಯಶಸ್ವಿಯಾಗಿದ್ದಾರೆ ಎಂಬುದು ಅಷ್ಟು ಮುಖ್ಯವಲ್ಲ. ಆದರೂ ಈ ಬಗೆಯ ಪರಿಣಾಮಕಾರಿ ಪ್ರಯತ್ನವನ್ನು ಬಹು ಆಯಾಮಗಳಿಂದ ಗುರುತಿಸುವ ಕೆಲಸ ಆಗಬೇಕು. ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಗೊಂಡ ನಾಟಕಗಳ ಕುರಿತು ಮುಂದೆ ಪ್ರತ್ಯೇಕ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗುವುದು.

**೫.೧.೨.ಕಾದಂಬರಿ: ಪ್ರಕಾರ ಮತ್ತು ಪಠ್ಯ ಭಾಷಾಂತರ**

"ಇಂಗ್ಲಿಷಿನಲ್ಲಿರುವ ಯಾವುದಾದರೂ ಒಂದು "ನಾವೆಲ್" ಅನ್ನು ಕನ್ನಡದಲ್ಲಿ ಭಾಷಾಂತರ ಮಾಡಿ ಬರೆಯಬೇಕೆಂಬ ಅಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಆದರೆ, ಅಂತಹ ಒಂದೆರಡು ಇಂಗ್ಲಿಷ್ ಕಾವ್ಯಗಳನ್ನು ಚೆನ್ನಾಗಿ ವಿಚಾರ ಮಾಡುತ್ತ ನೋಡುವಲ್ಲಿ ಕೆಲವು ವಿಷಯಗಳನ್ನು ನಮ್ಮ ಹಿಂದೂ ಮರ್ಯಾದೆಗಳಿಗನುಸಾರವಾಗಿ ಕಂಡು ಬರಲಿಲ್ಲವಾದ್ದರಿಂದ ಆ ಮಾರ್ಗವನ್ನು ಬಿಡಲೇ ಬೇಕಾಯಿತು. ನಂತರ ನಮ್ಮಲ್ಲಿಯೇ ಪುರಾಣ ಪ್ರಸಿದ್ಧವಾಗಿ ಪದ್ಯರೂಪವಾಗಿರುವ ಯಾವುದಾದರೊಂದು ಇತಿಹಾಸವನ್ನು ಗದ್ಯರೂಪವಾಗಿ ಮಾಡಬೇಕೆಂದು ಅಲೋಚಿಸುವಲ್ಲಿ ಇಂಗ್ಲೀಷ್ "ನಾವೆಲ್"ಗಳ ಮರ್ಯಾದೆಯನ್ನು ಬಿಡಬೇಕಾಗಿ ಬಂದುದರಿಂದ ಅದು ನನ್ನ ಮನಸ್ಸಿಗೆ ಅಭಿರುಚಿಸಲಿಲ್ಲ. ಆದಕಾರಣ, ವಿಷಯದಲ್ಲಿ ಹಿಂದೂ ಮರ್ಯಾದೆಯನ್ನೇ ಇಟ್ಟುಕೊಂಡು ಇಂಗ್ಲಿಷ್ ನಾವೆಲ್ ಪದ್ಧತಿಯನ್ನೆ ಅನುಸರಿಸಿ ಬರೆಯಲು ಅನುಕೂಲವಾಗುವಂತೆ, ಹೊಸದಾಗಿ ಒಂದು ಕಥೆಯನ್ನು ಕಲ್ಪನೆ ಮಾಡಿಕೊಂಡೆನು" (ಗುಬ್ಬಿ ಸೂ. ಮುರಿಗಾರಾಧ್ಯ, ೧೮೯೭, ಲೇಖಕರ ವಿಜ್ಞಾಪನೆ). ಎಂಬುದು ಕನ್ನಡದಲ್ಲಿ ಕಾದಂಬರಿ ಪ್ರಕಾರವೊಂದನ್ನು ರೂಪಿಸಿಕೊಳ್ಳಲು ಮೊದಲಬಾರಿಗೆ ಪ್ರಯತ್ನಿಸಿದ ಮುರಿಗಾರಾಧ್ಯರ ವಿಚಾರವಾಗಿದೆ.

ಕಾದಂಬರಿಯೊಂದನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಿಸಿಕೊಳ್ಳಬೇಕೆಂಬ ಮುರಿಗಾರಾಧ್ಯರಿಗೆ ಕಾದಂಬರಿಯ ವಿಷಯಗಳು ಹಿಂದೂ ಮರ್ಯಾದೆಗಳಿಗನುಸಾರವಾಗಿ ಇರಲಿಲ್ಲವಾದ್ದರಿಂದ ಭಾಷಾಂತರದ ಕೆಲಸವನ್ನು ಬಿಟ್ಟೆ ಎನ್ನುತ್ತಾರೆ. ಆದರೆ ಹತ್ತೊಂಬತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ನಾಟಕಗಳಲ್ಲಿ ಈ ಸಮಸ್ಯೆಯನ್ನು ನಾಟಕಗಳ 'ಸ್ಥಳೀಕರಣ'ದ ಮಾದರಿಯಿಂದ ಪರಿಹರಿಸಿಕೊಳ್ಳಲು ಪ್ರಯತ್ನ ನಡೆದವು. ಈ ಪ್ರಯತ್ನ ಕಾದಂಬರಿಗಳ ಸಂದರ್ಭದಲ್ಲಿ ಯಾಕೆ ನಡೆಯಲಿಲ್ಲ. ಅಥವಾ ಅನಿವಾರ್ಯ ಎನಿಸಿರಲಿಲ್ಲವೆ? ಕನ್ನಡದಲ್ಲಿ ಕಾದಂಬರಿಯನ್ನು ನೇರವಾಗಿ ಭಾಷಾಂತರಿಸಿಕೊಳ್ಳುವ ಜೊತೆಗೆ ಕಾದಂಬರಿ ಪ್ರಕಾರಗಳನ್ನು ಭಾಷಾಂತರಿಸುವ ಪ್ರಯತ್ನಗಳು ನಡೆದವು. ಇದರಲ್ಲಿ ಮುರಿಗಾರಾಧ್ಯರೆ ಪ್ರಥಮರು ಅಥವಾ ಮೊದಲಿಗರು ಎನ್ನಬಹುದು.

ಇಂಗ್ಲಿಷ್‌ನ ಕಾದಂಬರಿಯ ವಿಷಯವನ್ನು ಇಲ್ಲಿನ ಪಾರಂಪರಿಕ ಮನಸ್ಸು ಸ್ವೀಕರಿಸುವ ಸಿದ್ಧತೆಯಲ್ಲಿರದ ಕಾರಣ ವಿಷಯವನ್ನು ಕನ್ನಡದ್ದು ಅಥವಾ ಹಿಂದೂ ಮರ್ಯಾದೆಗನುಸಾರ ಆರಿಸಿಕೊಂಡು 'ನಾವೆಲ್'ನ ಮಾದರಿಯಲ್ಲಿ ಕಟ್ಟಿಕೊಳ್ಳಲು ಮುಂದಾದರು. ಇಲ್ಲಿ ಕಾದಂಬರಿ ಪ್ರಕಾರ ಬೇಕಾಗಿತ್ತು. ಆದರೆ ಅದು ಅಲ್ಲಿರುವಂತೆ ಯಥಾಸ್ಥಿತಿಯಲ್ಲಿ ಬೇಕಾಗಿರಲಿಲ್ಲ. ಬದಲಿಗೆ ಕಾದಂಬರಿಯ ಮಾದರಿ ಅಥವಾ ಪದ್ಧತಿ ಇಂಗ್ಲಿಷಿನದಾದರೆ ವಿಷಯವಸ್ತು ಕನ್ನಡದ ಸಂದರ್ಭದ್ದು. ಹೀಗಾಗಿ ಕನ್ನಡದ ಸಾಂಸ್ಕೃತಿಕ ಪರಂಪರೆಗೆ ಚ್ಯುತಿಯಾಗದ ರೀತಿಯಲ್ಲಿ ಕಾದಂಬರಿ ಪ್ರಕಾರವನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವ, ಭಾಷಾಂತರಿಸಿಕೊಳ್ಳುವ ಪ್ರಯತ್ನಗಳು ನಡೆದವು.

ಹಾಗೇ ನೋಡಿದರೆ ಲಾಗಾಯ್ತುನಿಂದಲೂ ಕನ್ನಡದ ಲೇಖಕರು ಹೊರಗಿನಿಂದ ಏನನ್ನಾದರೂ ಯಾವುದನ್ನಾದರೂ ಪಡೆದುಕೊಳ್ಳುವಾಗ ಅಥವಾ ಅದನ್ನು ಕನ್ನಡದ ಸಂದರ್ಭಕ್ಕೆ, ತಮ್ಮ ಸಂದರ್ಭಕ್ಕೆ ಹೊಂದಿಸಿಕೊಳ್ಳುವ, ಪುನರ್‌ರೂಪಿಸಿಕೊಳ್ಳುವ ಪ್ರಯತ್ನದಲ್ಲಿಯೇ ತೊಡಗಿದ್ದರು. ಇದು ಪಂಪನಿಂದಲೇ ಆರಂಭಗೊಂಡಿದೆ ಎನ್ನಬಹುದು. ಹೀಗಾಗಿ ಮುರಿಗಾರಾಧ್ಯರಂಥವರು ಕಾದಂಬರಿ ಪ್ರಕಾರವನ್ನು ಕನ್ನಡಕ್ಕೆ ತಂದುಕೊಳ್ಳುವಲ್ಲಿ ಕೆಲವು ಪ್ರಶ್ನೆಗಳನ್ನು ಹಾಕಿಕೊಂಡು ಅದಕ್ಕೆ ಉತ್ತರವನ್ನು ಕಂಡುಕೊಂಡಿದ್ದಾರೆ.

ಕಾದಂಬರಿ ಸಾಹಿತ್ಯದ ಭಾಷಾಂತರ ಮತ್ತು ಕಾದಂಬರಿ ಪ್ರಕಾರದ ಭಾಷಾಂತರದಲ್ಲಿ ಕನ್ನಡಗರಿಗೆ ಕಾದಂಬರಿ ಅಥವಾ 'ನಾವೆಲ್' ಪ್ರಕಾರದ ಭಾಷಾಂತರವೇ ಪ್ರಾಥಮಿಕವಾದದ್ದಾಗಿತ್ತು. ಇದರೊಂದಿಗೆ ಕಾದಂಬರಿಗಳ ಭಾಷಾಂತರದೊಂದಿಗೆ ಆ ಪ್ರಕಾರವನ್ನು ಕನ್ನಡದಲ್ಲಿ ಕಟ್ಟಿಕೊಳ್ಳುವ ಪ್ರಯತ್ನವು ನಡೆದಿತ್ತು. ಈ ಕ್ರಮವನ್ನು ಹೀಗೂ ಹೇಳಬಹುದು. ಕನ್ನಡದ ಸಂದರ್ಭದಲ್ಲಿ ನಾವೆಲ್ (ಕಾದಂಬರಿ)ನ ಭಾಷಾಂತರ ಪ್ರಮುಖವಾಗಿ ಎರಡು ಧಾರೆಗಳನ್ನು ಹೊಂದಿದೆ. ಮೊದಲನೆಯದು, ಇಂಗ್ಲಿಷಿನ ನಾವೆಲ್‌ನ್ನು ಕನ್ನಡದ ಕಾದಂಬರಿಯಾಗಿ ಕಟ್ಟಿಕೊಳ್ಳುವುದಾದರೆ, ಎರಡನೆಯದು ಈ ರೀತಿ ನಾವೆಲ್‌ನ್ನು ಕಾದಂಬರಿಯಾಗಿಸಿಕೊಳ್ಳುವಾಗ ಕನ್ನಡದ ಪಾರಂಪರಿಕ ಕಥೆ, ವಸ್ತುಗಳನ್ನು ಬಳಸಿಕೊಳ್ಳುವುದು. ಹೀಗೆ ಈ ಎರಡೂ ಒಂದನ್ನೊಂದು ಸಂಯೋಜನೆಗೊಂಡು ಕನ್ನಡದಲ್ಲಿ ಕಾದಂಬರಿ ಪ್ರಕಾರವು ರೂಪುಗೊಂಡಿದೆ.

ಕಾದಂಬರಿಯು ಆಧುನಿಕ ಸಾಹಿತ್ಯದ ಪ್ರಮುಖ ಪ್ರಕಾರ ಎನಿಸಿಕೊಂಡಿದ್ದು "ಕನ್ನಡ ಕಾದಂಬರಿಯ ಉದಯಕಾಲವನ್ನು ೧೮೭೫ರಿಂದ ೧೯೩೦ರ ವರೆಗಿನ ಅವಧಿಯೆಂದು ಗುರುತಿಸಲಾಗಿದೆ" (ಆಮೂರ ಜಿ.ಎಸ್. ೨೦೦೬, ಪು.೧೯). ಆಮೂರರ ಈ ವಿಚಾರ ಕನ್ನಡದ ಸಂದರ್ಭದಲ್ಲಿ 'ಕಾದಂಬರಿ' ಹೇಗೆ ಕನ್ನಡದ್ದೇ ಪ್ರಕಾರವಾಗಿ ರೂಪುಗೊಂಡಿತು ಮತ್ತು ಈ ರೂಪುಗೊಳ್ಳುವಿಕೆಗೆ ಸಾಮಾನ್ಯವಾಗಿ ಎಷ್ಟು ಕಾಲಾವಧಿ ಹಿಡಿಯಿತು ಎಂಬುದನ್ನು ಗುರುತಿಸುವತ್ತ ಗಮನಹರಿಸಿದೆ. ಆದರೆ ಈವರೆಗಿನ ಅಧ್ಯಯನಗಳು ಕಾದಂಬರಿ ಪ್ರಕಾರದ ಉಗಮದ ಕುರಿತು ಕೆಲವೊಂದು ನಿಲುವುಗಳನ್ನು ವ್ಯಕ್ತಪಡಿಸಿವೆ. ಅವುಗಳೆಂದರೆ, ಭಾರತೀಯ ಸಾಹಿತ್ಯ ಪರಂಪರೆಯ ಮೂಲಕ ಕನ್ನಡ ಕಾದಂಬರಿ ಪ್ರಕಾರದ ಉಗಮವನ್ನು ಗುರುತಿಸುವ ಕೆಲವು ವಿದ್ವಾಂಸರು, ಆಧುನಿಕ ಕನ್ನಡದಲ್ಲಿ ಕಥನ ಪರಂಪರೆ ಈ ಮೊದಲೇ ಚಾಲ್ತಿಯಲ್ಲಿತ್ತು, ಈ ಕಥನ ಪರಂಪರೆ ಪಂಪನಿಂದ ಮೊದಲ್ಗೊಂಡು ಕುಮಾರವ್ಯಾಸ, ದಾಸರವರೆಗೂ ಮುಂದುವರಿದಿದೆ, ಕಾವ್ಯ, ಕಥೆ ಮತ್ತು ಕವನಗಳಿಗೂ 'ಕಥನ'ದ ಸ್ವರೂಪವಿರುತ್ತದೆ, ಈಗಲೂ ಇದೆ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಇನ್ನೂ ಕೆಲವರು ಈ 'ಕಥನ'ವೆಂಬುದು ಇತರ ಪ್ರಕಾರಗಳಲ್ಲಿರಬಹುದಾದರೂ ಅದು ಪ್ರತ್ಯೇಕ ಪ್ರಕಾರವಾಗಿ ರೂಪತಾಳಲಿಲ್ಲ ಬದಲಿಗೆ ಇತರ ಪ್ರಕಾರಗಳೊಳಗೆ ಸೇರಿಕೊಂಡಿದೆ. ಇದರಿಂದಾಗಿ ಈ ಪರಂಪರೆಯ ವಸ್ತು, ವಿಷಯಗಳನ್ನು ಬಳಸಿಕೊಂಡು ಇಂಗ್ಲಿಷಿನ 'ನಾವೆಲ್'ನ ಮಾದರಿಯನ್ನು ಅನುಸರಿಸಿ ಕನ್ನಡದಲ್ಲಿ ಕಾದಂಬರಿ ಪ್ರಕಾರ ರೂಪುಗೊಂಡಿತು ಎನ್ನುತ್ತಾರೆ. ಹೀಗೆ ಕನ್ನಡ ಕಾದಂಬರಿ ಪ್ರಕಾರದ ಕುರಿತು ಬೇರೆ ಬೇರೆ ನಿಲುವುಗಳಿವೆ. ಈ ನಿಲುವುಗಳು ಕನ್ನಡದ ಸಂದರ್ಭದಲ್ಲಿ ಕಾದಂಬರಿಯನ್ನು ಕಂಡುಕೊಳ್ಳುವಾಗ ದೇಶಿಯ ಹಾಗೂ ಪಶ್ಚಿಮದ 'ಮೂಲ'ದ ಕುರಿತು ಪ್ರಸ್ತಾಪಿಸಿರುವುದು ಗಮನಾರ್ಹವಾಗಿದೆ.

ಜಿ.ಎಸ್. ಆಮೂರ ಹಾಗೂ ಗಿರಡ್ಡಿ ಗೋವಿಂದರಾಜರಂಥ ಅಧ್ಯಯನಕಾರರು ಈ ಎರಡು ಒಂದನ್ನೊಂದು ಸಂಯೋಜನೆಗೊಂಡು ಕಾದಂಬರಿ ರೂಪುಗೊಂಡಿರುವುದನ್ನು ಗುರುತಿಸಿದ್ದಾರೆ. ಕನ್ನಡದಲ್ಲಿ ಕಥನ ಪರಂಪರೆ ಇದ್ದಾಗಲೂ ೧೯ನೇ ಶತಮಾನದ ಕೊನೆಯ ದಶಕಗಳಲ್ಲಿ ಇಂಗ್ಲಿಷಿನ ಅನೇಕ ಕಾದಂಬರಿಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಂಡ ನಂತರದಲ್ಲಿ ಕನ್ನಡದ ಕಾದಂಬರಿಗಳು ರೂಪುಗೊಂಡವು.

ಇಂಗ್ಲಿಷಿನಿಂದ ಕಾದಂಬರಿಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ ಸಾಹಿತ್ಯ ಪಠ್ಯದ ಭಾಷಾಂತರದೊಂದಿಗೆ ಸಾಹಿತ್ಯ ಪ್ರಕಾರವನ್ನೂ ಕನ್ನಡದಲ್ಲಿ ಕಟ್ಟಿಕೊಳ್ಳುವುದು ಅಗತ್ಯವಾಗಿತ್ತು. ಹೀಗಾಗಿ ಸಾಹಿತ್ಯ ಕೃತಿಗಳ ಭಾಷಾಂತರದೊಂದಿಗೆ ಸಾಹಿತ್ಯ ಪ್ರಕಾರದ ಭಾಷಾಂತರವನ್ನೂ ಕೈಗೊಂಡರು. ಈ ಚಟುವಟಿಕೆ ನೇರವಾಗಿ ನಡೆಯದೆ ಇಂಗ್ಲಿಷಿನ ಕಾದಂಬರಿಯ ಮಾದರಿಗೆ ಕನ್ನಡದ ಪರಂಪರೆ ವಸ್ತು ಹಾಗೂ ವಿಷಯಗಳನ್ನು ಸಂಯೋಜಿಸಿಕೊಳ್ಳುವ ಮೂಲಕ ಕನ್ನಡದಲ್ಲಿ ಕಾದಂಬರಿ ಪ್ರಕಾರವೊಂದನ್ನು ರೂಪಿಸಿಕೊಂಡರು. ಇಂತಹ ಪ್ರಯತ್ನದಲ್ಲಿ ಮುರಿಗರಾಧ್ಯರಂಥವರು ಮೊದಲಿಗರಾದರೆ ತದನಂತರದವರು ಅವರ ಪ್ರಯೋಗವನ್ನು ಪುನರ್‌ರೂಪಿಸಿಕೊಳ್ಳುವುದರೊಂದಿಗೆ ಕನ್ನಡದಲ್ಲಿ ಕಾದಂಬರಿ ಪ್ರಕಾರವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದರು.

**ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಗೊಂಡ ಕಾದಂಬರಿಗಳು**

೧. ಎಡ್ಜ್‌ವರ್ತ್ ಮೇರಿಯಾ (೧೭೬೭ - ೧೮೪೯)ರ 'Morad The Unlucky' 'ನಿರ್ಭಾಗ್ಯ ಮುರಾದ್', (೧೮೯೯) ? ಜಿ.ಟಿ.ಎ ಪ್ರೆಸ್, ಮೈಸೂರು

೨. An adaptation the Adventares of Ulysses on his retern from troy of his native land. 'ಚರಿತ್ರಾಮೃತ' (೧೮೯೭) ಎಂ.ಆರ್. ಅಣ್ಣಾಜಿರಾವ್, ಜಿ.ಟಿ.ಎ. ಪ್ರೆಸ್, ಮೈಸೂರು

೩. ಟೇಲರ್ ಸರ್ ಹೆನ್ರಿ (೧೮೦೦ - ೧೮೮೬) 'A Sicilian Summer', 'ಕನ್ಯಾವಿತಂತು' (೧೮೯೫) ಎಂ.ಎಲ್. ಶ್ರೀಕಂಠೇಶಗೌಡ, ಜಿ.ಟಿ.ಎ. ಪ್ರೆಸ್, ಮೈಸೂರು.

೪. ಫೀಲ್ಡಿಂಗ್ ಹೆನ್ರಿ (೧೭೦೭ - ೧೭೫೪) 'Tom Jones', 'ಶರಣಾಗತ' (ಭಾಷಾಂತರ), ಎಂ.ಆರ್ ಅಣ್ಣಾಜಿರಾವ್ (೧೯೦೫), ಜಿ.ಟಿ.ಎ. ಪ್ರೆಸ್, ಮೈಸೂರು

೫. ಸ್ಯಾಮ್ಯುಯೆಲ್ ಜಾನ್‌ಸನ್ (೧೭೦೯ - ೧೭೮೪) 'Rasselas Prince of Abyssinia', 'ರಾಸೆಲಾಸ್' (೧೯೦೫), (ಭಾಷಾಂತರ) ಜೀವಾಜಿ ವಿಷ್ಣುಗೋರೆ, ಧಾರವಾಡ

೬. ? 'The Vicor of wakefield' 'ಫ್ರಿರೋಜ ವಿಜಯಂ' (೧೯೧೭), (ಭಾಷಾಂತರ) ಎಸ್.ಜಿ. ಗೋವಿಂದರಾಜ ಅಯ್ಯಂಗಾರ್, ಜಿ.ಟಿ.ಎ ಪ್ರೆಸ್, ಮೈಸೂರು

ಸಾಹಿತ್ಯ ಕೃತಿಗಳ ಭಾಷಾಂತರ ಸುಮಾರು ೧೮೭೦ ರಿಂದ ಆರಂಭಗೊಂಡಿದ್ದು 'ಇಂಗ್ಲಿಷ್ ಗೀತಗಳು'ವರೆಗೆ ಸುಮಾರು ೧೦೦ಕ್ಕಿಂತ ಹೆಚ್ಚು ಕೃತಿಗಳು ಕನ್ನಡಕ್ಕೆ ಬಂದಿವೆ. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಪಾಶ್ಚಿಮಾತ್ಯ ಭಾಷೆ (ಇಂಗ್ಲಿಷ್) ಯಿಂದ ಸುಮಾರು ೫೦ ಕೃತಿಗಳು ಕನ್ನಡಕ್ಕೆ ಬಂದಿವೆ. ಇವುಗಳನ್ನು ಪ್ರಕಾರಗಳ ಹಿನ್ನಲೆಯಲ್ಲಿ

ಗಮನಿಸಿದರೆ, ನಾಟಕಗಳು ಮೊದಲ ಸ್ಥಾನದಲ್ಲಿದ್ದರೆ, ಎರಡನೇ ಸ್ಥಾನದಲ್ಲಿ ಕಾದಂಬರಿಗಳಿವೆ. ಭಾಷಾಂತರ ನಾಟಕಗಳ ಪಟ್ಟಿಯನ್ನು ಅನುಬಂಧ ೭ರಲ್ಲಿ ನೋಡಬಹುದು.

'ರಾಬಿನ್ ಕ್ರೂಸೊ' ಕಾದಂಬರಿಯು ಸಮಾಜದ ನಿಯಮಗಳ ಮತ್ತು ಮನುಷ್ಯನ ವೈಯಕ್ತಿಕ ಅವಶ್ಯಕತೆಗಳ ನಡುವಿನ ಸಮಾನತೆಯನ್ನು ಬಿಂಬಿಸುವ ಕೃತಿಯಾಗಿ ಕನ್ನಡಕ್ಕೆ ಭಾಷಾಂತರಗೊಂಡಿದೆ. 'ರಾಸೆಲಾಸ್'ನಲ್ಲಿ ರಾಜಕುಮಾರನೊಬ್ಬ ತನಗಿರುವ ಪ್ರಸ್ತುತ ಸುಖದ ಏಕಾಂತದ ಭೂಮಿಯಿಂದ ಬೇರಾಗಿ ಶ್ರಮದ, ಆನಂದದ ಭೂಮಿಯ ಹುಡುಕಾಟಕ್ಕೆ ಹೊರಡುವ ಪ್ರಯತ್ನ ಹಾಗೂ ಆನಂತರದಲ್ಲಾಗುವ ಪರಿಣಾಮಗಳ ಕುರಿತಿರುವ ಕಾದಂಬರಿ ಯಥಾಸ್ಥಿತಿಯಲ್ಲಿ ಕನ್ನಡಕ್ಕೆ ಬಂದಿದೆ. ಮೂಲಕೃತಿಯಲ್ಲಿ 'ಶರಣಾಗತ' ಜಾತಿವ್ಯವಸ್ಥೆಯ ಸಮಸ್ಯೆಯನ್ನು ಎದುರಿಸುವ ಕಾದಂಬರಿ. ಆದರೆ ಕನ್ನಡಕ್ಕೆ ಬರುವಾಗ ನೀತಿ ಪ್ರಚೋದನೆಯ ಕಾದಂಬರಿಯಾಗಿದೆ. ಇದನ್ನು ಎಂ.ಜಿ. ಅಣ್ಣಾಜಿರಾವ್ ಅವರು ಕನ್ನಡಕ್ಕೆ ತಂದಿದ್ದಾರೆ. ಹೀಗೆ ಪಾಶ್ಚಿಮಾತ್ಯ ಕಾದಂಬರಿ ಸಾಹಿತ್ಯದಲ್ಲಿ ಕೆಲವೊಂದು ಮೂಲಕ್ಕೆ ನಿಷ್ಠವಾಗಿ ಕನ್ನಡಕ್ಕೆ ಬಂದರೆ, ಇನ್ನೂ ಕೆಲವನ್ನು ಇಲ್ಲಿನ ಅಗತ್ಯತೆಗೆ ಅನುಗುಣವಾಗಿ ಹೊಂದಿಸಿಕೊಳ್ಳಲು ಪ್ರಯತ್ನಿಸಿರುವುದುಂಟು.

ಕನ್ನಡಕ್ಕೆ ಬಂದಿರುವ ಪಶ್ಚಿಮದ ಕಾದಂಬರಿಗಳನ್ನು ಗಮನಿಸಿದಾಗ, ಹೊರಗಿನ ಅಪರಿಚಿತ ಜ್ಞಾನವನ್ನು ಸಾಹಿತ್ಯ ಕೃತಿಗಳ ಮೂಲಕ ತಮ್ಮದಾಗಿಸಿಕೊಳ್ಳುವ ಸಲುವಾಗಿ ಭಾಷಾಂತರವನ್ನು ಮಾಡಿಕೊಂಡಿರುವುದೇ ಹೆಚ್ಚು, ಅಲ್ಲದೆ ಕನ್ನಡದ ಸಂದರ್ಭಕ್ಕೆ ಅಗತ್ಯವಾದ ಆಧುನಿಕತೆಯ ವಿವಿಧ ಮುಖಗಳನ್ನು ಪರಿಚಯ ಮಾಡಿಕೊಳ್ಳುವ ಕುರಿತಿರುವ ಕುತೂಹಲವನ್ನು ಕಾದಂಬರಿ ಹಾಗೂ ಇತರ ಕೃತಿಗಳ ಭಾಷಾಂತರದ ಮೂಲಕ ಪೂರೈಸಿಕೊಳ್ಳಲು ಮುಂದಾದರು. ಈ ಪ್ರಕ್ರಿಯೆ ಕೇವಲ ಭಾಷೆಯಿಂದ ಭಾಷೆಗೆ ಮಾತ್ರ ನಡೆಯದೆ, ಈ ನೆಲದ ಸಂಸ್ಕೃತಿಗೆ, ಸಂದರ್ಭಕ್ಕೆ ಅನುಗುಣವಾಗಿ ಪಶ್ಚಿಮದ ಕೃತಿಗಳನ್ನು ಕನ್ನಡದಾಗಿಸಿಕೊಳ್ಳುವ ಪ್ರಕ್ರಿಯೆಯಾಗಿ ರೂಪುಗೊಂಡಿತು. ಇದನ್ನು ಗಮನಿಸಿದಾಗ, ''ಈ ಕೃತಿಗಳು ನಮ್ಮ ಆಧುನಿಕತೆಯನ್ನು ಕಟ್ಟುತ್ತವೆ. ಅವು ಅನುವಾದಿಸುವುದು ಕೇವಲ ಶಬ್ದ, ಭಾಷೆ ಮತ್ತು ವಾಕ್ಯಗಳಲ್ಲ ತಿಳುವಳಿಕೆ, ಆಲೋಚನೆ, ಆಧುನಿಕತೆಯನ್ನು'' (ಪಡಿಕ್ಕಲ್, ೨೦೦೧, ಪು. ೧೭೦). ಎಂಬುದು ತಿಳಿದುಬರುತ್ತದೆ.

ಅಂದರೆ ಆಧುನಿಕತೆಗೆ ಮುಖಾಮುಖಿಯಾಗುವುದಕ್ಕೆ ಬದಲಾಗಿ ಸಾಮರಸ್ಯ, ಹೊಂದಾಣಿಕೆಯನ್ನು ಭಾಷಾಂತರದ ಮೂಲಕ ಸ್ಥಾಪಿಸಿಕೊಳ್ಳಲು ಮುಂದಾದರು. ಇದರಿಂದಾಗಿ ಕಾದಂಬರಿಗಳು ಕನ್ನಡದ ಸಂದರ್ಭಕ್ಕೆ ಪೂರಕವಾಗಿ ಭಾಷಾಂತರಗೊಂಡವು.

ಇವುಗಳೊಂದಿಗೆ ದೇಶೀಯ ಭಾಷೆಗಳಾದ ಬಂಗಾಳಿ, ಮರಾಠಿ ಮತ್ತು ತೆಲುಗು ಇತ್ಯಾದಿ ಭಾಷೆಗಳಿಂದಲೂ ಕಾದಂಬರಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಬಿ. ವೆಂಕಟಾಚಾರ್ಯ, ಗಳಗನಾಥ ಹಾಗೂ ನಂಜನಗೂಡು ಶ್ರೀಕಂಠಶಾಸ್ತ್ರಿಯಂಥಹ ಭಾಷಾಂತರಕಾರರು ಈ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರು. ಕಾದಂಬರಿ ಪ್ರಕಾರದ ಭಾಷಾಂತರಕ್ಕೆ ಭಾರತೀಯ ಭಾಷೆಗಳಲ್ಲಿ ಕಾದಂಬರಿಗಳ ಭಾಷಾಂತರ ಸಹ ಪೂರಕ ಅಂಶಗಳನ್ನು ಒದಗಿಸಿದ್ದವು.

ಈ ಮೊದಲು ಹೇಳಿರುವಂತೆ ಕನ್ನಡದ ಸಂದರ್ಭದಲ್ಲಿ ಕಾದಂಬರಿ ಪ್ರಕಾರವು ಸಂಯೋಜನೆಯ ಕ್ರಮದಿಂದ ರೂಪುಗೊಂಡಿರುವ ಕುರಿತು ಶಿವರಾಮ ಪಡಿಕ್ಕಲ್ ಅವರು ಗಮನಾರ್ಹ ಚರ್ಚೆ ನಡೆಸಿದ್ದಾರೆ. ಅದನ್ನು ಒಂದೆಡೆಗೆ

ತರುವುದಾದರೆ, ಪಡಿಕ್ಕಲ್ ಅವರು ಕನ್ನಡದ ಕಾದಂಬರಿ ಮತ್ತು ಪಶ್ಚಿಮದ 'ನಾವೆಲ್' ಕುರಿತು ಪ್ರಸ್ತಾಪಿಸುತ್ತ, "ಕನ್ನಡ ಕಾದಂಬರಿಗೆ ಪಾಶ್ಚಾತ್ಯ 'ನಾವೆಲ್' ಪ್ರೇರಣೆ ಮತ್ತು ಅದರೊಂದಿಗೆ ಸಾದೃಶ್ಯಗಳಿರುವುದು ನಿಜವಾದರೂ ನಾವೆಲ್ ಲಕ್ಷಣಗಳೆಲ್ಲವೂ ಕಾದಂಬರಿಯಲ್ಲಿ ಕಾಣಿಸುವುದಿಲ್ಲ............... ಕನ್ನಡದ ಲೇಖಕರು ಪಾಶ್ಚಿಮಾತ್ಯ ನಾವೆಲ್ ಪ್ರಕಾರದ ಪರಿಚಯ ಪಡೆದಾಗಲೂ, ಅದರಿಂದ ಪ್ರಭಾವಿತರಾಗಿ ಬರೆದಾಗಲೂ ಕನ್ನಡ ಭಾಷೆಯ ಆ ತನಕದ ಬರಹದ ಸಂಪ್ರದಾಯದಿಂದ ಸಂಪೂರ್ಣವಾಗಿ ಬಿಡಿಸಿಕೊಳ್ಳುವುದು ಕಷ್ಟಸಾಧ್ಯವಾಗಿತ್ತು. ಈ ಕಾರಣದಿಂದ ಇತರ ರಂಗಗಳಂತೆಯೇ ಬರಹದ ಹಂತದಲ್ಲಿಯೂ ಸಾಂಪ್ರದಾಯಿಕ ಕಥನ ಮತ್ತು ಪಾಶ್ಚಿಮಾತ್ಯ ನಾವೆಲ್‌ನ ಒಂದು ಸಮನ್ವಯ ರೂಪವನ್ನು ನಾವು ಕಾಣುತ್ತೇವೆ" (ಪಡಿಕ್ಕಲ್, ೨೦೦೧, ಪು ೧೮, ೫೬).

ಪಡಿಕ್ಕಲ್‌ರ ಈ ಮಾತು ಕನ್ನಡ ಕಾದಂಬರಿಯ ರೂಪುಕೊಳ್ಳುವಿಕೆಯನ್ನು ಎರಡು ಮೂಲಗಳಿಂದಲೂ ಕಂಡುಕೊಂಡಿದ್ದನ್ನು ಪ್ರಸ್ತುತ ಪಡಿಸುತ್ತದೆ. ಪಶ್ಚಿಮದ ನಾವೆಲ್‌ನ ಪರಿಚಯ, ಅವುಗಳ ಕನ್ನಡ ಭಾಷಾಂತರದೊದಿಗೆ ಕನ್ನಡದ ಕಥನ ಪರಂಪರೆಯನ್ನು ಕಾದಂಬರಿಯ ಮಾದರಿಗೆ ಸಂಯೋಜಿಸಿಕೊಂಳ್ಳುವ ಹಾಗೂ ಇಲ್ಲಿನ ಕಥಾವಸ್ತುವನ್ನು ಎತ್ತಿಕೊಂಡು ಕಥನ ರೂಪಿಸುವ ಮೂಲಕ ಕಾದಂಬರಿ ಪ್ರಕಾರವನ್ನು  ಕಟ್ಟಿಕೊಳ್ಳಲಾಯಿತು. ಅಂದರೆ ಇಂಗ್ಲಿಷಿನ 'ನಾವೆಲ್' ಕನ್ನಡದ ಕಾದಂಬರಿಯಾಗಿ ರೂಪಿಸುವ ಪ್ರಯತ್ನಗಳು ನಡೆದವು.

ಕನ್ನಡದ ಕಾದಂಬರಿ ಪ್ರಕಾರದ ರೂಪುಗೊಳ್ಳುವಿಕೆ ತಾತ್ವಿಕವಾಗಿ ಭಾಷಾಂತರವಾಗಿರುವ ಸಾಧ್ಯತೆಯಿದೆ. ಇಂಗ್ಲಿಷ್ ಶಿಕ್ಷಣದಿಂದ ಪರಿಚಯಗೊಂಡ 'ನಾವೆಲ್'ನ್ನು ಕನ್ನಡಕ್ಕೆ ಸಾಹಿತ್ಯ ಕೃತಿಯಾಗಿ ಭಾಷಾಂತರಿಸಿಕೊಂಡಂತೆ ಈ ಒಂದು ಪ್ರಕಾರವನ್ನು ಕನ್ನಡಕ್ಕೆ ತಂದುಕೊಳ್ಳುವುದು ಕನ್ನಡಿಗರಿಗೆ ಅಗತ್ಯ ಎನಿಸಿತ್ತು. ಅದರಿಂದಾಗಿ ನಾವೆಲ್‌ನ್ನು ಯಥಾ ರೀತಿಯಲ್ಲಿ ಕನ್ನಡದಲ್ಲಿ ರೂಪಿಸಿಕೊಳ್ಳುವ ಬದಲು, ಕನ್ನಡದ ಕಥನ ಪರಂಪರೆಯೊಂದಿಗೆ ಹೊಂದಿಸಿಕೊಂಡು, ಇಲ್ಲಿನ ವಸ್ತುಗಳನ್ನು ಆಯ್ದುಕೊಳ್ಳುವ ಮೂಲಕ ನಾವೆಲ್‌ನ್ನು ಕಾದಂಬರಿಯಾಗಿ ರೂಪಿಸಿಕೊಂಡರು. ಇದರಿಂದಾಗಿ ಕಾದಂಬರಿಯ ರೂಪುಕೊಳ್ಳುವಿಕೆ ಭಾಷಾಂತರದ ಹಿನ್ನೆಲೆಯಲ್ಲಿ ನಡೆದಿದೆ ಎನ್ನಬಹುದು. ಈ ರೀತಿ ಪಠ್ಯಗಳನ್ನು ಕನ್ನಡದ ಜಗತ್ತಿಗೆ ತಂದುಕೊಳ್ಳುವುದರೊಂದಿಗೆ ಸಾಹಿತ್ಯ ಪ್ರಕಾರಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವ ಪ್ರಯತ್ನಗಳು ನಡೆದವು.

ಹೀಗೆ ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಸಾಹಿತ್ಯ ಪ್ರಕಾರಗಳಾದ ನಾಟಕ, ಕಾದಂಬರಿಗಳು ಭಾಷಾಂತರದ ಹಿನ್ನೆಲೆಯಲ್ಲಿ ರೂಪುಗೊಂಡಿರುವುದು ಅಥವಾ ಇವುಗಳ ರೂಪುಕೊಳ್ಳುವಿಕೆ ತಾತ್ವಿಕವಾಗಿ ಭಾಷಾಂತರವೇ ಆಗಿರುವುದು. ಜೊತೆಗೆ ಇನ್ನಿತರ ಸಾಹಿತ್ಯ ಪ್ರಕಾರಗಳಾದ ಸಣ್ಣಕತೆ, ಪ್ರಬಂಧ, ಪ್ರವಾಸ ಕಥನ, ಹರಟೆ ಇತ್ಯಾದಿಗಳು ಸಹ ಈ ಮಾದರಿಯಲ್ಲಿಯೇ ಕನ್ನಡದಲ್ಲಿ ರೂಪುಗೊಂಡಿರುವುದು ಭಾಷಾಂತರದ ವಿಸ್ತೃತ ಸ್ವರೂಪವನ್ನು ಸ್ಪಷ್ಟಪಡಿಸುವಂತಿದೆ. ಇವುಗಳ ಕುರಿತು ಪ್ರತ್ಯೇಕ ಅಧ್ಯಯನಗಳು ನಡೆಯಬೇಕಾಗಿದೆ.

**೫.೨.ಸಾಹಿತ್ಯ ಕೃತಿಗಳ ಭಾಷೆಗಳು ಮತ್ತು ಭಾಷಾಂತರ**

ಭಾಷಾಂತರದ ಸಂದರ್ಭದಲ್ಲಿ ಭಾಷೆಯನ್ನು ಬಿಟ್ಟು ಮಾತನಾಡುವಂತಿಲ್ಲ. ಆದರೆ ಭಾಷಾಂತರದ ವಿಸ್ತೃತ ವ್ಯಾಖ್ಯಾನಗಳು ಭಾಷೆಗಳಾಚೆಗಿನ ಭಾಷಾಂತರವನ್ನು ಗುರುತಿಸಿವೆ. ಆದರೂ ಪ್ರಕ್ರಿಯೆ ಕೇಂದ್ರಿತ ಅಧ್ಯಯನದ

ಸಂದರ್ಭದಲ್ಲಿ ಭಾಷೆ ಗಮನಾರ್ಹವಾದುದಾಗಿದೆ. ಕನ್ನಡ ಭಾಷೆ ಆರಂಭದಿಂದ ಈ ತನಕ ಹಲವು ಭಾಷೆಗಳೊಂದಿಗೆ ತನ್ನ ಒಡನಾಟವನ್ನು ಹೊಂದಿರುವುದು ತಿಳಿದ ಸಂಗತಿ. ಈ ಒಡನಾಟ ಕಾಲ-ಸ್ಥಳ ಮತ್ತು ಸಂದರ್ಭಗಳಲ್ಲಿ ಪುನರ್ ಪರಿಶೀಲನೆಗೆ ಒಳಪಟ್ಟಿರುವುದು ಗಮನಾರ್ಹ. ಹೀಗಾಗಿ ಭಾಷಾಂತರದ ಸ್ವರೂಪ ಬಹುತೇಕವಾಗಿ ನಿರ್ಧಾರಗೊಳ್ಳುವುದು ಭಾಷೆ-ಭಾಷೆಗಳ ನಡುವಿನ ಸಂಬಂಧಗಳ ಹಿನ್ನೆಲೆಯಲ್ಲಿ ಎನ್ನಬಹುದು. ಯಾವುದೇ ಒಂದು ಭಾಷೆ ತನ್ನ ನೆರೆಹೊರೆಯ ಭಾಷೆಗಳ ನಡುವೆ ಕಂಡುಕೊಂಡ ಭಾಷಾಂತರದ ಸಂಬಂಧಕ್ಕೂ ಹಾಗೂ ಹೊರಗಿನ ಭಾಷೆಗಳೊಂದಿಗೆ ಹೊಂದಿದ ಭಾಷಾಂತರದ ಸಂಬಂಧಕ್ಕೂ ವ್ಯತ್ಯಾಸಗಳಿರುತ್ತವೆ. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡ ಭಾಷೆ ಹಲವಾರು ಭಾಷೆಗಳೊಂದಿಗೆ ಭಾಷಾಂತರ ಸಂಬಂಧವನ್ನು ಹೊಂದಿತ್ತು. ಇದನ್ನು ಗಮನದಲ್ಲಿರಿಸಿಕೊಂಡು ಈ ಕಾಲಘಟ್ಟದ ಭಾಷಾಂತರವನ್ನು ಭಾಷೆ ಮತ್ತು ಭಾಷಾಂತರದ ಹಿನ್ನೆಲೆಯಲ್ಲಿ ವಿಶ್ಲೇಷಿಸಿಕೊಳ್ಳಬಹುದು.

ಕನ್ನಡ ಭಾಷೆ ೯-೧೦ನೇ ಶತಮಾನದಲ್ಲಿ ಸಂಸ್ಕೃತದೊಂದಿಗೆ ಹೊಂದಿದ್ದ ಸಂಬಂಧ ಭಾಷಾಂತರದ ಸಂಬಂಧವೇ ಆಗಿತ್ತು. ಆದರೆ ಕನ್ನಡದ ಕವಿಗಳು ಈ ಪ್ರಕ್ರಿಯೆಯಲ್ಲಿ ಅಪ್ರಜ್ಞಾಪೂರ್ವಕವಾಗಿ ತೊಡಗಿಕೊಂಡಿದ್ದರು. ಇಂತಹ ಸಂದರ್ಭದಲ್ಲಿ ಸಂಸ್ಕೃತದ ಪುರಾಣ, ಇತಿಹಾಸ ಮತ್ತು ಆಚಾರ-ವಿಚಾರಗಳೆಲ್ಲ ಕನ್ನಡದ್ದೂ ಆಗಿತ್ತು. ಅಲ್ಲದೆ ಸಂಸ್ಕೃತ ಸಾಹಿತ್ಯದ ಸ್ವರೂಪ ಸಾಮಾನ್ಯವಾಗಿ ಕನ್ನಡದ್ದೂ ಆಗಿರುವುದರಿಂದ ಇವೆರಡು ಭಿನ್ನವೆಂಬ ನಿಲುವುಗಳಿಗೆ ಅವಕಾಶವಿರಲಿಲ್ಲ. ಹೀಗಾಗಿ ಸಂಸ್ಕೃತ ಮತ್ತು ಕನ್ನಡ ಭಾಷೆಯ ಸಂಬಂಧ ಸಾಮರಸ್ಯದಿಂದ ಕೂಡಿತ್ತು.[೩] ಈ ರೀತಿ ಕನ್ನಡ ಭಾಷೆ ಸಂಸ್ಕೃತದಂತಹ ಅಭಿಜಾತ ಭಾಷೆಯೊಂದಿಗೆ ಸಂಬಂಧ ಹೊಂದಿರುವಂತೆ ಇತರ ದೇಶೀಯ ಭಾಷೆಗಳೊಂದಿಗೂ ಭಾಷಾಂತರದ ಮೂಲಕ ಸಂಬಂಧವನ್ನು ಕಟ್ಟಿಕೊಂಡಿತ್ತು. ಅಂದರೆ ಈ ಸಂಬಂಧವು ಆಧುನಿಕ ಕಾಲಾವಧಿಯಲ್ಲಿ ಇರುವಷ್ಟು ಗಮನಾರ್ಹವಾಗಿರಲಿಲ್ಲ. ವಸಾಹತು ಸಂದರ್ಭದಲ್ಲಿ ಕನ್ನಡ ಆಧುನಿಕತೆಯ ಕಾರಣದಿಂದ ಇಂಗ್ಲಿಷಿನಂತಹ ಪಶ್ಚಿಮದ ಭಾಷೆಯೊಂದಿಗೆ ಸಂಬಂಧವನ್ನು ಹೊಂದಿತ್ತು. ಹಾಗೇ ಸಂಸ್ಕೃತ ಭಾಷೆಯೊಂದಿಗೂ ಭಾಷಾಂತರದ ಸಂಬಂಧವನ್ನು ಪರಿಣಾಮಕಾರಿಯಾಗಿ ಬಲಪಡಿಸಿಕೊಂಡಿತ್ತು, ಇದರೊಂದಿಗೆ ಇತರ ದೇಶೀಯ ಭಾಷೆಗಳೊಂದಿಗೆ ಪ್ರಜ್ಞಾಪೂರ್ವಕವಾಗಿ ಹಿಂದಿಗಿಂತ ಭಿನ್ನವಾದ ಭಾಷಾಂತರದ ಸಂಬಂಧವನ್ನು ಹೊಂದಿದೆ. ಇದರಿಂದಾಗಿ ಇವುಗಳನ್ನು ಮುಂದೆ ಭಾಷಾಂತರದ ಹಿನ್ನೆಲೆಯಲ್ಲಿ ಗಮನಿಸಲಾಗುವುದು.

**೫.೨.೧. ಸಂಸ್ಕೃತ**

ಸಂಸ್ಕೃತ ಹಾಗೂ ಕನ್ನಡದ ನಡುವಿನ ಭಾಷಾಂತರ ಪ್ರಕ್ರಿಯೆ ಪಂಪ, ರನ್ನರ ಕಾಲದಿಂದ ಆರಂಭಗೊಂಡು ಬಿ.ಎಂ.ಶ್ರೀಯವರಿಗೆ ಮುಂದುವರಿದಿದೆ; ಈಗಲೂ ಇದೆ. ಆಧುನಿಕ ಪೂರ್ವದಲ್ಲಿ ಈ ಭಾಷಾಂತರವು 'ಪುನರ್‌ಲೇಖ'ದ ಮಾದರಿಯನ್ನು ಪ್ರಧಾನವಾಗಿ ಭಾಷಾಂತರಕಾರರು ಅನುಸರಿಸಿದರೆ, ೧೯ನೇ ಶತಮಾನದಲ್ಲಿ ನೇರ ಭಾಷಾಂತರವನ್ನು ಆಯ್ದುಕೊಂಡಿದೆ. ಪ್ರತಿಯೊಂದು ಕಾಲಾವಧಿಯಲ್ಲಿಯೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಸಂದರ್ಭವನ್ನು ಇತರ ಪ್ರಭಾವಿ ಭಾಷೆಗಳೊಂದಿಗೆ ಸಮನಾಗಿ ಕಟ್ಟಿಕೊಳ್ಳುವ ತುರ್ತು ಕನ್ನಡಿಗರಿಗೆ ಮುಖ್ಯವಾದ್ದರಿಂದ ಭಾಷಾಂತರದ ವಿವಿಧ ಮಾದರಿಗಳಲ್ಲಿ ಸಂಬಂಧವನ್ನು ರೂಪಿಸಿಕೊಂಡರು. ಹೀಗಾಗಿ ಸಂಸ್ಕೃತ ಭಾಷೆಯಿಂದ ಕನ್ನಡದಲ್ಲಿ ನಡೆದ

ಭಾಷಾಂತರ ಹೊರಗಿನದು ಎಂದೆನಿಸದೆ ಕನ್ನಡದ್ದೆ ಎಂಬ ನಿಲವು ಬದ್ಧವಾಗಿತ್ತು. ಅದಕ್ಕಾಗಿ ಆಧುನಿಕ ಕಾಲದಲ್ಲಿ ನೇರ ಭಾಷಾಂತರ ಮುನ್ನೆಲೆಗೆ ಬಂದಿತು.

ಕನ್ನಡದ ಆರಂಭಿಕ ಕವಿಗಳು ತಮಗೆ ಪರಿಚಿತವಿದ್ದ ಸಂಸ್ಕೃತ ಕಾವ್ಯಗಳ ಭಾಗಗಳನ್ನು ಹಾಗೂ ಇಡೀ ಕಾವ್ಯಗಳನ್ನು ಆಧರಿಸಿ ಕನ್ನಡದಲ್ಲಿ ಪುನರ್‌ಲೇಖಿಸುವ ಮಾದರಿಯಿಂದ ಕನ್ನಡದ ಸಾಹಿತ್ಯದ ಕೃಷಿಯನ್ನು ನಡೆಸಿದ್ದಾರೆ. ಸಂಸ್ಕೃತದಲ್ಲಿ ಬರುವ ಕಥೆ, ಪ್ರದೇಶ, ಪುರಾಣ, ವ್ಯಕ್ತಿ ವಿಷಯಗಳೆಲ್ಲ ಕನ್ನಡದ್ದು ಆಗಿರುವುದರಿಂದ ಅವರಿಗೆ ಇದು ಭಾಷಾಂತರವೆನಿಸಲಿಲ್ಲ. ಬದಲಿಗೆ ಸ್ವತಂತ್ರ ರಚನೆಗಳೆ ಎಂದು ಪರಿಭಾವಿಸಿಕೊಂಡಿದ್ದರು. ಇವುಗಳ ಕುರಿತಾದ ಭಾಷಾಂತರ ಚರ್ಚೆ ಎಪ್ಪತ್ತರ ದಶಕದಲ್ಲಿ ಆರಂಭಗೊಂಡರೂ ಇನ್ನೂ ಸ್ಪಷ್ಟ ಸ್ವರೂಪ ಪಡೆಯುವ ಹಂತಕ್ಕೆ ಬಂದಿಲ್ಲ.

೧೯ನೇ ಶತಮಾನದಲ್ಲಿ ಸಂಸ್ಕೃತ ಕೃತಿಗಳ ನೇರ ಭಾಷಾಂತರಗಳು ಹೆಚ್ಚಾಗಿ ನಡೆದಿವೆ. ಈ ಸಂದರ್ಭದಲ್ಲಿ ಕನ್ನಡದ ಜನಸಮುದಾಯ ವಸಾಹತುಶಾಹಿಯೊಂದಿಗೆ ತಮ್ಮ ಪರಂಪರೆಯನ್ನು ಹೊಂದಿಸಿಕೊಳ್ಳುವ ತುರ್ತಿನಲ್ಲಿತ್ತು. ಹೀಗಾಗಿ ಕನ್ನಡದೆನ್ನುವ ಮನೋಭೂಮಿಕೆಯನ್ನು ಸಂಸ್ಕೃತ ಭಾಷಾಂತರದ ಮೂಲಕ ಕಟ್ಟಿಕೊಳ್ಳುವುದರೊಂದಿಗೆ ಆಧುನಿಕತೆಯನ್ನು ಪ್ರಚುರಪಡಿಸಿದ ಪಶ್ಚಿಮದ ಪರಂಪರೆಯೊಂದಿಗೆ ಅನುಸಂಧಾನವನ್ನು ಕೈಗೊಂಡಿತು. ಇದರಿಂದಾಗಿ ಭಾಷಾಂತರಕಾರರು ಸಂಸ್ಕೃತ ಸಾಹಿತ್ಯ ಕೃತಿಗಳನ್ನು ಕನ್ನಡದ್ದಾಗಿಸಿಕೊಳ್ಳುವ ಆಸಕ್ತಿಯನ್ನು ಸಂಸ್ಕೃತದ ಶಾಸ್ತ್ರ ಮತ್ತು ಧರ್ಮ ಇತ್ಯಾದಿ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವವರೆಗೂ ವಿಸ್ತರಿಸಿಕೊಂಡರು.

ಸಂಸ್ಕೃತ ಸಾಹಿತ್ಯದ ಮುಖ್ಯ ನಾಟಕಕಾರರಾದ ಕಾಳಿದಾಸ, ಭಾಸ ಮುಂತಾದವರ ನಾಟಕಗಳೊಂದಿಗೆ ರಾಜಶೇಖರ, ಕ್ಷೇಮೇಂದ್ರ ಮುಂತಾದವರ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಕಾಳಿದಾಸನ ನಾಟಕಗಳ ಗದ್ಯರೂಪಾಂತರಗಳು ನಡೆದಿವೆ ಉದಾಹರಣೆಗೆ 'ರಘುಕುಲ ಚರಿತಂ' (ಭಾಷಾಂತರ-ದೊಡ್ಡಬೆಲೆ ನಾರಾಯಣ ಶಾಸ್ತ್ರಿ, ೧೯೧೩). ಈ ರೀತಿ ಸಾಹಿತ್ಯ ಕೃತಿಗಳ ಭಾಷಾಂತರದೊಂದಿಗೆ ಅನೇಕ ಧರ್ಮ ಸಂಬಂಧಿ ಕೃತಿಗಳೂ ಕನ್ನಡಕ್ಕೆ ಬಂದಿವೆ. ಈ ನಡುವೆ ಶಂಕರಾಚಾರ್ಯರ ಆರು ಕೃತಿಗಳು ೧೮೯೦ ರಿಂದ ೧೯೦೨ರ ನಡುವೆ ಕನ್ನಡಕ್ಕೆ ಭಾಷಾಂತರಗೊಂಡಿದೆ. ಇವುಗಳೊಂದಿಗೆ ಸಂಸ್ಕೃತದ ಶ್ಲೋಕ, ಶತಕ ಮತ್ತು ಸುಭಾಷಿತ ಇತ್ಯಾದಿಗಳನ್ನು ಅರ್ಥ, ತಾತ್ಪರ್ಯಗಳ ಮೂಲಕ ಕನ್ನಡದ್ದಾಗಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸಂಸ್ಕೃತದಿಂದ ಸುಮಾರು ೧೨೦ಕ್ಕಿಂತ ಅಧಿಕ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿದ್ದು ಇವುಗಳಲ್ಲಿ ಸಾಹಿತ್ಯ ಹಾಗೂ ಸಾಹಿತ್ಯೇತರ ಕೃತಿಗಳು ಸರಿಸುಮಾರು ಸಮಪ್ರಮಾಣದಲ್ಲಿರುವುದು ಗಮನಾರ್ಹವಾಗಿದೆ. ಸಂಸ್ಕೃತ ಮತ್ತು ಕನ್ನಡದ ಭಾಷಾಂತರದ ಸಂಬಂಧ ಸಂದರ್ಭಾನುಸಾರ ಪುನರ್ ಪರಿಶೀಲನೆಗೊಳ್ಳುತ್ತಿದ್ದುದು ಹಾಗೂ ಭಾಷಾಂತರದ ವಿವಿಧ ಮಾದರಿಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. ಇದರಿಂದಾಗಿ 'ಇಂಗ್ಲಿಷ್ ಗೀತಗಳು' ಪೂರ್ವದ ಕನ್ನಡ ಮತ್ತು ಸಂಸ್ಕೃತದ ಸಂಬಂಧ ವಿಶ್ಲೇಷಣಾರ್ಹವಾಗಿದೆ. ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಗೊಂಡ ನಾಟಕಗಳ ಪಟ್ಟಿಯನ್ನು ಅನುಬಂಧ ೬ ರಲ್ಲಿ ನೋಡಬಹುದು.

### ೫.೨.೨. ಇಂಗ್ಲಿಷ್

ಬ್ರಿಟೀಷ್‌ರ ಆಗಮನದಿಂದ ಕನ್ನಡಕ್ಕೆ ಇಂಗ್ಲಿಷ್‌ನ ಪರಿಚಯವಾದರೂ ಭಾಷಾಂತರ ಸಂಬಂಧ ಏರ್ಪಟ್ಟಿರುವುದು ೧೮-೧೯ನೇ ಶತಮಾನದ ವೇಳೆಗೆ ಎನ್ನಬಹುದು. ಆಧುನಿಕ ಶಿಕ್ಷಣದಿಂದ ಈ ಭಾಷೆಯ ಪರಿಚಯವಾದರೂ ಮುಂದೆ ನಡೆದ ಬಹುತೇಕ ಬದಲಾವಣೆಯಲ್ಲಿ ಇಂಗ್ಲಿಷ್ ಭಾಷೆ ಪರಿಣಾಮಕಾರಿ ಪಾತ್ರ ನಿರ್ವಹಿಸಿದೆ. ಇದರಿಂದಾಗಿ ಕನ್ನಡದ ಸಂಬಂಧ ಬಹು ಆಯಾಮಗಳಿಂದ ಇಂಗ್ಲಿಷಿನೊಂದಿಗೆ ನಡೆಯುವಂತಾಯಿತು. ಇಂಗ್ಲಿಷಿನ ಸಾಂಸ್ಕೃತಿಕ ಸ್ವಭಾವ ಕನ್ನಡದ ಮನಸ್ಸಿಗೆ ಹೊಸದಾಗಿಯೂ ಭಿನ್ನವಾಗಿಯೂ ಕಂಡಿದ್ದರಿಂದ ಅವುಗಳ ನೇರ ಪ್ರವೇಶ ಕನ್ನಡಕ್ಕೆ ಸುಲಭವಾಗಿರಲಿಲ್ಲ. ಇಂಗ್ಲಿಷ್ ಆಡಳಿತಾತ್ಮಕವಾಗಿ ಹಾಗೂ ಶೈಕ್ಷಣಿಕ ಕಾರಣಗಳಿಂದ ಅನುಷ್ಠಾನಗೊಂಡಿದ್ದರಿಂದ ಕನ್ನಡಿಗರಿಗೆ ಇದರ ಸಂಬಂಧ ಅನಿವಾರ್ಯವಾಯಿತು. ಹೀಗಾಗಿ ಭಾಷಾಂತರದ ಮೂಲಕ ಇಂಗ್ಲಿಷ್‌ನ್ನು ಅರ್ಥೈಸಿಕೊಳ್ಳುವ ಪ್ರಯತ್ನಗಳು ನಡೆದವು.

ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ಕೃತಿಗಳೆಂದರೆ, ಫೀಲ್ಡಿಂಗ್ ಹೆನ್ರಿಯ 'ಸುಂದರ ನಾಟಕ' (೧೮೮೨), 'ಪಾಂಚಾಲಿ ಪರಿಣಯಂ' (೧೮೯೦), 'ಚಂಡಮಾರುತ' (೧೮೯೨), 'ಪರಿಕಲಾಭ್ಯುದಯ' (೧೮೯೭) ಇತ್ಯಾದಿಗಳು. ಕನ್ನಡಕ್ಕೆ ಬಂದ ಇಂಗ್ಲಿಷಿನ ಕೃತಿಗಳಲ್ಲಿ ನಾಟಕಗಳೇ ಹೆಚ್ಚು. ಜೊತೆಗೆ ಕೆಲವು ಕಾದಂಬರಿಗಳು ಬಂದ ಉದಾಹರಣೆಗಳುಂಟು.

ಪಶ್ಚಿಮದ ಅಖಂಡ ಪ್ರತಿನಿಧಿ ಎನ್ನುವಂತೆ ಕನ್ನಡಿಗರು ಇಂಗ್ಲಿಷನ್ನು ಸ್ವೀಕರಿಸಿದ್ದಾರೆ. ಇಂಗ್ಲಿಷ್ ಮೂಲಭಾಷೆಯಾಗಿ, ಮಧ್ಯವರ್ತಿ ಭಾಷೆಯಾಗಿ ಹಲವುಸಾರಿ ಸ್ವಂತ ರಚನೆಯ ಭಾಷೆಯಾಗಿ ಕೂಡ ತನ್ನನ್ನು ಕನ್ನಡಿಗರಿಗೆ ಒದಗಿಸಿಕೊಂಡಿದೆ. ಹೊಸ ಸಾಹಿತ್ಯ ಪ್ರಕಾರ, ಸಾಹಿತ್ಯಾಧ್ಯಯನದ ಮಾದರಿ, ಆಡಳಿತ, ಕಾನೂನು, ಶಿಕ್ಷಣ ಪದ್ಧತಿ, ವಿಚಾರವಾದ, ಸುಧಾರಣಾ ನೀತಿ, ಹೊಸಬಗೆಯ ಬೇಸಾಯ, ವೈದ್ಯಕೀಯ, ತಂತ್ರಜ್ಞಾನದಂತಹ ಹತ್ತು ಹಲವಾರು ಸಂಗತಿಗಳನ್ನು ಈ ಭಾಷೆಯಿಂದ ಕನ್ನಡ ಪಡೆದುಕೊಂಡಿದೆ. ಇಲ್ಲಿ ಕೆಲವೊಂದು ನೇರವಾಗಿ ಕನ್ನಡದ್ದಾದರೆ ಹಲವು ಕನ್ನಡದ ಸಂದರ್ಭಕ್ಕೆ ಹೊಂದಿಸಿಕೊಳ್ಳುವ, ರೂಪಿಸಿಕೊಳ್ಳುವ ಕ್ರಮದಲ್ಲಿ 'ಕನ್ನಡೀಕರಣ'ಗೊಂಡಿದೆ. ಕನ್ನಡವು ಭಾರತೀಯ ಭಾಷೆಗಳಲ್ಲಿ ಸಂಸ್ಕೃತದಿಂದ ಹೆಚ್ಚಿನದನ್ನು ಕನ್ನಡದ ಜಗತ್ತಿನಲ್ಲಿ ಕಂಡುಕೊಂಡಂತೆ ಇಂಗ್ಲಿಷಿನಿಂದಲೂ ಹಲವಾರು ವಿಚಾರಗಳನ್ನು ಕನ್ನಡದ ಸಂದರ್ಭಕ್ಕೆ ಹೊಂದಿಸಿಕೊಂಡಿದೆ.

ಈ ಕಾಲಘಟ್ಟದಲ್ಲಿ ಕನ್ನಡ ಹಾಗೂ ಇಂಗ್ಲಿಷಿನ ಭಾಷಾಂತರ ಸಂಬಂಧ ಸಾಮಾಜಿಕ, ಆಡಳಿತಾತ್ಮಕ ಸಾಹಿತ್ಯಿಕ ಇತ್ಯಾದಿ ಆಯಾಮಗಳಲ್ಲಿ ರೂಪುಗೊಂಡಿರುವುದು. ಅಲ್ಲದ ಆಧುನಿಕ ಅವಧಿಯಲ್ಲಿ ಈ ಭಾಷೆ ನಿರ್ಣಾಯಕ ಪಾತ್ರವಹಿಸಿದೆ.

### ೫.೨.೩. ಬಂಗಾಳಿ

೧೯ನೇ ಶತಮಾನದಲ್ಲಿ ಹುಟ್ಟಿಕೊಂಡ ಸ್ವತಂತ್ರ ಚಳುವಳಿ ಹಾಗೂ ರಾಷ್ಟ್ರೀಯತೆಯ ಪರಿಕಲ್ಪನೆಯಿಂದ ಬಂಗಾಳಿ ಮತ್ತು ಕನ್ನಡದ ಸಂಬಂಧಕ್ಕೆ ಪೂರಕವಾದ ವಾತಾವರಣ ನಿರ್ಮಾಣವಾಯಿತು. ಕನ್ನಡದ ಪ್ರದೇಶದಿಂದ ಬಹುದೂರವಿರುವ ಬಂಗಾಳದ ಸಾಹಿತ್ಯ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ ಭಾಷಾಂತರವಾಗಿರುವುದು

ಗಮನಾರ್ಹವಾಗಿದೆ. ಮೊದಲಬಾರಿಗೆ ಪಶ್ಚಿಮದ ವಸಾಹತಾಗಿ ಪರಿವರ್ತನೆಗೊಂಡು ಆಧುನಿಕತೆಗೆ ಬಂಗಾಳಿ ತೆರೆದುಕೊಂಡಿದ್ದು ಹಾಗೂ ದೇಶದ ಪ್ರಮುಖ ವಾಣಿಜ್ಯಕೇಂದ್ರವಾಗಿ ರೂಪುಗೊಳ್ಳುತ್ತಿರುವುದಕ್ಕೂ ಅಲ್ಲಿನ ಸಾಹಿತ್ಯ ಕನ್ನಡಕ್ಕೆ ಬಂದಿರುವುದಕ್ಕೂ ನೇರವಾದ ಸಂಬಂಧವಿದೆ. ಯಾಕೆಂದರೆ, ಬಂಗಾಳ ಪ್ರದೇಶವು ದೇಶದ ಇತರ ಪ್ರದೇಶಗಳಿಗೆ ಮಾದರಿಯಾದಂತೆ ಕನ್ನಡಕ್ಕೂ ಮಾದರಿಯಾಗಿತ್ತು. ಇದರಿಂದಾಗಿ ಸಾಹಿತ್ಯ ರಚನೆಯಿಂದ ಬಂಗಾಳದ ಸುಧಾರಣವಾದಿ ಅಂಶಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನಗಳು ನಡೆದವು. ಸುಧಾರಣಾವಾದಿ ಹಾಗೂ ರಾಷ್ಟ್ರೀಯವಾದದ ಕಾರಣಕ್ಕಾಗಿ ಬಂಗಾಳಿ ಭಾಷೆಯನ್ನು ವಸಾಹತು ಕಾಲಘಟ್ಟವು ತನ್ನ ಮಾದರಿ ಭಾಷೆಯಾಗಿ, ಗುರುತಾಗಿ ಸ್ವೀಕರಿಸಿದಂತಿದೆ.

ಎರಡು ಭಾಷೆಗಳ ನಡುವಿನ ಯಾಜಮಾನ್ಯದ ಸಂಬಂಧದಾಚೆಗೆ ಭಾಷಾಂತರದ ಸಂಬಂಧವನ್ನು ವಿವರಿಸಿಕೊಳ್ಳುವಲ್ಲಿ ಬಂಗಾಳಿ ಭಾಷೆಯೊಂದಿಗಿನ ಕನ್ನಡದ ಸಂಬಂಧ ಉಪಯುಕ್ತವಾದುದಾಗಿದೆ.

ಕನ್ನಡಕ್ಕೆ ಭಾಷಾಂತರಗೊಂಡ ಬಂಗಾಳಿ ಭಾಷೆಯ ಪ್ರಮುಖ ಕೃತಿಗಳೆಂದರೆ 'ಕಪಾಲಕುಂಡಲಾ' (೧೮೯೮), 'ಕಮಲಕಾಂತ' (೧೮೯೮), 'ರಜನಿ' (೧೮೯೬), 'ವಿಷವೃಕ್ಷ' (೧೯೦೦) ಇತ್ಯಾದಿ. ಬಂಗಾಳಿ ಸಾಹಿತ್ಯವನ್ನು ಕನ್ನಡಕ್ಕೆ ಪರಿಚಯಿಸಿದವರಲ್ಲಿ ಬಿ.ವೆಂಕಟಾಚಾರ್ಯರು ಮೊದಲಿಗರು ಮತ್ತು ಉಲ್ಲೇಖಾರ್ಹರು ಎನಿಸಿಕೊಂಡವರಾಗಿದ್ದಾರೆ. ಆಧುನಿಕತೆಗೆ ಆಗ ತಾನೆ ತೆರೆದುಕೊಳ್ಳುತ್ತಿದ್ದ ಕನ್ನಡದ ಮನಸ್ಸಿಗೆ ಅಗತ್ಯ ಆಕರಗಳನ್ನು ಬಂಗಾಳೀ ಸಾಹಿತ್ಯ ಒದಗಿಸಿದ್ದರಿಂದ ಅನೇಕ ಕೃತಿಗಳು ಕನ್ನಡಕ್ಕೆ ಬಂದವು. ದೇಶೀಯ ಭಾಷೆಗಳ ಭಾಷಾಂತರದ ಸಂದರ್ಭದಲ್ಲಿ ಕನ್ನಡ ಮತ್ತು ಬಂಗಾಳಿ ಭಾಷೆಯ ಸಂಬಂಧ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರಕ್ಕೆ ದೇಶೀಯ ಆಯಾಮವನ್ನು ನೀಡಿದೆ ಎನ್ನಬಹುದು.

**೫.೨.೪. ನೆರೆಯ ಭಾಷೆಗಳು**

'ಇಂಗ್ಲೀಷ್ ಗೀತಗಳು' ಪೂರ್ವದ ಕಾಲಾವಧಿಯಲ್ಲಿ ತೆಲುಗಿನಿಂದ ಹಲವಾರು ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಇವುಗಳಲ್ಲಿ ನಾಟಕ ಕೃತಿಗಳ ಪ್ರಮಾಣವೇ ಹೆಚ್ಚು, ಉಳಿದಂತೆ ಧಾರ್ಮಿಕ ಕೃತಿಗಳು ಸಹ ಬಂದಿವೆ. ಸುಮಾರು ೧೮೯೫ರಲ್ಲಿ ತೆಲುಗು ಕೃತಿಗಳ ಭಾಷಾಂತರ ಚಟುವಟಿಕೆಯು ಆರಂಭಗೊಂಡಿತು ಎನ್ನಬಹುದು. ಈ ಸಂದರ್ಭದಲ್ಲಿ 'ಸತ್ಯರಾಜನ ಪೂರ್ವದೇಶದ ಯಾತ್ರೆಗಳು' (?), 'ವಿವೇಕ ಚಂದ್ರಿಕೆ' ಎಂಬ 'ರಾಜಶೇಖರ ಚರಿತ್ರೆ' (೧೮೯೫) 'ಕಲಹ ಪ್ರಿಯ ಪ್ರಹಸನಂ' (೧೮೯೮), 'ಪಶುಲೋಕ ರಹಸ್ಯಂ' (೧೮೯೨), ಹಾಗೂ ಇನ್ನಿತರ ಕೃತಿಗಳು ತೆಲುಗಿನಿಂದ ಕನ್ನಡಕ್ಕೆ ಬಂದಿವೆ.

ತೆಲುಗು ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವಲ್ಲಿ ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಅಗ್ರಮಾನ್ಯರು. ೧೯ನೇ ಶತಮಾನದಲ್ಲಿ ಪಂತುಲು ಮತ್ತಿತರರು ರಚಿಸಿದ ಸುಧಾರಣವಾದಿ ಕಾದಂಬರಿಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಪರಿಣಾಮಕಾರಿ ಕೆಲಸವನ್ನು ಇವರು ಮಾಡಿದ್ದಾರೆ. ಅಲ್ಲದೆ ಕೆಲವು ನಾಟಕಗಳನ್ನು ಗದ್ಯಾನುವಾದದ ಮೂಲಕ ಕನ್ನಡಕ್ಕೆ ಒದಗಿಸಿರುವುದನ್ನು ಮರೆಯುವಂತಿಲ್ಲ. ದ್ರಾವಿಡ ಭಾಷೆಗಳಲ್ಲಿ ತೆಲುಗಿನಿಂದ ಕನ್ನಡಕ್ಕೆ ಹೆಚ್ಚು ಕೃತಿಗಳು ಭಾಷಾಂತರವಾಗಿವೆ.

ಕನ್ನಡ ಮತ್ತು ತೆಲುಗಿನ ಭಾಷಾಂತರ ಸಂಬಂಧ ಆಧುನಿಕ ಪೂರ್ವಕಾಲದಲ್ಲಿಯೇ ಇತ್ತು. ಸುಮಾರು ೧೪ನೇ ಶತಮಾನದಿಂದಲೇ ಭಾಷಾಂತರ ಚಟುವಟಿಕೆ ಆರಂಭವಾಗಿರುವುದನ್ನು ಗಮನಿಸಬಹುದು. ಉದಾಹರಣೆಗೆ 'ಬಸವ ಪುರಾಣ'. ಹೀಗೆ ಕನ್ನಡ ಹಾಗೂ ತೆಲುಗು ಭಾಷೆಯ ಸಂಬಂಧ ಬಹು ಹಿಂದಿನ ದಿನಗಳಲ್ಲಿಯೇ ಆರಂಭವಾಗಿತ್ತು ಎಂಬುದು ತಿಳಿದುಬರುತ್ತದೆ.

ಮರಾಠಿಯಿಂದ ಗಳಗನಾಥರು 'ಕಮಲಕುಮಾರಿ', 'ಕ್ಷಾತ್ರತೇಜ ಅಥವಾ ಸ್ವಾಮಿ ಭಕ್ತಿ ಪ್ರದರ್ಶನ', 'ಛತ್ರಪತಿ' ಇತ್ಯಾದಿ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಮರಾಠಿ ಸಾಹಿತ್ಯ ಕೃತಿಗಳನ್ನು ಕನ್ನಡದ್ದಾಗಿಸಿಕೊಂಡವರಲ್ಲಿ ಇವರು ಪ್ರಮುಖರಾಗಿದ್ದಾರೆ. ಇನ್ನಿತರ ಧರ್ಮ ಮತ್ತು ಶಾಸ್ತ್ರ ಸಂಬಂಧಿ ಕೃತಿಗಳೂ ಸಹ ಕನ್ನಡಕ್ಕೆ ಭಾಷಾಂತರಗೊಂಡಿವೆ. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಮಲೆಯಾಳಂ ಮತ್ತು ತಮಿಳು ಭಾಷೆಗಳಿಂದಲೂ ಕೆಲವು ಕೃತಿಗಳು ಕನ್ನಡಕ್ಕೆ ಬಂದಿವೆ. ಇಂಗ್ಲಿಷ್ ಮೂಲದ ಮಲೆಯಾಳಂ ಕೃತಿ 'ಮುಳಿಯಿಲ್' 'ಸುಕುಮಾರಿ' (೧೮೯೯) ಎಂದು ಕನ್ನಡಕ್ಕೆ ಬಂದಿದೆ. ೧೮೯೮ರಲ್ಲಿ ನರಸಿಂಹಾಚಾರ್ಯರ 'ನೀತಿಮಂಜರಿ' (ತೃತೀಯ ಭಾಗ) ಕೃತಿಯನ್ನು ಪದ್ಯರೂಪದಲ್ಲಿ ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ.

'ಇಂಗ್ಲಿಷ್ ಗೀತಗಳು' ಪೂರ್ವದ ಅವಧಿಯ ಭಾಷಾಂತರ ಚಟುವಟಿಕೆ ಬಹುತೇಕ ಭಾರತೀಯ ಎಲ್ಲಾ ಭಾಷೆಗಳೊಂದಿಗೂ ನಡೆದಿರುವುದು ಕಂಡುಬರುತ್ತದೆ. ಸಂಸ್ಕೃತದಂತಹ ಅಭಿಜಾತ ಭಾಷೆಯೊಂದಿಗೆ ಬಂಗಾಳಿ, ಮರಾಠಿ, ತೆಲುಗು, ತಮಿಳು, ಮಲೆಯಾಳಂ, ಇತ್ಯಾದಿ ಭಾಷೆಗಳೊಂದಿಗೂ ಹಾಗೂ ವಸಾಹತುಶಾಹಿ ಪ್ರತಿನಿಧೀಕರಣವೂ ಆಧುನಿಕತೆಯ ವಾಹಕವು ಆದ ಇಂಗ್ಲಿಷಿನೊಂದಿಗೂ ಕನ್ನಡವು ಭಾಷಾಂತರದ ಸಂಬಂಧವನ್ನು ಹೊಂದಿದೆ. ಆಧುನಿಕ ಸಂದರ್ಭದಲ್ಲಿನ ಎಲ್ಲಾ ಬದಲಾವಣೆಗಳಿಗೆ ಈ ಭಾಷಾಂತರ ಪ್ರಕ್ರಿಯೆ ಅಗತ್ಯಭೂಮಿಕೆಯನ್ನು ಒದಗಿಸಿತ್ತು ಎಂಬುದು ಗಮನಾರ್ಹ.

ಭಾಷಾಂತರದ ಹಿನ್ನಲೆಯಲ್ಲಿ ೧೯ನೇ ಶತಮಾನವನ್ನು ಗಮನಿಸಿದರೆ ಅತಿ ಹೆಚ್ಚು ಕೃತಿಗಳು ಸಂಸ್ಕೃತದಿಂದ ಕನ್ನಡಕ್ಕೆ ಬಂದಿವೆ. ಕಾಲಾವಧಿಯ ದೃಷ್ಟಿಯಿಂದ ಗಮನಿಸಿದಾಗ, ೧೮೮೦-೯೦ರ ಅವಧಿಯಲ್ಲಿ ೪೦ ಕೃತಿಗಳು ೧೮೭೦-೭೯ರ ೭ ಕೃತಿಗಳು ಮುದ್ರಣಗೊಂಡರೆ ೧೮೬೦-೬೯ರಲ್ಲಿ ಕೇವಲ ಒಂದೇ ಕೃತಿ ಹೊರಬಂದಿದೆ. (ಕನ್ನಡ ಗ್ರಂಥ ಸೂಚಿ, ೧೯೮೪, ಏಳನೆಯ ಸಂಪುಟ) ಇದಕ್ಕೂ ಪೂರ್ವದಲ್ಲಿ ಬಂದವು ಧಾರ್ಮಿಕ ಕೃತಿಗಳಾಗಿದ್ದವು. ಆದರೂ ಕುತೂಹಲದ ಸಂಗತಿಯೆಂದರೆ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಡೆದ ಭಾಷಾಂತರ ಕೃತಿಗಳು ಸ್ವತಂತ್ರ ರಚನೆಗಳಿಗಿಂತ ನಾಲ್ಕು ಪಟ್ಟು ಹೆಚ್ಚಿನ ಪ್ರಮಾಣದಲ್ಲಿವೆ. ಹೀಗಾಗಿಯೇ ಕನ್ನಡ ಮತ್ತು ಭಾಷೆಗಳ ಸಂಬಂಧವನ್ನು ಭಾಷಾಂತರದ ಹಿನ್ನೆಲೆಯಲ್ಲಿ ಗಮನಿಸುವುದು ಮುಖ್ಯವಾಗುತ್ತದೆ.

**ಟಿಪ್ಪಣಿ**

೧ ಈ ಕುರಿತು ಕುರ್ತಕೋಟಿಯವರ 'ಬಯಲು - ಆಲಯ' (೧೯೯೨) ಮತ್ತು 'ನೂರು ಮರ ನೂರು ಸ್ವರ' (೧೯೯೮)ದ ಪ್ರಸ್ತಾವನೆಯಲ್ಲಿ ವಿವರಿಸಿರುವುದನ್ನು ಗಮನಿಸಬಹುದಾಗಿದೆ.

೨. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸುಮಾರು ೧೦೦ಕ್ಕಿಂತ ಅಧಿಕ ನಾಟಕಗಳು ಸಂಸ್ಕೃತದಿಂದ ನೇರ ಭಾಷಾಂತರಗೊಂಡಿರುವುದು ಗಮನಾರ್ಹ, ಈ ಕುರಿತು ಮುಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗುವುದು. ಮತ್ತು ಅನುಬಂಧದಲ್ಲಿ ಅವುಗಳ ಪಟ್ಟಿ ಕೊಡಲಾಗಿದೆ.

೩. ಕನ್ನಡ ಮತ್ತು ಸಂಸ್ಕೃತದ ಭಾಷಾಂತರದ ಸಂದರ್ಭದಲ್ಲಿ ಭಾಷೆಗಳ ಸಂಬಂಧದ ಬಗ್ಗೆ ಶ್ರೀಕಂಠೇಶಗೌಡ ಅವರು ತಮ್ಮ 'ಪ್ರತಾಪರುದ್ರದೇವ' (೧೮೯೫) ನಾಟಕದ ಪೀಠಿಕೆಯಲ್ಲಿ ಪ್ರಸ್ತಾಪಿಸಿರುವುದನ್ನು ನೋಡಬಹುದು.



## ಅಧ್ಯಾಯ-೬

# ಟೀಕುಗಳು ಮತ್ತು ಭಾಷಾಂತರ ಪ್ರಕ್ರಿಯೆ

೬.೧. ಭಾಷಾಂತರ ಮಾದರಿಯಾಗಿ ಟೀಕುಗಳು

೬.೨. ಟೀಕುಗಳ ವಿವಿಧ ಹೆಸರುಗಳು

೬.೩. ಟೀಕುಗಳಲ್ಲಿನ ಭಾಷಾಂತರದ ಎರಡು ವಿಧಗಳು

೬.೩.೧. ಅಂತರ್ ಭಾಷಾಂತರ (Intrlingual Translation)

೬.೩.೧.೧. ಕನ್ನಡ ಬಲ್ಲವರಿಗಾಗಿ ಟೀಕುಗಳು (ಏಕಭಾಷಿಕರಿಗಾಗಿ)

೬.೩.೧.೨. ಮೂಲವನ್ನು / ಸಂಸ್ಕೃತ ಬಲ್ಲವರಿಗಾಗಿ ಟೀಕುಗಳ ರಚನೆ (ದ್ವಿ/ಬಹುಭಾಷಿಕರಾಗಿ)

೬.೩.೨. ಆಂತರಿಕ ಭಾಷಾಂತರ (Intralingual Translation)

೬.೪. ಟೀಕುಗಳಲ್ಲಿ ಕಂಡು ಬರುವ 'ಗುಂಪುಭಾಷಾಂತರ' ಮತ್ತು 'ಸಹಭಾಷಾಂತರ' ಪರಿಕಲ್ಪನೆ (Group Translation and Co-Translator)

೬.೫. ಟೀಕುಗಳ ರಚನೆಗೆ ಕಾರಣಗಳು

೬.೫.೧. ಅಧ್ಯಯನಕಾರರು ಗುರುತಿಸಿರುವ ಕಾರಣಗಳು

೬.೬. ಆಧುನಿಕ ಸಂದರ್ಭದಲ್ಲಿ ಬಂದಿರುವ ಟೀಕುಗಳ ಸ್ವರೂಪ

೬.೬.೧. ಧಾರ್ಮಿಕ ಕೃತಿಗಳಿಗೆ ಬಂದಿರುವ ಟೀಕುಗಳು

೬.೬.೧.೧. ಟೀಕುಗಳ ಸ್ವರೂಪ

೬.೬.೨. ಧಾರ್ಮಿಕೇತರ ಕೃತಿಗಳಿಗೆ ಬಂದಿರುವ ಟೀಕುಗಳು

೬.೬.೨.೧. ಟೀಕುಗಳ ಸ್ವರೂಪ

೬.೭. ಟೀಕುಗಳು ರೂಪುಗೊಂಡ ಬಗೆಗಳು

## ಟೀಕುಗಳು ಮತ್ತು ಭಾಷಾಂತರ ಪ್ರಕ್ರಿಯೆ

ಆಧುನಿಕಪೂರ್ವ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಹಲವು ಪ್ರಕಾರಗಳಲ್ಲಿ ಟೀಕು ಸಹ ಒಂದು. ಸುಮಾರು ಏಳು-ಎಂಟನೇ ಶತಮಾನದಲ್ಲಿ ಆಗಮಗಳಿಗೆ ಸಂಸ್ಕೃತದ ಟೀಕಾ ಗ್ರಂಥಗಳು ರಚನೆಯಾದಲ್ಲಿಂದ ಟೀಕುಗಳ ರಚನೆ ಆರಂಭಗೊಂಡಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. (ಕಲಬುರ್ಗಿ, ೧೯೩೮) ಇಲ್ಲಿಂದ ಮುಂದಕ್ಕೆ ಟೀಕುಗಳ ಕೃಷಿ ನಿರಂತರವಾಗಿ ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಒಂದು ಕೃತಿಯ ಅರ್ಥ, ಭಾವ, ಉದ್ದೇಶಗಳನ್ನು ವ್ಯಾಖ್ಯಾನಿಸುವ ಅಥವಾ ತಾತ್ಪರ್ಯ ಬರೆಯುವ ವಿಧಾನವು ಟೀಕುಗಳಲ್ಲಿ ಮುಖ್ಯವಾಗಿರುತ್ತದೆ. ಕೃತಿಗಳನ್ನು ಸಮಕಾಲೀನ ಸಂದರ್ಭದಲ್ಲಿ ಅರ್ಥೈಸಿಕೊಳ್ಳುವ ಮೂಲಕ ಈ ಚಟುವಟಿಕೆ ನಡೆಯುತ್ತದೆ.

೧೮೫೦ - ೧೯೨೦ರ ಅವಧಿಯಲ್ಲಿ ಸುಮಾರು ೨೫ಂಕ್ಕಿಂತ ಅಧಿಕ ಪ್ರಮಾಣದಲ್ಲಿ ಟೀಕು / ವ್ಯಾಖ್ಯಾನಗಳು ರಚನೆಯಾಗಿವೆ. ಇಂಗ್ಲಿಷ್ ಗೀತಗಳು ಪೂರ್ವದ ಅವಧಿಯಲ್ಲಿ ಧಾರ್ಮಿಕ ಕೃತಿಗಳು ವ್ಯಾಖ್ಯಾನ ಪಡೆದುಕೊಂಡಂತೆ ಧಾರ್ಮಿಕೇತರ ಕೃತಿಗಳು ಸಹ ವ್ಯಾಖ್ಯಾನಗೊಂಡಿವೆ. ೧೯ನೇ ಶತಮಾನದಲ್ಲಿ ರೂಪುಗೊಂಡ ಆಧುನಿಕ ಶಿಕ್ಷಣ, ಹೊಸ ಮಾದರಿಯ ಆಡಳಿತ ವಿಧಾನ, ಬದಲಾಗುತ್ತಿರುವ ಆಲೋಚನಾ ಕ್ರಮ ಹಾಗೂ ಜೀವನ ವಿಧಾನಗಳ ಹಿನ್ನೆಲೆಯಲ್ಲಿಯೂ ಟೀಕುಗಳನ್ನು ಗ್ರಹಿಸಿಕೊಳ್ಳುವುದು ಸೂಕ್ತವಾದುದು. ಈ ಹಿನ್ನಲೆಯಲ್ಲಿ ಮುಂದಿನ ಚರ್ಚೆಯನ್ನು ಕೈಗೊಳ್ಳಲಾಗಿದೆ.

ಮೊದಮೊದಲು ಪ್ರಾಕೃತದ ಕೃತಿಗಳನ್ನು ಸಂಸ್ಕೃತ ಮತ್ತು ಕನ್ನಡದಲ್ಲಿ ವ್ಯಾಖ್ಯಾನಿಸಿ, ಅರ್ಥೈಸುವುದರೊಂದಿಗೆ ಸಂಸ್ಕೃತದ ಕೃತಿಯನ್ನು ಕನ್ನಡದಲ್ಲಿಯೂ ಕನ್ನಡದ ಕೃತಿಯನ್ನು ಮತ್ತೊಮ್ಮೆ ಕನ್ನಡದಲ್ಲಿಯೇ ವ್ಯಾಖ್ಯಾನಿಸುವ ಕ್ರಮವನ್ನು ಟೀಕುಗಳಲ್ಲಿ ಕಾಣಬಹುದು. ಧಾರ್ಮಿಕ/ತಾತ್ವಿಕ, ಸಾಹಿತ್ಯಿಕ ಹಾಗೂ ಶಾಸ್ತ್ರ, ಆಚರಣಾ ಕೃತಿಗಳಿಗೂ ಟೀಕನ್ನು ಬರೆಯುವ ಪ್ರಯತ್ನ ಮಾಡಿದ್ದಾರೆ. ಈಗಾಗಲೇ ರಚನೆಗೊಂಡಿರುವ ಒಂದು ಕೃತಿಯನ್ನು ವ್ಯಾಖ್ಯಾನಿಸುವ, ಅರ್ಥೈಸುವ ವಿಧಾನ ಟೀಕುಗಳಲ್ಲಿರುವುದರಿಂದ ಇದನ್ನು 'ಸೃಜನೇತರ' ಎಂದು ಪರಿಭಾವಿಸಿರುವುದುಂಟು.

ಮೀಮಾಂಸೆಯ ಚರ್ಚೆಯ ಸಂದರ್ಭದಲ್ಲಿ 'ವ್ಯುತ್ಪತ್ತಿ'ಗಿಂತ 'ಪ್ರತಿಭೆ' ಮೇಲು ಎಂಬ ತಿಳುವಳಿಕೆ ಪ್ರಬಲವಾಗಿದ್ದರಿಂದ 'ಸೃಜನಶೀಲತೆ'ಯೆಂಬುದು 'ಪ್ರತಿಭೆ'ಗೆ ಸೇರಿದ್ದು. ಆದ್ದರಿಂದ 'ಸೃಜನೇತರ' 'ಪ್ರತಿಭೆ'ಗಿಂತ ಕಡಿಮೆ ಎಂದು ಭಾವಿಸಲಾಯಿತು. ಇದರಿಂದಾಗಿ ಟೀಕುಗಳನ್ನು 'ಸೃಜನೇತರ'ದ ಗುಂಪಿಗೆ ಸೇರಿಸಿಕೊಂಡು ಚರ್ಚೆಗಳು ನಡೆದವು.

ಹಾಗೇ ನೋಡಿದರೆ ಮೀಮಾಂಸಕರ ಪ್ರಕಾರ ಪ್ರತಿಭೆಯೆಂದರೆ ಕ್ಲಿಷ್ಟವಾದುದನ್ನು ಸರಳೀಕರಿಸುವುದೇ ಆಗಿದೆ. (ರುದ್ರಟ, ಕಾವ್ಯಾಲಂಕಾರ) ಟೀಕುಗಳ ಸಂದರ್ಭದಲ್ಲಿಯೂ ಇದೇ ಪ್ರಕ್ರಿಯೆ ನಡೆಯುತ್ತದೆ. ಇದರಿಂದಾಗಿ ಕನ್ನಡದಲ್ಲಿ ಬಂದಿರುವ ಟೀಕುಗಳ ಪ್ರಮಾಣ ಮತ್ತು ರೂಪ ಸ್ವರೂಪಗಳು 'ಪ್ರತಿಭೆ' ಗೆ ಸೇರಿದವೇ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಪ್ರಾಕೃತದ ಕೃತಿಯೊಂದನ್ನು ಸಂಸ್ಕೃತದಲ್ಲಿಯೂ ಸಂಸ್ಕೃತದ ಕೃತಿಯನ್ನು ಕನ್ನಡದಲ್ಲಿಯೂ ಹಾಗೂ ಕನ್ನಡದ ಕೃತಿಯನ್ನು ಮತ್ತೊಮ್ಮೆ ಕನ್ನಡದಲ್ಲಿಯೇ ವ್ಯಾಖ್ಯಾನಿಸುವ, ವಿಶ್ಲೇಷಿಸುವ ಅಥವಾ ಸಂಗ್ರಹಿಸುವ ಕ್ರಮ ಪ್ರತಿಭೆಗೆ ಹೊರತಾದುದಲ್ಲ. ಕಾವ್ಯಮೀಮಾಂಸೆಯ ಸಂದರ್ಭದಲ್ಲಿ ಚರ್ಚೆಗೊಂಡ 'ಪ್ರತಿಭೆ'ಯ ಪರಿಕಲ್ಪನೆಯನ್ನು ಇಂದು ವಿಸ್ತರಿಸುವ, ಪುನರ್ ವ್ಯಾಖ್ಯಾನಿಸುವ ಅಗತ್ಯವಿದೆ. ಅಂದರೆ ಕಾಲದಿಂದ ಕಾಲಕ್ಕೆ ಪ್ರತಿಭೆಯ ವ್ಯಾಪ್ತಿ ಹಿಗ್ಗುತ್ತದೆ, ಹಿಗ್ಗಲೇಬೇಕಾದುದು. ಬದಲಾವಣೆ, ಪರಿವರ್ತನೆ ಎಲ್ಲದಕ್ಕೂ ಇರುವಂತದ್ದು. ಇಂತಹ ಸಂದರ್ಭದಲ್ಲಿ ಟೀಕುಗಳಂತಹ ಒಂದು 'ಸಾಹಿತ್ಯ ಪ್ರಕಾರ' ವನ್ನು ಪ್ರಸ್ತುತ ದಿನಗಳಲ್ಲಿ ಪ್ರಜನಶೀಲವೆಂದು ಪರಿಗಣಿಸದೆ 'ಸೃಜನೇತರ' ಎಂದು ಪರಿಗಣಿಸುವುದು ಸಮಂಜಸವೆ? ಒಂದು ಭಾಷೆಯ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ವ್ಯಾಖ್ಯಾನಿಸುವುದು ಹಾಗೂ ಅದೇ ಭಾಷೆಯಲ್ಲಿ ತಾತ್ಪರ್ಯ ಬರೆಯುವುದು ಕೂಡ ಪ್ರತಿಭೆಯಿಂದಲೇ. ಟೀಕುಗಳಲ್ಲಿ ನಡೆವ ಪದ್ಯಾತ್ಮಕ, ಗದ್ಯಾತ್ಮಕ, ಸಂಕ್ಷಿಪ್ತ, ವಿವರಣಾತ್ಮಕ, ತಾತ್ವಿಕಾರ್ಥ, ವ್ಯಾಖ್ಯಾನಗಳೆಲ್ಲ ಟೀಕಿನ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

ಕನ್ನಡ ಸಾಹಿತ್ಯಕ್ಕೊಂದು ಚರಿತ್ರೆ ಬರೆದು, ಸಾಹಿತ್ಯ ಪ್ರಕಾರಗಳ ಕುರಿತು ಪ್ರತ್ಯೇಕವಾದ ಕೃತಿಯನ್ನೇ ಹೊರತಂದ ರಂ. ಶ್ರೀ. ಮುಗಳಿಯವರಂಥ ವಿದ್ವಾಂಸರು/ಅಧ್ಯಯನಕಾರರು ಟೀಕುಗಳನ್ನು ಒಂದು ಸಾಹಿತ್ಯ ಪ್ರಕಾರವೆಂದು ಪರಿಗಣಿಸದೆ ಇರುವುದು ಸರಿಯೇ ಎಂಬುವ ಕುರಿತು ಆಲೋಚಿಸಬೇಕಾಗಿದೆ. ಚಂಪೂ, ವಚನ, ರಗಳೆ, ಕೀರ್ತನೆ, ಷಟ್ಪದಿಗಳು ಮಾತ್ರ ಅವರಿಗೆ ಪ್ರಕಾರಗಳಂತೆ ಕಂಡಿವೆ. ಹಾಗೇ ನೋಡಿದರೆ ಟೀಕಿನ ಪ್ರಮಾಣ ರಗಳೆ, ಷಟ್ಪದಿಗಳಂತಹ ಪ್ರಕಾರಗಳ ಕೃತಿಗಳ ಪ್ರಮಾಣಕ್ಕಿಂತ ಅಧಿಕ ಇವೆ. ಸುಮಾರು ೧೦-೧೫ ಮಂದಿ ಕವಿಗಳು ಮಾತ್ರ ಈ ಪ್ರಕಾರಗಳ ಕೃಷಿ ಮಾಡಿದರೆ ಟೀಕುಗಳನ್ನು ಬರೆದ ಟೀಕಾಕಾರರ ಸಂಖ್ಯೆ ೧೦೦ ರಷ್ಟಿದೆ. ಅಲ್ಲದೆ ಬಹುತೇಕವಾಗಿ ಚಂಪೂ ಸಾಹಿತ್ಯ ಪ್ರಕಾರದ ಜೊತೆಗೆ ಇದು ಆರಂಭಗೊಂಡಿರುವಂತದ್ದು ಕನ್ನಡದ ಪ್ರಮುಖ ಕವಿಗಳ ಕೃತಿಗಳಿಗೆ ಟೀಕುಗಳನ್ನು ಬರೆದಿರುವುದು ಗಮನಾರ್ಹವಾಗಿದೆ. ಇಷ್ಟಿದ್ದು ಇದೊಂದು ಸಾಹಿತ್ಯ ಪ್ರಕಾರವಾಗಿವೆ ಇರುವುದು/ಒಪ್ಪದಿರುವುದು ಸರಿಯಾದುದೆ?

**೬.೧. ಭಾಷಾಂತರ ಮಾದರಿಯಾಗಿ ಟೀಕುಗಳು**

ಟೀಕುಗಳ ಕುರಿತು ನಡೆದ ಇದುವರೆಗಿನ ಅಧ್ಯಯನಗಳು ಟೀಕನ್ನು ವಿಭಿನ್ನ ನೆಲೆಗಳಲ್ಲಿ ಅರ್ಥೈಸಿಕೊಳ್ಳುವ ಪ್ರಯತ್ನಮಾಡಿವೆ. ಅಧ್ಯಯನಕಾರರು ಟೀಕುಗಳನ್ನು 'ಸಾಹಿತ್ಯಾಧ್ಯಯನ ಮತ್ತು ವಿಮರ್ಶೆ'[೨] ಇತ್ಯಾದಿಗಳಲ್ಲಿ ಗುರುತಿಸಿಕೊಂಡಿದ್ದಾರೆ. ಈ ಅಧ್ಯಾಯದಲ್ಲಿ ಇವುಗಳನ್ನು ಗಮನಿಸುವುದರೊಂದಿಗೆ ಟೀಕುಗಳು ಹೇಗೆ 'ಭಾಷಾಂತರ

ಮಾದರಿ'ಯಾಗಿವೆ ಎಂಬುದನ್ನು ಗುರುತಿಸಲು ಪ್ರಯತ್ನಿಸಲಾಗುವುದು. ಜೊತೆಗೆ ಟೀಕುಗಳ ಸ್ವರೂಪ, ಟೀಕುಗಳ ರಚನೆಗೆ ಕಾರಣ, ಭಾಷಾಂತರದ ವಿವಿಧ ಮಾದರಿಗಳನ್ನು ಟೀಕುಗಳು ಹೇಗೆ ರೂಪಿಸಿಕೊಂಡಿದ್ದವು ಹಾಗೂ ಇಂಗ್ಲಿಷ್ ಗೀತಗಳು ಪೂರ್ವದ (೧೮೫೦-೧೯೨೦) ಟೀಕಾ ಸಾಹಿತ್ಯದ ಸ್ವರೂಪವನ್ನು ಚರ್ಚಿಸುವುದು ಈ ಅಧ್ಯಯನದ ಉದ್ದೇಶ.

೨೦ನೇ ಶತಮಾನದಲ್ಲಿ ನಡೆದ ಸಾಹಿತ್ಯಾಧ್ಯಯನಗಳು ಆಧುನಿಕಪೂರ್ವ ಸಾಹಿತ್ಯವನ್ನು ಬಹು ಆಯಾಮಗಳಲ್ಲಿ ನಿರ್ವಚಿಸಿಕೊಂಡಿರುವುದು ತಿಳಿದಿರುವ ಸಂಗತಿ. ಇದರಿಂದ ಟೀಕು ಸಹ ಹೊರತಾಗಿಲ್ಲ. ಟೀಕುಗಳ ಕುರಿತು ನಡೆದ ಅಧ್ಯಯನಗಳನ್ನು ಗಮನಿಸುವುದಾದರೆ, ಎಚ್.ಎಸ್. ಶ್ರೀಮತಿಯವರು ತಮ್ಮ 'ಹಳೆಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ' (೧೯೯೩) ಕೃತಿಯಲ್ಲಿ ಟೀಕುಗಳ ಬಗ್ಗೆ ಪ್ರಸ್ತಾಪಿಸುತ್ತಾ ಟೀಕನ್ನು 'ಸಾಹಿತ್ಯಾಧ್ಯಯನ ಮಾದರಿ'ಯೆಂದು ಗುರುತಿಸಿದ್ದಾರೆ. ಈ ಬಗೆಯಲ್ಲಿ ಗುರುತಿಸುವಾಗ ಟೀಕನ್ನು 'ಸಂಗ್ರಹ', 'ಸಂಪಾದನೆ'ಗಳ ಜೊತೆಗಿರಿಸಿ ನೋಡಿದ್ದಾರೆ. ಈಗಾಗಲೇ ಪ್ರಕಟಗೊಂಡು ವಿವಿಧ ಹಸ್ತಪ್ರತಿಯಲ್ಲಿರುವುದನ್ನು ಒಂದು ಮಾದರಿಯಲ್ಲಿ ಒಂದುಗೂಡಿಸುವ ಕ್ರೋಢೀಕರಿಸುವ ಕ್ರಮ ಸಂಗ್ರಹವಾಗಿದೆ. ಇದು ಆಧುನಿಕ ಅವಧಿಯಲ್ಲಿ ಚಾಲ್ತಿಗೆ ಬಂದ ಒಂದು ಸಾಹಿತ್ಯಕ ಚಟುವಟಿಕೆಯೂ ಹೌದು. ಆಧುನಿಕಪೂರ್ವ ಕಾವ್ಯಗಳ ಹಸ್ತಪ್ರತಿಯನ್ನು ಶೋಧಿಸಿ ಅವುಗಳ ಆಧಾರದ ಮೇಲೆ ಕಾವ್ಯಗಳನ್ನು ಸಂಪಾದಿಸುವ ಕೆಲಸಗಳು ನಡೆದವು. ಇದಕ್ಕಿಂತ ಭಿನ್ನವಾದುದು 'ಸಂಪಾದನೆ'. ಸಂಪಾದನಾಕಾರ ತನ್ನ ಕಾಲದ ಸಂದರ್ಭಕ್ಕೆ ಅನುಸಾರವಾಗಿ ಪಠ್ಯವೊಂದನ್ನು ಮರುರೂಪಗೊಳಿಸಿಕೊಳ್ಳುವುದು ಸಂಪಾದನೆಯಾಗಿದೆ. (ಹಿಂದೆ ಪ್ರತ್ಯೇಕ ಅಧ್ಯಾಯದಲ್ಲಿ ಸಂಪಾದನೆ ಕುರಿತು ಚರ್ಚಿಸಲಾಗಿದೆ). ಆದರೆ ಟೀಕುಗಳ ರಚನೆಯ ಸ್ವರೂಪ ಇವುಗಳಿಗಿಂತ ಭಿನ್ನವಾದುದು. ಕೃತಿಯೊಂದನ್ನು ತನ್ನ ಕಾಲದ ಭಾಷೆ, ಸಂದರ್ಭಗಳ ನೆಲೆಯಲ್ಲಿ ವ್ಯಾಖ್ಯಾನಿಸುವ, ಸಂಗ್ರಹಾನುವಾದ ಮಾಡುವ ಮತ್ತು ವಿಶ್ಲೇಷಿಸುವ ಕೆಲಸ ಟೀಕುಗಳ ಸಂದರ್ಭದಲ್ಲಿ ನಡೆಯುತ್ತದೆ. ಈ ಹಿನ್ನೆಲೆಯಲ್ಲಿ ಸಂಗ್ರಹ, ಸಂಪಾದನೆ ಹಾಗೂ ಟೀಕುಗಳ ತಾತ್ವಿಕ ಸ್ವರೂಪ ಭಿನ್ನವಾದುಗಿದೆ. ಅಧ್ಯಯನಕಾರರು ಎಲ್ಲವನ್ನು 'ಸಾಹಿತ್ಯಾಧ್ಯಯನ ಮಾದರಿ'ಯೆಂದು ಪರಿಭಾವಿಸುವಾಗ ಈ ಚಟುವಟಿಕೆಗಳ ಸ್ವರೂಪವನ್ನು ಗಮನಿಸಬೇಕಾಗುತ್ತದೆ. ಯಾಕೆಂದರೆ, ಟೀಕುಗಳಲ್ಲಿ ಒಂದು ಕೃತಿಗೆ ಅರ್ಥ, ವ್ಯಾಖ್ಯಾನ ಮತ್ತು ತಾತ್ಪರ್ಯ ನೀಡುವುದು ಮುಖ್ಯವಾಗಿರುತ್ತದೆ. ಈಗಾಗಲೇ ರಚನೆಗೊಂಡಿರುವ ಕೃತಿಯೊಂದನ್ನು ತನ್ನ ಕಾಲ, ಸಂದರ್ಭಗಳಲ್ಲಿ ಅರ್ಥೈಸಿಕೊಳ್ಳುವ ಕೆಲಸ ಟೀಕಾಕಾರನದು. ಇಂತಹ ಸಂದರ್ಭದಲ್ಲಿ ಅರ್ಥ, ವ್ಯಾಖ್ಯಾನಗಳು ಮೂಲಕೃತಿಯ ಭಾಷೆ ಹಾಗೂ ದೇಶೀಯ ಭಾಷೆಗಳಲ್ಲಿ ನಡೆಯುವುದುಂಟು. ಅಂದರೆ ಭಾಷಾಂತರ ಪ್ರಕ್ರಿಯೆ ಟೀಕುಗಳಲ್ಲಿ ನಡೆಯುತ್ತದೆ. ಹೀಗಾಗಿ ಟೀಕುಗಳು ಸಾಹಿತ್ಯಾಧ್ಯಯನ ಮಾದರಿಗಿಂತ ಭಾಷಾಂತರದ ಮಾದರಿಯಾಗಿರುವುದೇ ಹೆಚ್ಚು.

ಇದೇ ರೀತಿ ಟೀಕುಗಳನ್ನು 'ಸಾಹಿತ್ಯಾಧ್ಯಯನ ಮಾದರಿ'ಯೆನ್ನುವ ಎಸ್.ಎಸ್. ಅಂಗಡಿಯವರು ''ಟೀಕುಗಳು ಅಧ್ಯಯನಕ್ಕೆ ತಕ್ಕ ಪರಿಕರಗಳನ್ನು ಒದಗಿಸಿಕೊಡುತ್ತವೆ. ಅವುಗಳನ್ನು ಓದಿದವರಿಗೆ ಕೃತಿಗಳ ನೇರ ಅಭ್ಯಾಸ ಸುಲಭವಾಗುತ್ತದೆ. ಕೃತಿಯ ಪ್ರತಿಯೊಂದು ಪದಪುಂಜವನ್ನು, ವಾಕ್ಯ ವೃಂದವನ್ನು ಟೀಕಾಕಾರರು ತನ್ನ ಕಾಲದ ಗದ್ಯಕ್ಕೆ ಅನುವಾದಿಸಿದ್ದಾರೆ. ಇದರಿಂದ ಸಾಹಿತ್ಯ ಕೃತಿಗಳ ಓದು ಪಠ್ಯದೊಡನೆ ನೇರ ಸಂವಾದಕ್ಕೆ ಬಳಸಿಕೊಳ್ಳಲಿಕ್ಕೆ

ಹಾಗೂ ಪಠ್ಯದ ಒಟ್ಟಾರೆ ಸಂಗ್ರಹಿಕೆಗೆ ನೆರವಾಗುತ್ತದೆ. ಕವಿಕೃತಿಯ ತೆರೆದು ತೋರುವ ಆಕರ - ಪರಿಕರಗಳಾಗಿ ಟೀಕುಗಳು ಕಾಣಿಸುತ್ತವೆ'' (ಅಂಗಡಿ, ೨೦೦೬, ಪು.೨೦೬) ಎನ್ನುತ್ತಾರೆ.

ಇವರು ಟೀಕುಗಳ ಸ್ವರೂಪವನ್ನು ಗಮನಿಸುವಾಗ ಅದೊಂದು ಭಾಷಾಂತರ ಪ್ರಕ್ರಿಯೆ ಎಂಬುದನ್ನು ಸಹ ಗುರುತಿಸಿದ್ದಾರೆ. ಟೀಕುಗಳು ಅಧ್ಯಯನಕ್ಕೆ ಸಂಬಂಧಿಸಿದ ಪರಿಕರಗಳನ್ನು ನೇರವಾಗಿ ಒದಗಿಸುತ್ತವೆ, ಈ ಪರಿಕರಗಳನ್ನು 'ಅನುವಾದ'ದ ಮೂಲಕ ರೂಪಿಸಿಕೊಳ್ಳಲಾಗುತ್ತದೆ ಎಂಬುದನ್ನು ಅಂಗಡಿಯವರು ಗಮನಿಸಿದ್ದಾರೆ. ಪಠ್ಯವೊಂದರ ಅಧ್ಯಯನಕ್ಕೆ ಇದು ಪೂರಕವಾದ್ದರಿಂದ ಅಂಗಡಿಯವರು ಟೀಕುಗಳನ್ನು ಪೂರಕ ಪಠ್ಯವಾಗಿ ಭಾವಿಸಿದ್ದಾರೆ. ಹೀಗೆ ಹೇಳುವಾಗ ಈ ಪೂರಕ ಪಠ್ಯದ ರಚನೆ ಬೇರೊಂದು ಭಾಷೆಯಲ್ಲಿ ಅಥವಾ ಅದೇ ಭಾಷೆಯಲ್ಲಿ ನಡೆಯುವುದರಿಂದ ಭಾಷಾಂತರ ಚಟುವಟಿಕೆಯೆಂದು ಗುರುತಿಸಿದ್ದಾರೆ. ಭಾಷಾಂತರ ಚಟುವಟಿಕೆ ಟೀಕುಗಳ ರಚನೆಯಲ್ಲಿ ನಡೆದರೂ ಟೀಕನ್ನು 'ಸಾಹಿತ್ಯಾಧ್ಯಯನ ಮಾದರಿ'ಯೆಂದೇ ಕರೆದಿರುವ ಕುರಿತು ಆಲೋಚಿಸಬೇಕಾಗಿದೆ. ಭಾಷಾಂತರ ಅಧ್ಯಯನವು ಸಾಹಿತ್ಯಾಧ್ಯಯನದ ಭಾಗವಾಗಿಯೆ ನಡೆಯುತ್ತಿದ್ದುದು ಹಾಗೂ ಭಾಷಾಂತರ ಅಧ್ಯಯನದ ಚರ್ಚೆಗಳು ಬಹುತೇಕವಾಗಿ ಸಾಹಿತ್ಯ ಕೃತಿಗಳ ಹಿನ್ನೆಲೆಯಿಂದಲೇ ರೂಪುಗೊಳ್ಳುತ್ತಿದ್ದುದರಿಂದ ಭಾಷಾಂತರ ಕೃತಿಗಳನ್ನು 'ಸಾಹಿತ್ಯಾಧ್ಯಯನದ ಮಾದರಿ'ಯಲ್ಲಿಯೇ ಗುರುತಿಸುವ ಪರಿಪಾಠ ಮುಂದುವರಿದಿದೆ. ಇದರಿಂದಾಗಿ ಟೀಕುಗಳಲ್ಲಿ ನಡೆವ ಭಾಷಾಂತರ ಪ್ರಕ್ರಿಯೆಯನ್ನು ಪ್ರಸ್ತಾಪಿಸಿದರೂ ಟೀಕುಗಳನ್ನು 'ಸಾಹಿತ್ಯಾಧ್ಯಯನ ಮಾದರಿ'ಯೆಂದೆ ಕರೆದಿದ್ದಾರೆ. ಆದರೂ ಟೀಕುಗಳಲ್ಲಿ ನಡೆವ ಚಟುವಟಿಕೆ ತಾತ್ವಿಕವಾಗಿ ಭಾಷಾಂತರವೆ ಆಗಿರುವುದು ಗಮನಾರ್ಹವಾಗಿದೆ. ಇದಕ್ಕೆ ಪೂರಕವಾಗಿ ಎಂ.ಎಂ. ಕಲಬುರ್ಗಿಯವರ ವಿಚಾರವನ್ನು ಬಳಸಿಕೊಳ್ಳುವುದಾದರೆ, ''ಯಾವುದೇ ಭಾಷೆಯ ಸಾಹಿತ್ಯ ಮೊದಲು ಅನುವಾದ, ಟೀಕುಗಳ ಮೂಲಕ ಭಾಷೆಯಲ್ಲಿ ಪ್ರವೇಶ ಪಡೆದು, ಆಮೇಲೆ ಆ ಭಾಷೆಯಲ್ಲಿ ಸ್ವತಂತ್ರ ಸಾಹಿತ್ಯ ಸೃಷ್ಟಿಗೆ ನೆಲೆಯನ್ನು ಮಾಡಿಕೊಡುತ್ತದೆ. ಈವರೆಗೆ ಕನ್ನಡದಲ್ಲಿ ಸ್ವತಂತ್ರ ಸಾಹಿತ್ಯ ನಿರ್ಮಾಣವಾಗುವುದಕ್ಕೆ ಮೊದಲು ಪ್ರಾಕೃತ, ಸಂಸ್ಕೃತ ಭಾಷೆಗಳಲ್ಲಿರುವ ಜೈನ ಸಾಹಿತ್ಯಕ್ಕೆ ಟೀಕು ಬರೆಯುವ ಕಾರ್ಯವೇ ನಡೆದಿರಬೇಕು'' (ಕಲಬುರ್ಗಿ ಎಂ.ಎಂ. ೧೯೩೮, ಪು - ii, iii). ಎಂದು ಅಭಿಪ್ರಾಯ ಪಡುತ್ತಾರೆ.

ಟೀಕುಗಳು ಮೂಲಭೂತವಾಗಿ ಭಾಷಾಂತರದ ಮಾದರಿ ಎನ್ನುವುದಕ್ಕೆ ಇವರ ಮಾತು ಪೂರಕವಾದುದಾಗಿದೆ. ಯಾವುದೇ ಭಾಷೆಯ ಸಾಹಿತ್ಯ ಮೊದಲು ಅನುವಾದ, ಟೀಕುಗಳ ಮೂಲಕ ನಡೆದು ನಂತರ ಸ್ವತಂತ್ರ ಸಾಹಿತ್ಯ ರಚನೆಯಾಗುತ್ತದೆ ಎಂಬುದರ ಚರ್ಚೆ ಇಲ್ಲಿ ಹೊರತಾದುದಾಗಿದ್ದು ಟೀಕುಗಳನ್ನು 'ಅನುವಾದ' ಅಥವಾ 'ಭಾಷಾಂತರ' ಎಂದು ಪರಿಭಾವಿಸಿರುವುದು ಮುಖ್ಯವಾಗುತ್ತದೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಂಸ್ಕೃತದ ಕೃತಿಗಳಿಗೆ ಕನ್ನಡದಲ್ಲಿ ವ್ಯಾಖ್ಯಾನ ರಚಿಸಿರುವುದನ್ನು ಗಮನಿಸಬೇಕಾಗಿದೆ. ಕನ್ನಡದ ಸಂದರ್ಭದಲ್ಲಿ ಸಂಸ್ಕೃತ ಕೃತಿಗಳಿಗೆ ಕನ್ನಡದಲ್ಲಿಯೇ ತಾತ್ಪರ್ಯ ಬರೆದಿರುವ ಕೆಲಸ ಭಾಷಾಂತರವಾಗಿದೆ. ಹೀಗಾಗಿಯೇ ಕಲಬುರ್ಗಿಯವರು ಸಂಸ್ಕೃತದ ಕೃತಿಗಳಿಗೆ ಟೀಕುಗಳನ್ನು ರಚಿಸಿರುವುದನ್ನು ಸಾಹಿತ್ಯಾಧ್ಯಯನ ಎಂದು ಕರೆದರೂ ಅದು ಭಾಷಾಂತರ ಚಟುವಟಿಕೆಯೇ ಆಗಿದೆ.

ಕೃತಿಯೊಂದರ ಅರ್ಥ ಮತ್ತು ವ್ಯಾಖ್ಯಾನ ನೀಡಲಾಗುತ್ತದೆ ಎಂಬ ಕಾರಣದಿಂದ ಟೀಕುಗಳನ್ನು 'ಅಧ್ಯಯನ ಮಾದರಿ'ಯೆಂದು ಕರೆದಂತೆ ಕೆಲವರು 'ವಿಮರ್ಶೆ'ಯೆಂತಲೂ ಕರೆದಿರುವುದು ತಿಳಿದು ಬರುತ್ತದೆ. ''ವಿಮರ್ಶಾ

ವರ್ಗಕ್ಕೆ ಸೇರುವ ಟೀಕಾ ಸಾಹಿತ್ಯವು ಒಂದು ಕೃತಿಯ ಅರ್ಥ, ಭಾವ, ಉದ್ದೇಶ ಇತ್ಯಾದಿಗಳನ್ನು ತೆರೆದು ತೋರಿಸುವ ಒಂದು ವಿಶಿಷ್ಟ ಪ್ರಕಾರ'' (ಹಳ್ಳಿಕೇರಿ ಎಫ್.ಟಿ. ೨೦೦೬, ಪು.೭೨) ಎನ್ನುವಲ್ಲಿ ಟೀಕು ಹೇಗೆ ಕೃತಿಯೊಂದನ್ನು ಅರ್ಥೈಸುತ್ತದೆ ಎಂಬುದನ್ನು ಗಮನಿಸಿ ಹೇಳಿರುವಂತೆ ಕಾಣುತ್ತದೆ. 'ಪಠ್ಯ'ವೊಂದನ್ನು ಭಿನ್ನ ಸಂದರ್ಭಗಳಲ್ಲಿ ಅರ್ಥೈಸಿಕೊಳ್ಳುವುದಾಗಲಿ, ವ್ಯಾಖ್ಯಾನಿಸುವುದಾಗಲಿ ಅದು ಭಾಷಾಂತರದ ಚಟುವಟಿಕೆಯೆ ಆಗುತ್ತದೆ. ಭಾಷಾಂತರ ಕೃತಿಗೆ 'ಮೂಲ ಪಠ್ಯ'ವಿರುವಂತೆ ಪ್ರತಿಯೊಂದು ಟೀಕು ಸಹ 'ಮೂಲ ಪಠ್ಯ'ವನ್ನು ಹೊಂದಿರುತ್ತದೆ. ಹಾಗೇ ಟೀಕು 'ಉದ್ದಿಷ್ಟ ಪಠ್ಯ'ವಾಗಿರುತ್ತದೆ. ವ್ಯಾಖ್ಯಾನಕಾರ ಕೃತಿಯೊಂದನ್ನು ತನ್ನ ಕಾಲದ ಸಂದರ್ಭ, ಭಾಷೆಗಳಲ್ಲಿ ಅರ್ಥೈಸುವ ಮೂಲಕ ಭಾಷಾಂತರದ ಮಾದರಿಯಾದ ಟೀಕನ್ನು ರಚಿಸುತ್ತಾನೆ. ಈ ರಚನೆಯಲ್ಲಿ ನಡೆವ ಪ್ರಕ್ರಿಯೆ ಭಾಷಾಂತರದ ಪ್ರಕ್ರಿಯೆಯಾಗಿದೆ. ಕೃತಿಗೆ ಅರ್ಥಕೊಡುವ, ಸಂದರ್ಭ ಸೂಚಿಸುವ, ಭಾವಾರ್ಥ ನೀಡುವ, ತಾತ್ಪರ್ಯ ಬರೆಯುವ ಮೂಲಕ ಕೃತಿಯೊಂದನ್ನು ಅಧಿಕೃತಗೊಳಿಸುವ ಒಟ್ಟಾರೆ ಚಟುವಟಿಕೆಗಳು ಭಾಷಾಂತರದ ಚಟುವಟಿಕೆಯೆ ಆಗಿರುವುದು ಕುತೂಹಲಕಾರಿಯಾಗಿದೆ. ಇದರಿಂದಾಗಿ ಟೀಕುಗಳನ್ನು 'ಭಾಷಾಂತರದ ಮಾದರಿ' ಎಂದು ಪರಿಗಣಿಸುವುದು ಔಚಿತ್ಯಪೂರ್ಣ.

ಪಂಪ ರನ್ನರಂತಹ ಕವಿಗಳ ಕಾವ್ಯಗಳನ್ನು 'ಕನ್ನಡೀಕರಣ'ವೆಂದು ಪರಿಗಣಿಸಿದ್ದರ ಕುರಿತು ಪ್ರಸ್ತಾಪಿಸುತ್ತ, ಟೀಕುಗಳು ಅವುಗಳಿಗಿಂತ ಭಿನ್ನಮಾದರಿಯಲ್ಲಿ ಹೇಗೆ ರಚನೆಯಾಗುತ್ತದೆಯೆಂದು ಹೇಳುವ ರವೀಂದ್ರನಾಥ ಅವರು ''ಒಂದು ಕಾಲದ ಸಂಸ್ಕೃತ, ಪ್ರಾಕೃತ ಮೂಲದ ಧಾರ್ಮಿಕ ಗ್ರಂಥಗಳನ್ನು, ಅವುಗಳ ಕೈಪಿಡಿಯಂತಿರುವ ಐತಿಹಾಸ ಪುರಾಣಗಳಾದ ರಾಮಾಯಣ ಮಹಾಭಾರತಗಳಂತಹ ಕಾವ್ಯಗಳನ್ನು ಕನ್ನಡೀಕರಿಸಿದ ಪ್ರಾಚೀನ ಸಾಹಿತ್ಯಕ್ಕಿಂತಲೂ, ಇತ್ತೀಚಿನ ಆಧುನಿಕ ಅನುವಾದ ಕಲೆಗಿಂತಲೂ ಭಿನ್ನವಾಗಿ ಟೀಕಾ ಸಾಹಿತ್ಯ ಸೃಷ್ಟಿಯಾಗಿದೆ. ಇತ್ತ ಭಾಷಾಂತರವೂ ಅಲ್ಲದ, ಅತ್ತ ಅನುವಾದವು ಆಗದ ಇದು ಒಂದು ಕಾವ್ಯವನ್ನು ವಿವರಣ ಹಾಗೂ ವಿವೇಚನೆ ಮುಖಗಳನ್ನು ಜೋಡಿಸಿ ಶಬ್ದಾರ್ಥ, ಭಾವಾರ್ಥಗಳಿಂದ ವಿಶ್ಲೇಷಿಸುವ ಒಂದು ಪ್ರಕಾರ............, ಆದರೆ ಟೀಕಾ ಸಾಹಿತ್ಯ ವಿಮರ್ಶೆಯಂತೆ (Criticism) ಗುಣದೋಷಗಳ ಮೌಲ್ಯಮಾಪನವಾಗದೆ ಒಂದು ಕಾವ್ಯದ Commentary ಆಗುತ್ತದೆ''. (ರವಿಂದ್ರನಾಥ ಕೆ., ೨೦೦೬, ಪು.೪) ಎನ್ನುತ್ತಾರೆ. ಅಧ್ಯಯನಕಾರರು ಟೀಕನ್ನು 'ವಿಮರ್ಶೆ'ಯೆಂದು ಕರೆದಿರುವುದನ್ನು ಪ್ರಶ್ನೆಮಾಡುವ ರವೀಂದ್ರನಾಥ ಅವರು ಅದನ್ನು Commentary ಎಂದು ಕರೆದಿರುವರು.

Commentary ಅಥವಾ (ವೀಕ್ಷಕ) 'ವಿವರಣೆ' ಎಂಬುದು ಭಾಷಾಂತರದ ಚಟುವಟಿಕೆಯೆ ಆಗಿದೆ. ಯಾಕೆಂದರೆ, ಒಂದು ಸ್ಥಳದಲ್ಲಿ ಅಥವಾ ಸಂದರ್ಭದಲ್ಲಿ ನಡೆಯುತ್ತಿರುವ ಸಂಗತಿಯನ್ನು ವಿವರಿಸುವುದು ಇಲ್ಲವೆ ಅದಕ್ಕೆ ವಿವರಣೆ ಕೊಡುವುದು Commentary ಆಗಿರುತ್ತದೆ. ಯಾವುದೆ ಸಂಗತಿ ಅಥವಾ ವಿಚಾರವನ್ನು ಬೇರೊಂದು ಸಂಕೇತಗಳಲ್ಲಿ ವ್ಯಾಖ್ಯಾನಗೊಳಿಸುವುದೆಂದರೆ ಭಾಷಾಂತರ ಮಾಡುವುದೆ ಆಗಿರುತ್ತದೆ. ಇದರಿಂದ Commentary ಎಂದರೆ ಭಾಷಾಂತರವೆ. ಇದನ್ನು ನೇರವಾಗಿ ಹೇಳುವುದಕ್ಕೆ ಬದಲಾಗಿ ರವೀಂದ್ರನಾಥ ಅವರು 'ವಿವರಣೆ' ಎಂದು ಕರೆದಿದ್ದಾರೆ (ರವೀಂದ್ರನಾಥ ೨೦೦೬, ಪುಟ, ೬೫). ಇನ್ನೊಂದೆಡೆ ಟೀಕುಗಳ ಕುರಿತು ಬರೆಯುತ್ತ ''ಟೀಕಾಸಾಹಿತ್ಯ ಒಂದು ಕೃತಿಗೆ ಬರೆದ ಪಾರಿಭಾಷಿಕ ಪದಕೋಶ'' ಎಂದಿರುವುದನ್ನು ಗಮನಿಸಿದರೆ, ಟೀಕುಗಳಲ್ಲಿ ನಡೆವ ಭಾಷಾಂತರ

ಪ್ರಕ್ರಿಯೆಯನ್ನು ಅನುಲಕ್ಷಿಸಿಯೇ ಇದನ್ನು ಗುರುತಿಸಿರಬಹುದು. ಪದಕೋಶ ರಚನೆ ಸಹ ಒಂದು ವಿಧದಿಂದ ಭಾಷಾಂತರ ಕೃತಿಯೆ ಆಗಿದೆ. ಪದಕೋಶದಲ್ಲಿ ಪ್ರತಿಯೊಂದು ಪದಕ್ಕೆ ಅರ್ಥ, ಸಂದರ್ಭ, ವ್ಯಾಕರಣದ ವಿವರಗಳನ್ನು ಕೊಡುವ ಮೂಲಕ ಭಾಷಾಂತರ ಮಾಡಲಾಗುತ್ತದೆ. ಒಂದೊಂದು ಪದಕೋಶವು ಒಂದೊಂದು ಭಾಷಾಂತರ ಕೃತಿಯೂ ಆಗಿದೆ.

ಈ ರೀತಿಯಲ್ಲಿ ಟೀಕುಗಳಲ್ಲಿನ ಭಾಷಾಂತರ ಚಟುವಟಿಕೆಯನ್ನು ಭಿನ್ನ ರೀತಿಯಲ್ಲಿ ಪರಿಭಾವಿಸಿ, ಬೇರೆ ಬೇರೆ ರೀತಿಯಿಂದ ಅವುಗಳನ್ನು ಕರೆದಿರುವುದು ಕಂಡುಬರುತ್ತದೆ. ಆದರೂ ಟೀಕು ಅಥವಾ ವ್ಯಾಖ್ಯಾನಗಳು ತಾತ್ವಿಕವಾಗಿ ಭಾಷಾಂತರವೆ ಆಗಿದೆ.

**೬.೨. ಟೀಕುಗಳ ವಿವಿಧ ಹೆಸರುಗಳು**

ಟೀಕುಗಳ ಕುರಿತಿರುವ ಮಾಹಿತಿಗಳನ್ನು ಗಮನಿಸಿದಾಗ ಟೀಕುಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ಕರೆದಿರುವುದು ಕಂಡುಬರುತ್ತದೆ. ಈ ಎಲ್ಲಾ ಹೆಸರುಗಳು ಟೀಕುಗಳ ರೂಪ, ಸ್ವರೂಪ, ಲಕ್ಷಣ ಇತ್ಯಾದಿಗಳನ್ನು ಅರ್ಥೈಸುವ ಗುಣವನ್ನು ಹೊಂದಿವೆ. ಅದಕ್ಕೆ ಟೀಕುಗಳ ಹೆಸರುಗಳನ್ನು ಈ ಕೆಳಗಿನಂತೆ ಗಮನಿಸಲಾಗಿದೆ.

೧.ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಖ್ಯಾನ, ವಾರ್ತಿಕ, ಅಧಿಕರಣ, ಕೃತಕ, ತಾತ್ಪರ್ಯ, ನಿರ್ಣಯ, ಭಾಷ್ಯಾ, ನ್ಯಾಸ, ಸಟೀಕು, ವೃತ್ತಿ ಎಂಬಿತ್ಯಾದಿ ಹೆಸರುಗಳಿಂದ ಗುರುತಿಸಿದ್ದಾರೆ. ಆದರೆ ಭಾಷ್ಯಾ, ವ್ಯಾಖ್ಯಾನ, ತಾತ್ಪರ್ಯ, ನಿರ್ಣಯಗಳು ಹೆಚ್ಚು ಬಳಕೆಗೊಂಡಿವೆ.

೨. ಪ್ರಾಕೃತ ಭಾಷೆಯಲ್ಲಿ ಟೀಕುಗಳನ್ನು ಚೂರ್ಣ (ಚುಣ್ಣಿ), ನಿರ್ಯುಕ್ತಿ (ನಿಜ್ಜುತ್ತಿ), ಭಾಸ (ಭಾಷ್ಯ), ಪಂಚಿಕೆ (ಪದ್ಧತಿ) ಇತ್ಯಾದಿ ಹೆಸರುಗಳಿಂದ ಕರೆದಿದ್ದಾರೆ.

೩. ಕನ್ನಡ ಸಾಹಿತ್ಯದಲ್ಲಿ ಸಾರ, ಸಾರಾರ್ಥ, ಸಾರಾಮೃತ, ವ್ಯಾಖ್ಯಾನ, ಟಿಪ್ಪಣಿ, ವಚನಾರ್ಥ, ನುಡಿ, ವಚನಾಗಮ, ಭಾವಾರ್ಥ, ಸಂಕಲನ, ಪ್ರವಚನ, ನಿರ್ವಚನ, ವಿವೇಚನ, ಅನ್ವಯ, ದೃಷ್ಟ ಎಂಬ ಹೆಸರುಗಳಲ್ಲಿ ಕರೆದಿದ್ದಾರೆ. (ರವೀಂದ್ರನಾಥ ಕೆ., ೨೦೦೬) ಕನ್ನಡದ ಸಂದರ್ಭದಲ್ಲಿ ಟೀಕು, ವ್ಯಾಖ್ಯಾನ, ತಾತ್ಪರ್ಯ, ಸಟೀಕು ಇತ್ಯಾದಿಗಳು ಹೆಚ್ಚಾಗಿ ಬಳಕೆಗೊಂಡಿವೆ.

ಟೀಕು ಎಂದರೆ ಶಬ್ದಾರ್ಥ ಇಲ್ಲವೆ ಭಾವಾರ್ಥ, ವಿವರಣೆ ಎಂದಾಗುತ್ತದೆ. ಹೆಚ್ಚಾಗಿ ಬಳಕೆಯಾಗಿರುವ ವ್ಯಾಖ್ಯಾನಕ್ಕೆ ವಿಸ್ತಾರವಾಗಿ ಹೇಳುವುದು, ಕೂಲಂಕಷ ವರ್ಣನೆ, ವಿವರಣೆ ಎಂಬ ಅರ್ಥವಿದೆ. ಮೀಮಾಂಸೆಯ ಹಿನ್ನೆಲೆಯಲ್ಲಿ ವಿವರಿಸುವುದಕ್ಕೆ ವ್ಯಾಖ್ಯಾನವೆಂದು ಕರೆದಿರುವ ಸಾಧ್ಯತೆಯಿದೆ. ಸಂಸ್ಕೃತದಲ್ಲಿ ಬಳಕೆಯಾಗುವ ಭಾಷ್ಯಾವೆಂಬುದು ವೇದಾಂತ, ವ್ಯಾಕರಣ ಮೊದಲಾದ ಶಾಸ್ತ್ರಗಳ ಮೂಲಭೂತವಾದ ಸೂತ್ರಗಳ ಅರ್ಥವನ್ನು ವಿವರಿಸುವುದಾಗಿದೆ. ಹಾಗೂ ಸೂತ್ರರೂಪದಲ್ಲಿರುವ ಮೂಲ ಗ್ರಂಥಕ್ಕೆ ಭಾಷ್ಯ ಬರೆಯುವುದಕ್ಕೆ ವೃತ್ತಿ ಎಂದು ಕರೆಯುತ್ತಾರೆ. ಈ ಎಲ್ಲಾ ಅರ್ಥಗಳಿಂದ ತಿಳಿಯುವ ಸಂಗತಿಯೆಂದರೆ, ಕೃತಿಯೊಂದರ ಪದ್ಯ ಅಥವಾ ಗದ್ಯ ಇಲ್ಲವೆ ಸೂತ್ರ, ಶ್ಲೋಕಗಳನ್ನು ವ್ಯಾಖ್ಯಾನಿಸುವ, ಅರ್ಥೈಸುವ, ವಿವರಿಸುವ ಅಥವಾ ತಾತ್ಪರ್ಯ ಬರೆಯುವುದೇ ಟೀಕುಗಳ ಸ್ವರೂಪವಾಗಿದೆ.

ಟೀಕಾಕಾರ ಕೃತಿಯೊಂದನ್ನು ತನ್ನಕಾಲದ ಅರ್ಥ, ಸಂದರ್ಭಗಳಲ್ಲಿ ವ್ಯಾಖ್ಯಾನಿಸುವ ಕೆಲಸವನ್ನು ಟೀಕುಗಳ ಮೂಲಕ ಮಾಡುತ್ತಾನೆ. 'ಮೂಲ'ಕೃತಿಯೊಂದಿಲ್ಲದೆ ಯಾವುದೆ ರೀತಿಯಲ್ಲಿ ಟೀಕು ಅಥವಾ ವ್ಯಾಖ್ಯಾನಗಳು ರಚನೆಗೊಳ್ಳುವ ಸಾಧ್ಯತೆಯೇ ಇಲ್ಲ. ಪ್ರತಿಯೊಂದು ಟೀಕಿಗೂ 'ಮೂಲ' ಎನ್ನುವುದು ಇದ್ದೇ ಇರುತ್ತದೆ. ಭಾಷಾಂತರ ಕೃತಿಗೂ 'ಮೂಲ ಪಠ್ಯ'ವೆಂಬುದು ಇದ್ದು ಅದನ್ನು ಭಾಷಾಂತರ ಮಾಡಿಕೊಳ್ಳಲಾಗುತ್ತದೆ. ಟೀಕುಗಳು ಕೃತಿಯೊಂದರ ಅರ್ಥ, ವ್ಯಾಖ್ಯಾನವನ್ನು ಬರೆಯುವ ಹಾಗೂ 'ಮೂಲ' ಎಂಬುದರೊಂದಿಗೆ 'ಉದ್ದಿಷ್ಟ'ವೆಂಬ ಟೀಕು ರಚನೆಯಾಗುವುದರಿಂದ ಸ್ವರೂಪತಃ ಟೀಕುಗಳು ಭಾಷಾಂತರದ ಮಾದರಿಯಾಗಿದೆ ಎಂಬುದು ಸ್ಪಷ್ಟಗೊಳ್ಳುತ್ತದೆ.

ಭಾಷಾಂತರ ಅಧ್ಯಯನದ ಸಂದರ್ಭದಲ್ಲಿ ಚರ್ಚೆಯಾಗುವ ಭಾಷಾಂತರದ ವಿವಿಧ ಮಾದರಿಗಳಾದ ನೇರ ಭಾಷಾಂತರ, ಭಾವಾನುವಾದ ಮತ್ತು ಸಂಗ್ರಹಾನುವಾದ ಇತ್ಯಾದಿ ಮಾದರಿಗಳನ್ನು ಟೀಕುಗಳ ಸಂದರ್ಭದಲ್ಲಿಯೂ ಗುರುತಿಸಿಕೊಳ್ಳಬಹುದು. ಈ ಗುರುತಿಸುವಿಕೆಯಿಂದ ಟೀಕುಗಳು ಭಾಷಾಂತರದ ಮಾದರಿಯೆನ್ನುವುದು ಇನ್ನೂ ಸ್ಪಷ್ಟವಾಗುತ್ತದೆ. ಟೀಕಾಕಾರರು ಒಂದು ಕೃತಿಗೆ ಟೀಕನ್ನು ಬರೆಯುವಾಗ ಆ ಕೃತಿಯಲ್ಲಿನ ವಿಚಾರ, ವಿಷಯಗಳನ್ನು ತಮ್ಮ ಕಾಲದ ಭಾಷೆಗೆ ನೇರವಾಗಿ ಭಾಷಾಂತರಿಸಿಕೊಳ್ಳುತ್ತಾರೆ. ಹೀಗೆ ಮಾಡುವಾಗ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನ ಕ್ರಮವನ್ನು ಅನುಸರಿಸುವರು. ಇನ್ನೂ ಕೆಲವರು ಟೀಕುಗಳನ್ನು ಭಾವಾನುವಾದದ ಸ್ವರೂಪದಲ್ಲಿ ರೂಪಿಸಿಕೊಳ್ಳುವುದುಂಟು. ಕೃತಿಯಲ್ಲಿನ ವಿಷಯಗಳನ್ನು ಸಂಪೂರ್ಣವಾಗಿ ವ್ಯಾಖ್ಯಾನಿಸಿಕೊಳ್ಳುವ ಬದಲು ಅವಶ್ಯಕವಾದ ವಿಚಾರಣೆಗಳನ್ನು ಭಾವಾನುವಾದ ಮಾಡಿಕೊಳ್ಳುವರು. ಹೀಗೆ ಭಾವಾನುವಾದದ ಸಂದರ್ಭದಲ್ಲಿ ವ್ಯಾಖ್ಯಾನಗಳು ಸಹ ನಡೆದಿರುತ್ತವೆ. ಅನೇಕ ಟೀಕಾಕಾರರು ಒಂದು ಕೃತಿಗೆ ಸಂಪೂರ್ಣವಾಗಿ ತಾತ್ಪರ್ಯ, ವ್ಯಾಖ್ಯಾನ ನೀಡುವುದಕ್ಕೆ ಬದಲಾಗಿ ಅದರ ಕೆಲವು ಭಾಗಗಳನ್ನು ಮಾತ್ರ ಆಯ್ದು, ಸಂಗ್ರಹಿಸಿ ಅದಕ್ಕೆ ಅರ್ಥ, ತಾತ್ಪರ್ಯ, ವಿಶ್ಲೇಷಣೆ ಬರೆದಿರುದುಂಟು. ಈ ಎಲ್ಲಾ ಮಾದರಿಗಳಲ್ಲಿಯೂ 'ಮೂಲ ಪಠ್ಯ' ಒಂದನ್ನು ತನ್ನ ಕಾಲದ ಅರ್ಥ,ಸಂದರ್ಭದಲ್ಲಿ ಮರುರೂಪಿಸಿಕೊಳ್ಳುವ/ಮರುರೂಪಿಸುವ ವಿಶಿಷ್ಟ ಕೆಲಸವು ಟೀಕುಗಳ ರಚನೆಯ ಸಂದರ್ಭದಲ್ಲಿ ನಡೆಯುತ್ತದೆ. ಹೀಗೆ ಕೃತಿಯೊಂದನ್ನು ತನ್ನ ಕಾಲದಲ್ಲಿ ನೇರವಾಗಿ ಅರ್ಥೈಸಿಕೊಳ್ಳುವುದು, ಅಧಿಕೃತಗೊಳಿಸುವುದು ಟೀಕುಗಳ ಮೂಲ ಲಕ್ಷಣ. ಇದರಿಂದಾಗಿ ಟೀಕಾಕಾರರು ತಮ್ಮ ಅನುಭವ, ಪಾಂಡಿತ್ಯದ ಹಿನ್ನೆಲೆಯಲ್ಲಿ ಅಥವಾ ಪಾಂಡಿತ್ಯದ ಭಾಗವಾಗಿ ಈ ಕೆಲಸದಲ್ಲಿ ತೊಡಗಿಕೊಂಡಿರುವ ಸಾಧ್ಯತೆಗಳಿವೆ. ಇದು ಭಾಷಾಂತರ ಪ್ರಕ್ರಿಯೆಯಾದರೂ ಟೀಕಾಕಾರರು ಟೀಕುಗಳ ರಚನೆಯನ್ನು ಭಾಷಾಂತರ ಚಟುವಟಿಕೆಯೆಂದು ಪರಿಭಾವಿಸಿರುವ ಕುರಿತಾಗಲಿ ಅಥವಾ ಪರಿಭಾವಿಸದಿರುವ ಕುರಿತಾಗಲಿ ಯಾವುದೇ ಮಾಹಿತಿಗಳು ಸಿಗಲಾರದು. ಆದರೂ ಟೀಕುಗಳ ಸ್ವರೂಪವನ್ನು ಗಮನಿಸಿದಾಗ ಅದೊಂದು ಭಾಷಾಂತರದ, ವ್ಯಾಖ್ಯಾನದ ಕೆಲಸವೇ ಎಂಬುದು ಅರಿವಾಗುತ್ತದೆ.

ಯಾವುದೇ ಕೃತಿಗೆ ಅರ್ಥ, ಭಾವಾರ್ಥ, ಗದ್ಯಭಾಷಾಂತರ, ವ್ಯಾಖ್ಯಾನ, ವಿವರಣೆ, ತಾತ್ಪರ್ಯ ಬರೆಯುವ ಕೆಲಸವು ಭಾಷಾಂತರವೇ ಆಗಿದೆ. ಆಧುನಿಕ ಸಂದರ್ಭದಲ್ಲಿ ಭಾಷಾಂತರದ ಚರ್ಚೆಗಳು ವಿಸ್ತೃತ ವ್ಯಾಪ್ತಿಯಲ್ಲಿ ನಡೆಯುತ್ತಿದೆ. ನಮ್ಮ ಮಾತು ಸಹ ಒಂದು ರೀತಿಯಿಂದ ಮನದ ಭಾವಗಳ ಭಾಷಾಂತರವೆಂಬುದರಿಂದ ಹಿಡಿದು ಕೃತಿಯೊಂದು ಓದುವ/ನೋಡುವ ನಾಟಕವಾಗಿ ರೂಪುಗೊಳ್ಳುವುದು, ಹಾಗೂ ಚಲನಚಿತ್ರವಾಗುವ ವಿಧಾನ ಸಹ

ಭಾಷಾಂತರವೇ ಆಗಿರುತ್ತದೆ. ಇವುಗಳನ್ನು ಗಮನಿಸಿದಾಗ ಟೀಕುಗಳಲ್ಲಿ ನಡೆಯುವ ಪ್ರಕ್ರಿಯೆ ತಾತ್ವಿಕವಾಗಿ ಭಾಷಾಂತರ ಪ್ರಕ್ರಿಯೆಯೇ ಆಗಿದೆ ಎಂಬುದು ತಿಳಿದುಬರುತ್ತದೆ.

**೬.೩. ಟೀಕುಗಳಲ್ಲಿನ ಭಾಷಾಂತರದ ಎರಡು ವಿಧಗಳು**

ಟೀಕುಗಳ ಸ್ವರೂಪವು ತಾತ್ವಿಕವಾಗಿ ಭಾಷಾಂತರವೆ ಆಗಿರುವಂತೆ, ಭಾಷಾಂತರದ ಹಿನ್ನಲೆಯಲ್ಲಿ ಕೆಲವು ಕುತೂಹಲದ ಸಂಗತಿಗಳನ್ನು ಟೀಕುಗಳಲ್ಲಿ ಗುರುತಿಸಬಹುದು. ಭಾಷಾಂತರದ ಚರ್ಚೆಯ ಸಂದರ್ಭದಲ್ಲಿ ಜಾಕ್‌ಬೆಸ್‌ನ ಗುರುತಿಸಿರುವ ಭಾಷಾಂತರದ ಮೂರು ಮಾದರಿಗಳಲ್ಲಿ ಟೀಕಾಕಾರರು ಎರಡು ವಿಧಗಳಲ್ಲಿ ವ್ಯಾಖ್ಯಾನ, ತಾತ್ಪರ್ಯ ಬರೆದಿರುವುದು ಗಮನಾರ್ಹವಾಗಿದೆ. ಆ ವಿಧಗಳೆಂದರೆ, ಮೊದಲನೆಯದು 'ಅಂತರ್ ಭಾಷಾಂತರ' (Interlingual Translation)ವಾದರೆ, ಎರಡನೆಯದು 'ಆಂತರಿಕ ಭಾಷಾಂತರ' (Intralingual Translation) ಈ ಎರಡೂ ವಿಧಾನಗಳನ್ನು ಮುಂದಿನಂತೆ ಗಮನಿಸಬಹುದು.

**೬.೩.೧. ಅಂತರ್ ಭಾಷಾಂತರ (Interlingual Translation)**

ಒಂದು ಭಾಷೆಯಲ್ಲಿನ ಶಾಬ್ದಿಕ ಸಂಕೇತಗಳನ್ನು ಮತ್ತೊಂದು ಭಾಷೆಯಲ್ಲಿ ವ್ಯಾಖ್ಯಾನಿಸಿಕೊಳ್ಳುವುದು 'ಅಂತರ್ ಭಾಷಾಂತರ'ವಾಗಿದೆ. ಸಾಮಾನ್ಯವಾಗಿ ಕನ್ನಡದ ಸಂದರ್ಭದಲ್ಲಿ ಟೀಕುಗಳ ರಚನೆ ಆರಂಭಗೊಂಡಿರುವುದೆ 'ಅಂತರ್ ಭಾಷಾಂತರ'ದಿಂದ ಎಂಬುದನ್ನು ಗಮನಿಸಬೇಕಾಗಿದೆ. ಸುಮಾರು ಎಂಟು ಒಂಬತ್ತನೆಯ ಶತಮಾನದಲ್ಲಿ ದೇಶ ಭಾಷೆಯಲ್ಲಿ ದೇಶೀಯ ಭಾಷೆಗಳು ತಮ್ಮನ್ನು ತಾವು ಎಲ್ಲಾ ಬಗೆಯ ಅಭಿವ್ಯಕ್ತಿ ಕ್ರಮಗಳಿಗೆ ಸಿದ್ಧಗೊಳಿಸುವ ಪ್ರಯತ್ನದಲ್ಲಿ ವ್ಯಾಖ್ಯಾನಗಳ ಮೂಲಕ 'ಅಂತರ್ ಭಾಷಾಂತರ' ಚಟುವಟಿಕೆಯು ಆರಂಭವಾಯಿತು. ಸಂಸ್ಕೃತ ಭಾಷೆಯಲ್ಲಿರುವ ಸಾಹಿತ್ಯಕ, ಧಾರ್ಮಿಕ/ತಾತ್ವಿಕ ಕೃತಿಗಳಿಗೆ ಕನ್ನಡವೂ ಸೇರಿದಂತೆ ಇತರ ದೇಶೀಯ ಭಾಷೆಯುಗಳಲ್ಲಿ ತಾತ್ಪರ್ಯ, ವ್ಯಾಖ್ಯಾನಗಳನ್ನು ಬರೆಯುವ ಮೂಲಕ ದೇಶೀಯ ಭಾಷೆಯನ್ನು ಸಿದ್ಧಗೊಳಿಸುವ ಪ್ರಯತ್ನಗಳು ನಡೆದವು. ಈ 'ಅಂತರ್ ಭಾಷಾಂತರ' ಪ್ರಕ್ರಿಯೆ ಸಂಸ್ಕೃತ ಮತ್ತು ದೇಶೀಯ ಭಾಷೆಗಳ ನಡುವೆ ನಡೆದ ಅನುಸಂಧಾನವಾಗಿದೆ.

ಕನ್ನಡದಲ್ಲಿ ಬಂದಿರುವ ಟೀಕುಗಳು ಮುಖ್ಯವಾಗಿ ಸಂಸ್ಕೃತ ಭಾಷೆಯ ಕೃತಿಗಳಿಗೆ ಬರೆದವುಗಳಾಗಿವೆ. ಈ ಸಂದರ್ಭದಲ್ಲಿ ಸಂಸ್ಕೃತ ಭಾಷೆಯು ತನ್ನ ವೈಚಾರಿಕ ಆಕೃತಿಯನ್ನು ದೇಶೀಯ ಭಾಷೆಗಳಲ್ಲಿ ಭಾಷಾಂತರಗೊಳ್ಳಲು ಅವಕಾಶ ಕೊಡುವ ಮೂಲಕ ಮರು ಬರವಣಿಗೆಯು ಅನುಸಂಧಾನದ ನೆಲೆಯಲ್ಲಿ ನಡೆಯಿತು. ಈ ಪ್ರಕ್ರಿಯೆಯನ್ನು ಎರಡು ರೀತಿಯಲ್ಲಿ ವಿವರಿಸಿಕೊಳ್ಳಬಹುದು.

**೬.೩.೧.೧. ಕನ್ನಡ ಬಲ್ಲವರಿಗಾಗಿ ಟೀಕುಗಳ ರಚನೆ (ಏಕಭಾಷಿಕರಿಗಾಗಿ)**

ಸಂಸ್ಕೃತದ ಬರಹಗಳಿಗೆ ಕನ್ನಡದಲ್ಲಿ ಅರ್ಥಕೊಡುವ/ಅರ್ಥೈಸುವ ಚಟುವಟಿಕೆ ಇಲ್ಲಿ ಮುಖ್ಯವಾಗಿದೆ. ಕನ್ನಡ ಭಾಷೆಯಲ್ಲಿ ಸಂಸ್ಕೃತದ ಕೃತಿಗಳಿಗೆ ಭಾಷ್ಯ, ತಾತ್ಪರ್ಯ ಮತ್ತು ವ್ಯಾಖ್ಯಾನಗಳನ್ನು ರಚಿಸಿ ಕನ್ನಡದ ಓದಿಗಾಗಿ ಸಂಸ್ಕೃತದ ಕೃತಿಗಳನ್ನು ರೂಪಿಸಲಾಯಿತು. ''ಸಂಸ್ಕೃತ ಭಾಷೆಯಲ್ಲಿರುವುದರಿಂದ ಕೆಲವರಾದ ಮತಾಭಿಮಾನಿಗಳಿಂದ

ಪ್ರೇರಿತನಾಗಿ ಗೀರ್ವಾಣಿ ಭಾಷೆ ಪರಿಚಯವಿಲ್ಲದವರಿಗೂ, ಬಾಲಕರಿಗೂ ಸುಲಭವಾಗಿ ತಿಳಿಯುವಂತೆ ಮೂಲ ಟೀಕು ತಾತ್ಪರ್ಯ ಮತ್ತು ವಿಶೇಷ ವಿಷಯಗಳೊಂದಿಗೆ'' (ಯು.ದ.ಕ. ಶಾಂತರಾಜೈಯ್ಯ, ೧೯೦೦, ಪೀಠಿಕೆ) ಎಂಬ ಮಾತು ಟೀಕುಗಳು ಅಂತರ್ ಭಾಷಾಂತರವಾಗುವ ಉದ್ದೇಶವನ್ನು ಪ್ರಸ್ತಾಪಿಸುವುದರೊಂದಿಗೆ. ''ಬಾಲಕರಿಗೂ ಸುಲಭವಾಗಿ ತಿಳಿಯುವಂತೆ'' ಎಂಬ ಮಾತು ಟೀಕುಗಳು ಕೇವಲ ವಯಸ್ಕರಿಗೆ ಮಾತ್ರವಲ್ಲ, ಬೆಳೆಯುವ ಬಾಲಕರಿಗಾಗಿಯೂ ರಚನೆಯಾಗುತ್ತಿದ್ದವು. ಇದರಿಂದ ಟೀಕುಗಳನ್ನು ಓದುವವರು ಯಾವ, ಯಾವ ವಯಸ್ಸಿನವರು ಮತ್ತು ಇದನ್ನು ಯಾರಿಗಾಗಿ ರೂಪಿಸಲಾಗುತ್ತಿತ್ತು ಎಂಬುದು ತಿಳಿಯುತ್ತದೆ.

ಕನ್ನಡ ಬಲ್ಲವರಿಗಾಗಿ ಸಂಸ್ಕೃತದ ಕೃತಿಗಳನ್ನು ಅರ್ಥೈಸುವಾಗ ಇಲ್ಲಿ ಭಾಷೆ ಮಾತ್ರ ಪ್ರತಿಬಂಧಕವಾಗಿದ್ದಿತು. ಯಾಕೆಂದರೆ ಭಾಷೆ ಭಾಷೆಗಳ ನಡುವೆ ಭಿನ್ನತೆಗಳಿರಬಹುದು ಆದರೆ 'ಸಂಸ್ಕೃತಿ'ಯ ವ್ಯಾಪ್ತಿ ಭಾಷೆಗಳಾಚೆಯದು. ಅಕ್ಕ ಪಕ್ಕದ ಭಾಷೆ ಬರುವುದಿಲ್ಲವೆಂದರೆ ಆ ಭಾಷೆಯ ಸಂಸ್ಕೃತಿ ಅಪರಿಚಿತವೆಂತಲ್ಲ. ಹಾಗೇ ಕನ್ನಡಿಗರಿಗೆ ಸಂಸ್ಕೃತ ಬಾರದ ಕಾರಣ ಸಂಸ್ಕೃತದ ಸಾಂಸ್ಕೃತಿಕ ಚಹರೆಯ ಪರಿಚಯವಿಲ್ಲ ಎನ್ನಲಾಗದು. ಸಂಸ್ಕೃತಿ ಭಾಷೆಯನ್ನು ಮೀರಿಯೂ ಬರಬಲ್ಲುದು. ಸಂಸ್ಕೃತದ ಕೃತಿಗಳನ್ನು ಕನ್ನಡಕ್ಕೆ ವ್ಯಾಖ್ಯಾನಿಸುವಾಗ ಅಲ್ಲಿ ಭಾಷೆ ಮಾತ್ರ ಪ್ರತಿಬಂಧಕ ಆದರೆ ಸಂಸ್ಕೃತಿ ಅದನ್ನು ಮೀರಿಬರಬಲ್ಲುದು. ಇದನ್ನು ಶ್ರೀಕಂಠೇಶಗೌಡರು ಹೀಗೆ ಹೇಳುತ್ತಾರೆ. ''ಮೂಲ ಗ್ರಂಥವನ್ನು ಸಂಸ್ಕೃತದಲ್ಲಿ ಹೇಳಿದವರು ಯಾವ ಜನರು, ಯಾವ ದೇಶದಲ್ಲಿ, ಯಾವ ಜನಗಳ ಮಧ್ಯದಲ್ಲಿ, ಯಾವ ಪದಾರ್ಥ, ಯಾವ ವಿಷಯಗಳನ್ನು ಕುರಿತು, ಯಾವ ರೀತಿ, ಯಾವ ಬೆಟ್ಟಗುಡ್ಡಗಳಲ್ಲಿ, ಯಾವ ನದಿ ತಟದಲ್ಲಿ, ಯಾವ ವನಾಂತರಗಳಲ್ಲಿ, ಯಾವ ಋತು ಭೇದಗಳಲ್ಲಿ..... ಸಂಸ್ಕೃತದಲ್ಲಿರತಕ್ಕ ಪುರಾಣ, ಇತಿಹಾಸ, ನ್ಯಾಯ ಮತ್ತು ಆಚಾರ ವ್ಯವಹಾರಗಳೂ ಕನ್ನಡಿಗರದಾಗೇ ಇರುತ್ತವೆ'' (ಶ್ರೀಕಂಠೇಶಗೌಡ, ೧೮೯೫, ಪೀಠಿಕೆ. ೫). ಎಂದು ಇವುಗಳ ಕುರಿತು ನೇರವಾಗಿ ವಿವರ ಕೊಟ್ಟರೆ ಸಾಕಿತ್ತು. ಧರ್ಮ/ತಾತ್ವಿಕ, ದಾರ್ಶನಿಕ ವಿಚಾರಗಳು ಬಂದಾಗ ಅವುಗಳನ್ನು ಕನ್ನಡದಲ್ಲಿ ವ್ಯಾಖ್ಯಾನಿಸಲಾಗುತ್ತಿತ್ತು. ಈ ರೀತಿ ಮೂಲ ಪಾಠ, ಅದಕ್ಕೆ ಕನ್ನಡದಲ್ಲಿ ಅರ್ಥ ಹಾಗೂ ತಾತ್ಪರ್ಯ ಬರೆಯುವ ಪ್ರಕ್ರಿಯೆ ಟೀಕುಗಳ ಸಂದರ್ಭದಲ್ಲಿ ನಡೆದಿದೆ. ಇಲ್ಲಿ ಸಂಸ್ಕೃತದ ಕೃತಿಗಳನ್ನು ಕನ್ನಡದ ಓದಿಗೆ ಸಿದ್ಧಗೊಳಿಸುವುದು ಭಾಷಾಂತರಿಸುವುದು ಮುಖ್ಯವಾಗಿತ್ತು.

**೬.೩.೧.೨. ಸಂಸ್ಕೃತವನ್ನು/ಮೂಲವನ್ನು ಬಲ್ಲವರಿಗಾಗಿ ಟೀಕುಗಳ ರಚನೆ (ದ್ವಿ/ಬಹುಭಾಷಿಕರಿಗಾಗಿ)**

ಕೇವಲ ಕನ್ನಡ ಬಲ್ಲವರಿಗಾಗಿ ಟೀಕುಗಳನ್ನು ರಚಿಸಲು ಗಮನಹರಿಸಿದಂತೆ ಸಂಸ್ಕೃತದ ಕೆಲವು ಕೃತಿಗಳಿಗೆ ಟೀಕು ಅಥವಾ ವ್ಯಾಖ್ಯಾನ ಬರೆಯುವುದು ವಿದ್ವತ್ತಿನ ಪ್ರಶ್ನೆಯೂ ಆಗಿತ್ತು. ಇದರಿಂದಾಗಿ ತಮ್ಮ ಪಾಂಡಿತ್ಯ/ವಿದ್ವತ್ ಪ್ರತಿಭೆಯನ್ನು ವಿದ್ವತ್ ಮಂಡಳಿಯ ಮುಂದೆ ಸಾದರಪಡಿಸುವ ಉದ್ದೇಶದಿಂದಲೂ ಟೀಕುಗಳನ್ನು ರಚಿಸಲಾಗಿದೆ. ಶಂಕರರ ತತ್ವ, ವಾತ್ಸಾಯನ ಸೂತ್ರ, ರಾಮಾನುಜರ ಶ್ರೀಭಾಷ್ಯ, ವೈಶೇಷಿಕ ಸೂತ್ರಗಳಿಗೆ ವ್ಯಾಖ್ಯಾನ ರಚಿಸುವುದು ಪಾಂಡಿತ್ಯದ ಪ್ರಶ್ನೆಯಾಗಿತ್ತು. ಟೀಕಾಕಾರರು ಇಂತಹ ಕೃತಿಗಳಿಗೆ ವ್ಯಾಖ್ಯಾನ ಬರೆಯುವ ಮೂಲಕ ತಮ್ಮ ಪಾಂಡಿತ್ಯವನ್ನು ಪ್ರಕಟಿಸಿದ್ದಾರೆ. ಈ ಚಟುವಟಿಕೆ ಸಂಸ್ಕೃತ ಬಲ್ಲವರಿಗಾಗಿ ದ್ವಿಭಾಷಿಕರಿಗಾಗಿ ನಡೆದಿರುವುದೇ ಹೆಚ್ಚು.

ಸಂಸ್ಕೃತದ ಕೃತಿಗಳಿಗೆ ಕನ್ನಡದಲ್ಲಿ ತಾತ್ಪರ್ಯ ರಚಿಸಿ ಪಂಡಿತರೆದುರಿಗೆ ಪ್ರತಿಭೆಯನ್ನು ಒರೆಹಚ್ಚುವ ಈ ಕ್ರಮ ವಿಶಿಷ್ಟವಾದುದಾಗಿದೆ.

ಹೀಗೆ ಅಂತರ್ ಭಾಷಾಂತರವು ಎರಡು ಮಾದರಿಯಲ್ಲಿ ರೂಪುಗೊಂಡಿದೆ. ಸಂಸ್ಕೃತದ ಕೃತಿಗಳಿಗೆ ಕನ್ನಡದ ಸಂದರ್ಭದಲ್ಲಿ ಅರ್ಥಕೊಡುವ, ವ್ಯಾಖ್ಯಾನಿಸುವ ಮೂಲಕ ಕೃತಿಯನ್ನು ಪುನರ್ ರೂಪಿಸುವ ಕೆಲಸಗಳು ನಡೆದವು. ಇಂತಹ ಪ್ರಕ್ರಿಯೆಯಲ್ಲಿ ಧಾರ್ಮಿಕ/ತಾತ್ವಿಕ ಕೃತಿಗಳೊಂದಿಗೆ ಶಾಸ್ತ್ರ, ವೈದ್ಯಕೀಯ ಇತ್ಯಾದಿ ಕೃತಿಗಳು ಇವೆ. ಉದಾಹರಣೆಗೆ ಜ್ಞಾನಯೋಗ ತರಂಗಿಣಿ ಟೀಕು - ಭಾಗವತ ಕೃಷ್ಣಸ್ವಾಮಿ (?) ಶುದ್ಧಾದ್ವೈತದರ್ಶಿನಕೆ - ವಿಠಲದಾಸರ ವ್ಯಾಖ್ಯಾನ (?), ಮನುಸ್ಮೃತಿ ಕನ್ನಡ ಟೀಕೆ - ಭಾಗವತ ಕೃಷ್ಣಾಜೀ ಬಿಷೆ, (೧೮೮೮), ವೈದ್ಯತತ್ವ ನಿರ್ಣಯ ಸಾಗರ ಭಾಗ - ೧ (೧೯೦೭), ಪುರುಷ ಸೂಕ್ತ - ಚನ್ನವೀರ ಮಹೇಶ್ವರ (೧೯೦೯) ಇತ್ಯಾದಿಗಳು.

**೬.೩..೨. ಆಂತರಿಕ ಭಾಷಾಂತರ (Intralingual Translation)**

ಒಂದು ಭಾಷೆಯಲ್ಲಿರುವ ಶಾಬ್ದಿಕ ಸಂಕೇತಗಳನ್ನು ಅದೇ ಭಾಷೆಯ ಮತ್ತೊಂದು ಸಂಕೇತಗಳಿಂದ ಬರೆಯುವುದನ್ನು ಅಥವಾ ವ್ಯಾಖ್ಯಾನಿಸುವುದನ್ನು 'ಆಂತರಿಕ ಭಾಷಾಂತರ' ಎನ್ನಲಾಗುತ್ತದೆ. ಅಂದರೆ ಒಂದೇ ಭಾಷೆಯ ಒಳಗೆ ನಡೆಯುವ ಪ್ರಕ್ರಿಯೆ ಇದಾಗಿದೆ. ಕನ್ನಡದ ಸಂದರ್ಭದಲ್ಲಿನ ಟೀಕುಗಳ ಒಟ್ಟು ಪ್ರಮಾಣದಲ್ಲಿ ಆಂತರಿಕ ಭಾಷಾಂತರದಿಂದ ಬಂದ ಟೀಕುಗಳೆ ಹೆಚ್ಚು. ಈ ಭಾಷಾಂತರ ಪ್ರಕ್ರಿಯೆ ಸುಮಾರು ೧೩, ೧೪ನೇ ಶತಮಾನದಲ್ಲಿ ವಚನ, ಶತಕಗಳಿಗೆ ಕನ್ನಡಲ್ಲಿಯೇ ಟೀಕು ವ್ಯಾಖ್ಯಾನ ಬರೆಯಲು ಪ್ರಾರಂಭಿಸಿದಲ್ಲಿಂದ ಚಾಲ್ತಿಗೆ ಬಂದಿರುವ ಸಾಧ್ಯತೆಯಿದೆ.

ಸಾಹಿತ್ಯ ಅಧ್ಯಯನಕಾರರು ೧೨ನೇ ಶತಮಾನದಲ್ಲಿ ರೂಪುಗೊಂಡ ವಚನ ಸಾಹಿತ್ಯವನ್ನು ಸರಳಗನ್ನಡ, ಅಚ್ಚಗನ್ನಡ ಎಂದೆಲ್ಲಾ ಕರೆದಿದ್ದಾರೆ. ವಚನಗಳು ಸಾಮಾನ್ಯರಿಗೂ ಅರ್ಥವಾಗುವ ಸರಳ ಭಾಷೆಯಲ್ಲಿ ರಚನೆಗೊಂಡವು ಎಂಬ ತೀರ್ಮಾನಗಳು ಸಹ ಇವೆ. ಇಂತಹ ಅಚ್ಚಗನ್ನಡದ ಕೃತಿಗಳು ಮತ್ತೆ ಕನ್ನಡದಲ್ಲಿ ವ್ಯಾಖ್ಯಾನಗೊಂಡಿರುವುದು ಕುತೂಹಲಕಾರಿಯಾಗಿದೆ. ಟೀಕಾಕಾರರು ಕನ್ನಡದಲ್ಲಿ ರಚನೆಗೊಂಡ ಧಾರ್ಮಿಕ/ತಾತ್ವಿಕ ಹಾಗೂ ಸಾಹಿತ್ಯಕ ಕೃತಿಗಳಿಗೆ ಮತ್ತೆ ಕನ್ನಡದಲ್ಲಿಯೇ ವ್ಯಾಖ್ಯಾನ ತಾತ್ಪರ್ಯಗಳನ್ನು ಬರೆಯುವ ಮೂಲಕ ಅರ್ಥೈಸಿಕೊಳ್ಳಲು ತಮ್ಮ ಕಾಲದ ಅರ್ಥಗಳನ್ನು, ತಮ್ಮ ಅಗತ್ಯದ ಅರ್ಥಗಳನ್ನು ಕೊಡಲು ಪ್ರಯತ್ನಿಸಿದರು. ಒಂದೇ ಭಾಷೆಯ ಒಳಗೆ ನಡೆಯುವ ಈ ಪ್ರಕ್ರಿಯೆ ಆಂತರಿಕ ಭಾಷಾಂತರದ ಉಲ್ಲೇಖಾರ್ಹ ಮಾದರಿ.

ಟೀಕುಗಳ ಕುರಿತು ಬಂದ ಈವರೆಗಿನ ಅಧ್ಯಯನಗಳು ಟೀಕುಗಳು 'ಸಾಮಾನ್ಯರಿ'ಗಾಗಿ ರಚನೆಗೊಂಡಿವೆ ಎಂದು ಪರಿಭಾವಿಸಿರುವುದನ್ನು ಗಮನಿಸಿದಾಗ, ಈ 'ಸಾಮಾನ್ಯರು' ಯಾರು? ಭಾಷಿಕವಾಗಿ ಸಾಮಾನ್ಯರೆ ಅಥವಾ ಅನಕ್ಷರಸ್ಥರೆ! ಇಲ್ಲಾ ಜ್ಞಾನದ ದೃಷ್ಟಿಯಿಂದ ಸಾಮಾನ್ಯರೆ ಎಂಬುದು ಸಂಪೂರ್ಣವಾಗಿ ತಿಳಿಯುವುದಿಲ್ಲ. ಆದ್ದರಿಂದ ಕನ್ನಡದ ಕೃತಿಯು ಮತ್ತೆ ಕನ್ನಡದಲ್ಲಿಯೇ ವ್ಯಾಖ್ಯಾನಗೊಳ್ಳುವುದು ಕೇವಲ ಸಾಮಾನ್ಯರಿಗೆ ಎಂಬ ಉದ್ದೇಶಕ್ಕಿಂತಲೂ ಅದರಾಚೆಗೆ ಬೇರೇನೊ ಇರುವುದನ್ನು ಗುರುತಿಸಲು ಪ್ರಯತ್ನಿಸಬೇಕು. ಮುಂದೆ ಈ ಚರ್ಚೆಯನ್ನು ಮಾಡಲಾಗುವುದು.

ಈ ಮೊದಲೆ ರಚನೆಗೊಂಡು ತಮ್ಮ ಸಮಕಾಲೀನ ಅರ್ಥ, ಸ್ವರೂಪವನ್ನು ಪಡೆದುಕೊಂಡ ಕನ್ನಡದ ಕೃತಿಗಳಿಗೆ ವ್ಯಾಖ್ಯಾನಕಾರರು ತಮ್ಮ ಕಾಲದ ಅಗತ್ಯ, ಉದ್ದೇಶಗಳಿಗನುಸಾರವಾಗಿ ಅರ್ಥಕೊಡುವ ಹಾಗೂ ಅರ್ಥವನ್ನು ನಿರ್ದಿಷ್ಟಗೊಳಿಸುವ ಕೆಲಸವನ್ನು ಮಾಡಿದ್ದಾರೆ. ಇಲ್ಲಿ ಕನ್ನಡದ ಕೃತಿಗಳು ಕನ್ನಡದಲ್ಲಿಯೇ ಟೀಕಾಕಾರನ ಸಂದರ್ಭದ ಅರ್ಥ, ಭಾವಾನುವಾದ, ತಾತ್ಪರ್ಯಗಳನ್ನು ಹೊಂದಿವೆ. ಈ ಪ್ರಕ್ರಿಯೆ ಒಂದೇ ಭಾಷೆಯ ಒಳಗೆ ನಡೆಯುವುದರಿಂದ 'ಆಂತರಿಕ ಭಾಷಾಂತರ'ವೆಂದು ಗುರುತಿಸಲಾಗಿದೆ. ಹೀಗೆ ಟೀಕಾಕಾರರು ಭಾಷೆಯ ಒಳಗೆ ಈ ಬಗೆಯಲ್ಲಿ ಆಂತರಿಕ ಭಾಷಾಂತರ ಚಟುವಟಿಕೆಯನ್ನು ಕೈಗೊಂಡಿರುವುದು ವಿಶೇಷವಾಗಿದೆ.

ವಚನಗಳಿಗೆ ಬರೆದ ಈ ಆಂತರಿಕ ಭಾಷಾಂತರದ ಮಾದರಿಯ ಟೀಕುಗಳು ವೀರಶೈವ ಧರ್ಮವನ್ನು ರೂಪಿಸುವ ಭಾಗವಾಗಿಯೂ ನಡೆದಿವೆ. ವಚನ ಹಾಗೂ ಇತರ ವೀರಶೈವ ಸಂಬಂಧಿ ಕೃತಿಗಳಿಗೆ ಹೆಚ್ಚೆಚ್ಚು ಟೀಕುಗಳನ್ನು ಬರೆಯುವ ಮೂಲಕ ಅವುಗಳಿಗೆ ಪ್ರಮಾಣೀಕರಣದ, ಅಧಿಕೃತತೆಯ ಸ್ವರೂಪವನ್ನು ಕೊಡುವ ಪ್ರಯತ್ನಗಳು ನಡೆದವು. ಒಂದು ಕೃತಿ ಒಂದಕ್ಕಿಂತ ಹೆಚ್ಚು ತಾತ್ಪರ್ಯ ಪಡೆದುಕೊಂಡಿರುವುದು ಹಾಗೂ ಟೀಕಿನ ಮಠಗಳೇ ಹುಟ್ಟಿಕೊಂಡಿರುವುದು ಇದನ್ನು ಸಮರ್ಥಿಸುತ್ತದೆ. ಈ ಪ್ರಕ್ರಿಯೆ ಆಧುನಿಕ (೧೯ನೇ ಶತಮಾನದ ನಂತರ) ಸಂದರ್ಭದಲ್ಲಿ ಇನ್ನೂ ಭಿನ್ನವಾಗಿ ರೂಪುಗೊಂಡಿದೆ.

ಇವುಗಳೊಂದಿಗೆ ಕೆಲವು ಟೀಕುಗಳು ಅಂತರ ಮತ್ತು ಆಂತರಿಕ ಪಠ್ಯಗಳೆರಡನ್ನೂ ಆಧರಿಸಿ ನಡೆದವಾಗಿವೆ.

**ಉದಾ:** ಬಹುಭಾಷಾ ವಿದ್ವಾಂಸರು ಬಹುಮೂಲಗಳನ್ನು ಪರಿಭಾವಿಸಿ ಮಾಡಿದ ಟೀಕುಗಳು

ಹೀಗೆ ಭಾಷೆಯ ಒಳಗೆ ನಡೆಯುವ ಈ ಆಂತರಿಕ ಭಾಷಾಂತರದ ಸಂದರ್ಭದಲ್ಲಿ ಟೀಕುಗಳ ರಚನೆ ಬಗ್ಗೆ ಗಮನಿಸಬೇಕು. ಭಾಷೆಯ ಒಳಗೆ ನಡೆಯುವ ಈ ಪ್ರಕ್ರಿಯೆಯ ಕುರಿತು ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಾಗಿದೆ.

ಆಧುನಿಕ ಸಂದರ್ಭದಲ್ಲಿ ಚರ್ಚಿಸುತ್ತಿರುವ 'ಅಂತರ್ ಭಾಷಾಂತರ' (Interlingual Translation) ಮತ್ತು 'ಆಂತರಿಕ ಭಾಷಾಂತರ' (Intralingual Translation)ಗಳ ಮಾದರಿಯನ್ನು ವ್ಯಾಖ್ಯಾನಕಾರರು ಆಧುನಿಕ ಪೂರ್ವದಲ್ಲಿಯೇ ಗುರುತಿಸಿಕೊಂಡು, ಈ ಚಟುವಟಿಕೆಯಲ್ಲಿ ತೊಡಗಿಕೊಂಡಿರುವುದು ಕುತೂಹಲಕಾರಿಯಾಗಿದೆ. ಸೂಕ್ಷ್ಮವಾಗಿ ಗಮನಿಸಿದರೆ ಇಂದು ನಾವು ಭಾಷಾಂತರ ಅಧ್ಯಯನ ಸಂದರ್ಭದಲ್ಲಿ ಚರ್ಚಿಸುತ್ತಿರುವ ಹಲವಾರು ಸಂಗತಿಗಳು ಟೀಕು, ವ್ಯಾಖ್ಯಾನಗಳಲ್ಲಿಯೇ ಕಾಣಸಿಗುತ್ತವೆ. ತಮ್ಮ ಈ ಚಟುವಟಿಕೆಯನ್ನು ಭಾಷಾಂತರ ಕೆಲಸವೆಂದು ಪರಿಭಾವಿಸದಿದ್ದರೂ ಟೀಕು, ವ್ಯಾಖ್ಯಾನ, ತಾತ್ಪರ್ಯಗಳನ್ನು ರಚಿಸುವ ಮೂಲಕ ಭಾಷಾಂತರದ ಕೆಲಸವನ್ನು ತಮ್ಮದೇ ಆದ ಕ್ರಮದಲ್ಲಿ ಮುನ್ನೆಡೆಸಿದ್ದಾರೆ. ಈ ಎಲ್ಲವುಗಳನ್ನು ಗಮನದಲ್ಲಿರಿಸಿಕೊಂಡು ಟೀಕುಗಳು ಭಾಷಾಂತರ ಅಧ್ಯಯನದ ಹಿನ್ನೆಲೆಯಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಗಾಗಬೇಕಾದ ಹಾಗೂ ಈ ಕುರಿತಾದ ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ.

## ೬.೪. ಟೀಕುಗಳಲ್ಲಿ ಕಂಡುಬರುವ 'ಗುಂಪುಭಾಷಾಂತರ' ಮತ್ತು 'ಸಹಭಾಷಾಂತರ' ಪರಿಕಲ್ಪನೆ

**(Group Translation and Co-Translator)**

ಕಳೆದ ಎರಡು ದಶಕಗಳಿಂದೀಚೆಗೆ ಭಾಷಾಂತರದ ಗುಣಮಟ್ಟದ ಕುರಿತು ಹೆಚ್ಚು ಚರ್ಚೆಗಳು ನಡೆಯುತ್ತಿವೆ. ಇದರಲ್ಲಿ ಭಾಷಾಂತರವನ್ನು ಸಮರ್ಪಕಗೊಳಿಸುವ ಕುರಿತು ಬೇರೆ ಬೇರೆ ಆಯಾಮಗಳ ಮೂಲಕ ಚರ್ಚೆಗಳು ನಡೆಯುತ್ತಿವೆ. ಹೀಗಾಗಿ ಹಲವು ಹೊಸ ಪರಿಕಲ್ಪನೆಗಳು ಭಾಷಾಂತರ ಪ್ರಕ್ರಿಯೆಯಲ್ಲಿ ಪ್ರಯೋಗಗೊಂಡು ಬಳಕೆಯಾಗುತ್ತಿವೆ. ಇದರಲ್ಲಿ Group Translation ಮತ್ತು Co-Translator ಹೆಚ್ಚಾಗಿ ಚಾಲ್ತಿಯಲ್ಲಿವೆ. ಈ ಪ್ರಯೋಗವನ್ನು ಆಧುನಿಕ ಪೂರ್ವದಲ್ಲಿಯೆ ಟೀಕಾಕಾರರು ಮಾಡಿರುವುದು ಗಮನಿಸಬೇಕಾದ ಅಂಶ.

ಇತ್ತೀಚೆಗೆ ಭಾಷಾಂತರವನ್ನು ಉತ್ತಮಪಡಿಸುವ ಹಿನ್ನೆಲೆಯಲ್ಲಿ ಈ ಪರಿಕಲ್ಪನೆಯನ್ನು ಬಳಸಲಾಗುತ್ತಿದೆ. ಕೆಲವು ಸಂಘ, ಸಂಸ್ಥೆಗಳು ಹಾಗೂ ಪ್ರಕಾಶನಗಳೂ ಇವುಗಳಲ್ಲಿ ತೊಡಗಿಕೊಂಡಿವೆ. 'Group Translation' ಎಂದರೆ ಒಂದು ಕೃತಿಯನ್ನು ಬೇರೊಂದು ಭಾಷೆಗೆ ಭಾಷಾಂತರಿಸುವಾಗ ಒಬ್ಬ ವಿಷಯ ತಜ್ಞರು, ಕೆಲವು ಭಾಷಾ ತಜ್ಞರು ಮತ್ತು ಭಾಷಾಂತರ ಸಿದ್ಧಾಂತಿಗಳೆಲ್ಲ ಸೇರಿ ಭಾಷಾಂತರ ಮಾಡುವುದುದಾಗಿದ್ದು, ಭಾಷಾಂತರ ಎನ್ನುವುದನ್ನು 'ಟೀಮ್‌ವರ್ಕ್' ಆಗಿ ರೂಪಿಸಲಾಗುತ್ತಿದೆ. ಇಲ್ಲಿ ಭಾಷಾಂತರ ಮಾಡುವವರ ಒಂದು ಗುಂಪೆ ಈ ಪ್ರಕ್ರಿಯೆಯಲ್ಲಿ ಭಾಗಿಯಾಗಿರುವುದರಿಂದ Group Translation ಎಂದು ಕರೆಯಲಾಗುತ್ತದೆ. ಕೆಲವೊಂದು ವಿಶ್ವವಿದ್ಯಾಲಯಗಳು ಹಾಗೂ ಪ್ರಕಾಶನ ಸಂಸ್ಥೆಗಳು ಈ ಭಾಷಾಂತರ ಪರಿಕಲ್ಪನೆಯನ್ನು ಬಳಸಿಕೊಂಡಿರುವುದುಂಟು. ಉದಾಹರಣೆ ನ್ಯಾಶನಲ್ ಬುಕ್ ಟ್ರಸ್ಟ್ ದೆಹಲಿ ಕೆಲವು ಕೃತಿಗಳನ್ನು ಈ ರೀತಿಯಲ್ಲಿ ಭಾಷಾಂತರಿಸಿದರೆ, ಕನ್ನಡ ವಿಶ್ವವಿದ್ಯಾಲಯ ಭಾಷಾಂತರಕಾರರ ಒಂದು ಗುಂಪನ್ನು ಬಳಸಿಕೊಂಡು ವಚನಗಳನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿ ಪ್ರಕಟಿಸಿದೆ. ಭಾಷಾಂತರದ ಗುಣಮಟ್ಟದ ಸುಧಾರಣೆಯ ದೃಷ್ಟಿಯಿಂದ ಈ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಭಾಷಾಂತರಗಳು ನಡೆಯುತ್ತಿವೆ.

ಇನ್ನು Co-Translator ಇದಕ್ಕಿಂತ ಸ್ವಲ್ಪ ಭಿನ್ನವಾದುದು. ಒಬ್ಬ ಭಾಷಾಂತರಕಾರ ಒಂದು ಕೃತಿಯನ್ನು ಭಾಷಾಂತರಿಸುವಾಗ ಸ್ವತಃ ತಾನೇ ಅದನ್ನು ಭಾಷಾಂತರ ಮಾಡುವುದರೊಂದಿಗೆ ಒಂದು ಕೃತಿಯ ವಿಷಯ ಅಥವಾ ಭಾಷೆಯ ಪರಿಣಿತರ ಜೊತೆ ಸೇರಿ ಭಾಷಾಂತರ ಮಾಡುವುದು Co-Translator ಆಗಿದೆ. ***ಹಾವಿನ ಡೊಂಕು,*** ಟೋರ್‌ಗ್ನಿ ಲಿಂಡ್‌ಗ್ರೆಯನ್, ಅನುವಾದ ವನಮಾಲಾ ವಿಶ್ವನಾಥ ಹಾನ್ಸ್ ಉ ಹೊಯ್‌ಸ್ಮಾಮ (ಸಾಹಿತ್ಯ ಅಕಾಡೆಮಿ ೨೦೦೨). ಕೆಲವು ಕೃತಿಗಳಲ್ಲಿ ಸಹಾಯ ನೀಡಿದವರ ಹೆಸರನ್ನು ನಮೂದಿಸದಿದ್ದರೂ ಮುನ್ನುಡಿಯಲ್ಲಿ ಇಂಥವರಿಂದ ಈ ಬಗೆಯ ಸಹಾಯ ಪಡೆದಿದ್ದೇನೆ ಎಂದು ಹೇಳಿರುತ್ತಾರೆ. ಈ ರೀತಿಯ ಭಾಷಾಂತರ ಇತ್ತೀಚಿಗೆ ಹೆಚ್ಚಾಗಿ ನಡೆಯುತ್ತಿದೆ.

ಟೀಕುಗಳನ್ನು ಭಾಷಾಂತರದ ಹಿನ್ನೆಲೆಯಲ್ಲಿ ಗಮನಿಸಿದಾಗ Group Translation ಮತ್ತು Co-Translator ಪರಿಕಲ್ಪನೆ ಕೇವಲ ಇಂದು ನಿನ್ನೆಯದಲ್ಲ, ಬಹು ಹಿಂದಿನಿಂದಲೂ ಚಾಲ್ತಿಯಲ್ಲಿರುವುದು ತಿಳಿದು ಬರುತ್ತದೆ. ಆಧುನಿಕ ಅವಧಿಯಲ್ಲಿ ಭಾಷಾಂತರವನ್ನು ಉತ್ತಮಗೊಳಿಸುವ ಹಿನ್ನೆಲೆಯಲ್ಲಿ ಬಂದಿರುವ ಈ ಪರಿಕಲ್ಪನೆಯನ್ನು

ವ್ಯಾಖ್ಯಾನಕಾರರು ಸುಮಾರು ೧೪-೧೫ನೇ ಶತಮಾನದಲ್ಲಿಯೇ ಬಳಸಿಕೊಂಡಿರುವುದು ಟೀಕುಗಳು ಭಾಷಾಂತರದ ಮಾದರಿಯೆಂಬುದಕ್ಕೆ ಪರಿಕಲ್ಪನಾತ್ಮಕ ಸಮರ್ಥನೆ ನೀಡುತ್ತದೆ. ಒಬ್ಬ ಟೀಕಾಕಾರ ಒಂದು ಅಥವಾ ಒಂದಕ್ಕಿಂತ ಹೆಚ್ಚು ಕೃತಿಗಳಿಗೆ ತಾತ್ಪರ್ಯ ಬರೆದಿರುವಂತೆ ಹಲವರು ಸೇರಿ ಒಂದು ಕೃತಿಯನ್ನು ಕನ್ನಡದ ಸಂದರ್ಭದಲ್ಲಿ ವ್ಯಾಖ್ಯಾನಿಸಿರುವುದು ಗಮನಾರ್ಹವಾಗಿದೆ. ಈ ಕ್ರಮ ಅಥವಾ ವಿಧಾನ ಉತ್ತಮ ಉದಾಹರಣೆ. ಈ ಬಗೆಯಲ್ಲಿ ಆಧುನಿಕ ಪೂರ್ವದಲ್ಲಿ ಬಂದಿರುವ Group Translation ಮತ್ತು Co-Translator ಮಾದರಿಯ ಟೀಕುಗಳನ್ನು ಈ ಕೆಳಗಿನಂತೆ ಗಮನಿಸಬಹುದು.

| | | |
|---|---|---|
| ೧. ಬಸವಣ್ಣನ ವಚನಗಳಿಗೆ ಟೀಕೆ (?) | - | ನಿರಂಜನ, ಗುರುಬಸವರಾಜ, ಸೋಮಶೇಖರ ಶಿವಯೋಗಿ ಹಾಗೂ ಅನಾಮಿಕ |
| ೨. ಬಸವಣ್ಣನವರ ಹಿರಿಯ ಮಂತ್ರಗೋಪ್ಯಕ್ಕೆ ಟೀಕು (?) | - | ವಿರಕ್ತ ಲೋಂಟದಾರ್ಯ, ಮತ್ತು ಅನಾಮಧೇಯರೀರ್ವರು ಸೇರಿ ಟೀಕನ್ನು ಬರೆದಿದ್ದಾರೆ. |
| ೩. ಜಕ್ಕಣನ ಏಕೋತ್ತರ ಶಟ್‌ಸ್ಥಲಕ್ಕೆ ಟೀಕು (?) | - | ಚನ್ನವೀರದೇವ, ವಿರಕ್ತ ತೋಂಟದಾರ್ಯ ಹಾಗೂ ನಾಲ್ವರು ಅನಾಮಿಕರು ಸೇರಿ ವ್ಯಾಖ್ಯಾನ ರಚಿಸಿದ್ದಾರೆ. |
| ೪. ಏಕೋತ್ತರ ಶಟಸ್ಥಲಾಮೃತಕ್ಕೆ ಟೀಕು (೧೪೪೭) | - | ನಂಜುಂಡ ಹಾಗೂ ಇಬ್ಬರು ಅನಾಮಧೇಯರು ಟೀಕನ್ನು ಬರೆದಿದ್ದಾರೆ. |
| ೫. ಚನ್ನಬಸವಣ್ಣನ ಕರಣಹಾಸಿಗೆಗೆ ಟೀಕು (?) | - | ದೇಶಿಕ ಚನ್ನವೀರಾದ್ಯ ಮತ್ತು ಮೂವರು ಅನಾಮಧೇಯರು ಈ ಕೃತಿಗೆ ವ್ಯಾಖ್ಯಾನ ಬರೆದಿದ್ದಾರೆ. |
| ೬. ಶ್ರೀ ಮಧ್ಯಾತ್ಮರಾಮಾಯಣ ಕನ್ನಡ ಟೀಕೆ (?) | - | ಪಟ್ಟಾಭಿರಾಮ ಶಾಸ್ತ್ರಿ ಮತ್ತು ಯು. ದಕ್ಷಿಣ ಮೂರ್ತಿ ಶಾಸ್ತ್ರಿಗಳು ಸೇರಿ ಟೀಕನ್ನು ರಚಿಸಿದ್ದಾರೆ. |
| ೭. ಗುರುಬಾಲ ಪ್ರಬೋಧಿಕೆ ಎಂಬ ನಾಮಲಿಂಗಾನುಶಾಸನ ವ್ಯಾಖ್ಯಾನದ ಸಂಸ್ಕೃತ ಶಬ್ದರತ್ನಾಕರಕ್ಕೆ ಕನ್ನಡ ಟೀಕೆ(?) | - | ಕೆ. ವೆಂಕಟಶಾಸ್ತ್ರಿ, ಮೆ. ರಾಮಶಾಸ್ತ್ರಿ ಮತ್ತು ದೂ. ನಾರಾಯಣ ಶಾಸ್ತ್ರಿಗಳು ಸೇರಿ ವ್ಯಾಖ್ಯಾನ ಬರೆದಿದ್ದಾರೆ. |
| ೮. ಪ್ರತಿಪದ ಟೀಕಾ ತಾತ್ಪರ್ಯ ಸಹಿತ ಶ್ರೀಮದ್ಭಾಗವತ(?) | - | ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು ಸೇರಿ ಟೀಕನ್ನು ರಚಿಸಿರುವುದು. |

ಈ ರೀತಿಯಲ್ಲಿ ಒಂದು ಕೃತಿಗೆ ಇಬ್ಬರಿಂದ ನಾಲ್ಕು ಅಥವಾ ಐದು ಮಂದಿ ಟೀಕಾಕಾರರು ಸೇರಿ ವ್ಯಾಖ್ಯಾನ ಮಾಡಿದ್ದಾರೆ. ಈ ವಿಧಾನ Group Translation and co-Translator ಗೆ ಉಲ್ಲೇಖಾರ್ಹ ಉದಾಹರಣೆಯಾಗಿದೆ.ಆದರೆ ಇಲ್ಲಿ ಎಲ್ಲರೂ ಸೇರಿ ಒಂದು ಕೃತಿಯನ್ನು ವ್ಯಾಖ್ಯಾನಿಸಿದರೆ ಅಥವಾ ಒಬ್ಬರಿಗೊಬ್ಬರು ಸಹಕರಿಸಿದರೇ ಎಂಬುದರ ಕುರಿತು ಮಾಹಿತಿ ದೊರೆಯುವುದಿಲ್ಲ. ಅಂದರೆ ಭಾಷಾಂತರ ಕೆಲಸದಲ್ಲಿನ ಹಂಚಿಕೆಯ ಸ್ವರೂಪ ಅರಿವಾಗುವುದಿಲ್ಲ. ಈ ಸಂದರ್ಭದಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಟೀಕುಗಳ ಮೂಲಕ ಕೃತಿಯೊಂದನ್ನು ಬೇರೊಂದು ಭಾಷಾ ಸಂದರ್ಭದಲ್ಲಿ ಅರ್ಥೈಸಿಕೊಳ್ಳಲು ಸಹಕರಿಸಿದ/ಪಾಲ್ಗೊಂಡವರ ಹೆಸರನ್ನು ನೀಡಿರುವುದು.

ಆಧುನಿಕ ಸಂದರ್ಭದಲ್ಲಿ ಸಹ ಈ ಬಗೆಯಲ್ಲಿ ಹಲವು ಕೃತಿಗಳು ಕನ್ನಡದಲ್ಲಿ ಭಾಷಾಂತರಗೊಂಡಿರುವುದುಂಟು. ಆದರೆ ಇಲ್ಲಿನ ಅನೇಕ ಭಾಷಾಂತರಕಾರರು 'ನಾನು ಈ ಕೃತಿಯನ್ನು ಭಾಷಾಂತರಿಸುವಾಗ ಇಂತವರ ಸಹಕಾರವನ್ನು ಪಡೆದಿರುತ್ತೇನೆ' ಎಂದು ಹೇಳಿಕೊಂಡಿರುತ್ತಾರೆ. ಆದರೆ ಆ ಸಹಕಾರ ಯಾವ ಸ್ವರೂಪದ್ದು ಎಂಬುದನ್ನು ಸ್ಪಷ್ಟಗೊಳಿಸುವುದಿಲ್ಲ. ಕನ್ನಡದಲ್ಲಿ ಬಂದಿರುವ ಟೀಕುಗಳು ಆಧುನಿಕಪೂರ್ವದಲ್ಲಿಯೇ Group Translation ಮತ್ತು Co-Translatorನ್ನು ಬಳಸಿರುವುದನ್ನು ಕಾಣಬಹುದಾಗಿದೆ.

ಹೀಗೆ ಟೀಕುಗಳು ಭಾಷಾಂತರದ ಮಾದರಿಯಾದರೂ ಭಾಷಾಂತರದ ಚರ್ಚೆಗೆ ಯಾಕೆ ಒಳಪಡಲಿಲ್ಲ ಎಂಬ ಪ್ರಶ್ನೆ ಹುಟ್ಟಿಕೊಳ್ಳುವುದು ಸಹಜವಾಗಿದೆ. ಇದುವರೆಗಿನ ಭಾಷಾಂತರ ಚರ್ಚೆ, ವಾಗ್ವಾದ, ಸಿದ್ಧಾಂತಗಳೆಲ್ಲವೂ ಮೂಲಭೂತವಾಗಿ ಸಾಹಿತ್ಯಾಧ್ಯಯನದಿಂದಲೇ ರೂಪುಗೊಂಡಿರುವುದು ಹಾಗೂ ಅದರ ಭಾಗವಾಗಿಯೇ ಮುಂದುವರೆದಿರುವುದರಿಂದ ಟೀಕುಗಳು ಭಾಷಾಂತರ ಅಧ್ಯಯನದ ಚರ್ಚೆಯಿಂದ ಹೊರಗುಳಿದಿರಬಹುದು. ಯಾಕೆಂದರೆ ಸಾಹಿತ್ಯಾಧ್ಯಯನ ಸಂದರ್ಭದಲ್ಲಿ ಕಟ್ಟಿಕೊಂಡ 'ಸೃಜನಶೀಲ' ಮತ್ತು 'ಸೃಜನೇತರ' ಪರಿಕಲ್ಪನೆಯಲ್ಲಿ ಟೀಕುಗಳನ್ನು 'ಪುನರ್ ರಚನೆ'ಯೆಂದು 'ಸೃಜನೇತರ'ದ ಗುಂಪಿಗೆ ಸೇರಿಸಿದರು. ಇದರಿಂದ ಇದರ ಚರ್ಚೆ ಸಾಹಿತ್ಯಾಧ್ಯಯನದ ಒಳಗೆ ನಡೆದಿಲ್ಲವಾದ್ದರಿಂದ ಭಾಷಾಂತರದ ಮಾದರಿಯಾದರೂ ಭಾಷಾಂತರ ಚರ್ಚೆಯಲ್ಲಿ ಸೇರಿಕೊಳ್ಳುವ ಸಾಧ್ಯತೆಯೇ ಇರಲಿಲ್ಲ. ಇದರಿಂದಾಗಿ ಟೀಕುಗಳ ಕುರಿತ ಪರಿಣಾಮಕಾರಿ ಅಧ್ಯಯನಗಳಾಗಲಿ ಭಾಷಾಂತರದ ಹಿನ್ನೆಲೆಯಲ್ಲಿನ ಚರ್ಚೆಗಳಾಗಲಿ ನಡೆಯಲೇ ಇಲ್ಲ.

ಹಾಗೊಂದು ಸಂದರ್ಭದಲ್ಲಿ ಟೀಕು/ವ್ಯಾಖ್ಯಾನಗಳು ಭಾಷಾಂತರದ ಮಾದರಿಯೆಂದು ಪರಿಗಣಿಸಿದರೆ, ಪ್ರಸ್ತುತದಲ್ಲಿರುವ ಭಾಷಾಂತರ ಸಿದ್ಧಾಂತ, ಚಿಂತನೆ, ವಾಗ್ವಾದಗಳನ್ನೆಲ್ಲಾ ಪುನರ್ ಪರಿಶೀಲಿಸುವ, ಮರುರೂಪಿಸುವ ಅನಿವಾರ್ಯತೆ ಉಂಟಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಮುಂದಿನ ದಿನಗಳಲ್ಲಿ ಟೀಕುಗಳ ಕುರಿತು ಗಂಭೀರವಾದ ಚರ್ಚೆಗಳು ನಡೆಯಬೇಕಾದ ಅಗತ್ಯವಿದೆ.

**೬.೫. ಟೀಕುಗಳ ರಚನೆಗೆ ಕಾರಣಗಳು**

ಭಾಷಾಂತರದ ಮಾದರಿಯಾದ ಟೀಕು ಸಾಹಿತ್ಯದ ಒಂದು ಪ್ರಕಾರವೂ ಹೌದು. ಈ ಹಿಂದೆ ರಚನೆಗೊಂಡು, ಸೀಮಿತ ಓದುಗ ವರ್ಗವನ್ನು ಹೊಂದಿರುವ ಹಲವಾರು ಕೃತಿಗಳಿಗೆ ತಾತ್ಪರ್ಯ/ವ್ಯಾಖ್ಯಾನಗಳನ್ನು ಬರೆಯುವ

ಮೂಲಕ, ತಮ್ಮ ಸಂದರ್ಭದಲ್ಲಿ ಅದನ್ನು ಅರ್ಥೈಸಿಕೊಳ್ಳುವ ಅಧಿಕೃತ ಅರ್ಥ ನೀಡುವ ಪ್ರಯತ್ನವನ್ನು ಟೀಕಾಕಾರರು ಮಾಡಿದ್ದಾರೆ. ಭಾಷಾಂತರದ ಅನೇಕ ಸಾಧ್ಯತೆಗಳಿಗೆ ಅನುವು ಮಾಡಿದ ಈ ಪ್ರಕಾರವು ಹಲವು ಶತಮಾನಗಳಿಂದ ಈವರೆಗೆ ಅನೂಚಾನವಾಗಿ ಚಾಲ್ತಿಯಲ್ಲಿರುವುದು. ಆದರೆ ಇದರ ಕುರಿತು ನಡೆದ ಚರ್ಚೆ, ಅಧ್ಯಯನಗಳು ಸೀಮಿತವಾಗಿದೆ. ಇಷ್ಟಿದ್ದರೂ ನೂರಾರು, ಸಾವಿರಾರು ಕೃತಿಗಳಿಗೆ ತಾತ್ಪರ್ಯ ವ್ಯಾಖ್ಯಾನಗಳು ಬರಲು ಕಾರಣಗಳೇನು ಎಂಬುದನ್ನು ಗುರುತಿಸಲು ಪ್ರಯತ್ನಿಸಲಾಗುವುದು.

**ಅಧ್ಯಯನಕಾರರು ಗುರುತಿಸಿರುವ ಕಾರಣಗಳು**

೧. ''ಕಾಲಕ್ರಮದಲ್ಲಿ ಸಂಸ್ಕೃತ ಭಾಷಾಭ್ಯಾಸವು ಜನಸಾಮಾನ್ಯರಲ್ಲಿ ಕಡಿಮೆಯಾಗುತ್ತ ಹೋದುದು, ಸ್ವತಂತ್ರ ಕೃತಿ ರಚನೆ ಉತ್ತಮ ಫಲಗಳನ್ನು ಕೊಡದೆ ಹೋದುದು, ಮೈಸೂರು ಅರಸರ ಕಾಲದಲ್ಲಿ ವ್ಯಾಖ್ಯಾನ ಗ್ರಂಥಗಳು ಜನಸಾಮಾನ್ಯರ ಪ್ರಯೋಜನಾರ್ಥವಾಗಿ ಅಹಮಿಕೆಯಿಂದ ರಚಿತವಾದುದು.'' (ವೆಂಕಟಾಚಲ ಶಾಸ್ತ್ರೀ ಟಿ.ವಿ. ೧೯೯೯, ಪು.೯೮.೯೯)

೨. ಧಾರ್ಮಿಕ ಕೃತಿಗಳು ಹಾಗೂ ಮತ್ತಿತರ ಶಾಸ್ತ್ರ ಸಂಬಂಧಿ ಕೃತಿಗಳು ಬಹುತೇಕವಾಗಿ ಸಂಸ್ಕೃತದ ಮಾದರಿಯನ್ನು ಅನುಸರಿಸುತ್ತಿದ್ದುದರಿಂದ ಸಾಮಾನ್ಯರೆಡೆಗೆ ಅವನ್ನು ಕೊಂಡೊಯ್ಯುವ ಸಲುವಾಗಿ ಸ್ಥಳೀಯ ಅಥವಾ ದೇಶೀಯ ಭಾಷೆಯಲ್ಲಿ ವ್ಯಾಖ್ಯಾನಿಸಿದರು (ರವೀಂದ್ರನಾಥ, ೨೦೦೬).

೩. ಕೆಲವು ಜನ ಟೀಕಾಕಾರರು ಅನ್ಯರ ಪ್ರೇರಣೆ, ಪ್ರತಿಬೋಧನೆಯಿಂದ ವ್ಯಾಖ್ಯಾನಕ್ಕೆ ತೊಡಗಿರುವುದು ಕುತೂಹಲಕಾರಿಯಾಗಿದೆ. ಉದಾಹರಣೆಗೆ ೧೧೭೦ರಲ್ಲಿದ್ದ ಬಾಲಚಂದ್ರನು ಬರೆದ 'ತತ್ವರತ್ನ ಪ್ರದೀಪಿಕೆ', 'ಪ್ರಭಾತ ಶಾಸ್ತ್ರ' ಟೀಕುಗಳು ರಚನೆಯಾಗಿರುವುದು ತನ್ನ ಮಿತ್ರನ ಪ್ರತಿ ಬೋಧನಾರ್ಥ ನಿಮಿತ್ತದಿಂದ ಎಂದು ಹೇಳಿಕೊಂಡಿದ್ದರೆ, ೧೩೫೯ರಲ್ಲಿದ್ದ ಕೇಶವ ವರ್ಣಿಯು ಧರ್ಮಭೂಷಣ ಭಟ್ಟಾರಕನ ಆಜ್ಞೆಯ ಮೇರೆಗೆ 'ಗೊಮ್ಮಟಸಾರ ವ್ಯಾಖ್ಯಾನ' ಬರೆದಿರುವುದು ಕಂಡುಬರುತ್ತದೆ. ಕ್ರಿ.ಶ. ೧೮೦೮ರಲ್ಲಿದ್ದ ರಾಮಕೃಷ್ಣ ಶಾಸ್ತ್ರಿಗಳವರ ಭುವನಪ್ರದೀಪಿಕೆಯೆಂಬ ಸಂಸ್ಕೃತ ಗ್ರಂಥಕ್ಕೆ ಮೈಸೂರಿನ ಅರಸನಾದ ಮುಮ್ಮಡಿ ಕೃಷ್ಣರಾಜರ ಸಂತೋಷಾರ್ಥವಾಗಿ ಟೀಕು ಬರೆಯಲ್ಪಟ್ಟಿದೆ (ಉದ್ಧೃತ, ರವೀಂದ್ರನಾಥ ಕೆ. ೨೦೦೬, ಪು.೧೦).

ಟಿ.ವಿ. ವೆಂಕಟಾಚಲ ಶಾಸ್ತ್ರಿ, ರವೀಂದ್ರನಾಥ ಮುಂತಾದ ಅಧ್ಯಯನಕಾರರು ಟೀಕುಗಳ ರಚನೆಯ ಕುರಿತು ಪ್ರಸ್ತಾಪಿಸಿದ ಕಾರಣಗಳಲ್ಲಿ ಈ ಕೆಳಗಿನಂತೆ ಅಂಶಗಳನ್ನು ಗುರುತಿಸಬಹುದು.

೧. ಸಂಸ್ಕೃತ ಕೇಂದ್ರಿತವಾಗಿ ಟೀಕುಗಳನ್ನು ಗಮನಿಸಿರುವುದು

೨. ಜನಸಾಮಾನ್ಯರಿಗಾಗಿ ಟೀಕುಗಳು ಮತ್ತು

೩. ಧರ್ಮಶಾಸ್ತ್ರ ಕೇಂದ್ರಿತವಾಗಿ ಟೀಕನ್ನು ಗುರುತಿಸಿರುವುದು.

೧೮ ಮತ್ತು ೧೯ ನೇ ಶತಮಾನದಲ್ಲಿ ಸಂಸ್ಕೃತದ ಬಳಕೆ ಕಡಿಮೆಯಾಗುತ್ತಾ ಹೋಗುತ್ತಿದ್ದರಿಂದ ಆ ಭಾಷೆಯಲ್ಲಿರುವ ವಿಚಾರ, ವಿಶೇಷಗಳು ಜನಸಾಮಾನ್ಯರಿಗೆ ತಿಳಿಯಲಿ ಎಂಬ ಕಾರಣದಿಂದ ಟೀಕುಗಳು

ರಚನೆಯಾಗಿದ್ದಾದರೆ ಇನ್ನು ಕನ್ನಡದ ಕೃತಿಗಳು ಕನ್ನಡದಲ್ಲಿ ವ್ಯಾಖ್ಯಾನಗೊಂಡಿರುವುದಾಗಲಿ ಅಥವಾ ಪ್ರಾಕೃತದ ಕೃತಿಗಳು ಸಂಸ್ಕೃತದಲ್ಲಿ ವ್ಯಾಖ್ಯಾನಗೊಂಡಿರುವುದು ಯಾಕಾಗಿ ಎಂಬ ಪ್ರಶ್ನೆ ಬರುವುದು ಸಹಜ. ಆದರೆ ಕೇವಲ ಧರ್ಮಶಾಸ್ತ್ರ ಗ್ರಂಥಗಳಿಗೆ ಮಾತ್ರ ಟೀಕು/ವ್ಯಾಖ್ಯಾನಗಳು ಬಂದಿಲ್ಲ. ಧಾರ್ಮಿಕೇತರ ಕೃತಿಗಳು ಸಹ ವ್ಯಾಖ್ಯಾನಗೊಂಡಿವೆ. ಹೀಗೆ ಇವುಗಳನ್ನೆಲ್ಲ ಗಮನಿಸಿದಾಗ ಮೇಲಿನ ಮೂರು ಕಾರಣಗಳೊಂದಿಗೆ ಟೀಕುಗಳು ಇನ್ನಿತರ ಕಾರಣಗಳಿಂದಲೂ ರಚನೆಯಾಗಿರುವ, ರೂಪುಗೊಂಡಿರುವ ಸಾಧ್ಯತೆಯಿದೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಬಹುದು.

೪. ಬದಲಾಗುತ್ತಿರುವ ರಾಜರ ಆಡಳಿತ ಮತ್ತು ಧರ್ಮ, ಧರ್ಮಗಳಲ್ಲಿನ ಬೆಳವಣಿಗೆ ಹಾಗೂ ಪ್ರಸಾರದ ಪೈಪೋಟಿಯಲ್ಲ ಟೀಕುಗಳ ರಚನೆ ಅತ್ಯಗತ್ಯವೆನಿಸಿರುವ ಸಾಧ್ಯತೆಯಿದೆ.

೫. ಕೆಲವು ವಿದ್ಯಾಸಂಸ್ಥೆಗಳಲ್ಲಿ (ವೀರಶೈವ ಮಠಗಳಲ್ಲಿನ ಪಾಠ, ಪ್ರವಚನಗಳಲ್ಲಿ) ವ್ಯಾಖ್ಯಾನ, ಟೀಕುಗಳು ಪಠ್ಯಕ್ರಮದ ವಿಷಯವಾಗಿದ್ದರಿಂದ ಇವುಗಳ ರಚನೆಗೆ ಅವಕಾಶ ಮುಕ್ತವಾಗಿತ್ತು. ಹೀಗಾಗಿ ಹೆಚ್ಚು ಕೃತಿಗಳು ವ್ಯಾಖ್ಯಾನಗೊಳ್ಳುವಂತಾಯಿತು.

೬. ಧಾರ್ಮಿಕ ಕೇಂದ್ರಗಳೆನಿಸಿಕೊಂಡ ಮಠ ಮಾನ್ಯಗಳು ಟೀಕುಗಳ ಬರವಣಿಗೆಯಲ್ಲಿ ಆಸಕ್ತಿ ವಹಿಸಿದ್ದವು. ಅಲ್ಲದೆ ಕೆಲವು ಮಠಗಳು 'ಟೀಕಿನ ಮಠ'ಗಳಾಗಿ ರೂಪುಗೊಂಡಿದ್ದರಿಂದ ವ್ಯಾಖ್ಯಾನಕಾರರಿಗೆ ಪೂರಕ ವಾತಾವರಣವನ್ನು ಒದಗಿಸಿತು. ಇದರಿಂದ ಸಹ ಟೀಕುಗಳು ರಚನೆಯಾಗುವಂತಾಯಿತು. ಟೀಕಿನ ಮಠಗಳಾಗಿ ರೂಪುಗೊಂಡ ಮಠಗಳೆಂದರೆ, ಬಾಗಲಕೋಟೆಯ ತೆಂಗಿನ ಮಠ, ನಂಜನಗೂಡಿನ ವಿರಕ್ತಮಠ ಮುಂತಾದವುಗಳು.

೭. ಆಂತರಿಕ ಭಾಷಾಂತರದ ಸಂದರ್ಭದಲ್ಲಿ ಕೃತಿಗಳು ಭಾಷೆ, ಶೈಲಿ, ವ್ಯಾಕರಣಗಳು ಪಂಡಿತರಿಗಾಗಿ ರಚನೆಗೊಂಡಿದ್ದರಿಂದ ಅದನ್ನು ಅರ್ಥೈಸುವ ಭಾಗವಾಗಿ ಟೀಕುಗಳು ರಚನೆಗೊಂಡಿರಬೇಕು.

೮. ಭಾಷೆಯ ಕಾರಣದಿಂದಾಗಿ ಪ್ರತಿಯೊಂದು ಕೃತಿಯು ಕಾಲದಿಂದ ಕಾಲಕ್ಕೆ ಪುನರ್ ವ್ಯಾಖ್ಯಾನದ ಅಗತ್ಯವನ್ನು ಹೊಂದಿರುತ್ತದೆ. ಅಥವಾ ಪ್ರತಿಯೊಂದು ಸಮಾಜವು ಈಗಾಗಲೆ ಇರುವ ಕೃತಿಗಳನ್ನು ತನ್ನ ಕಾಲದ ಅಗತ್ಯಕ್ಕನುಗುಣವಾಗಿ ಹೊಂದಿಸಿಕೊಳ್ಳುವ ಪ್ರಯತ್ನ ಮಾಡುತ್ತದೆ. ಇದರಿಂದಾಗಿ ಸಾಹಿತ್ಯ ಹಾಗೂ ಸಾಹಿತ್ಯೇತರ ಕೃತಿಗಳು ಮತ್ತೆ ಮತ್ತೆ ವ್ಯಾಖ್ಯಾನಕ್ಕೆ ಒಳಗಾಗಿರುವ ಸಾಧ್ಯತೆಯಿದೆ.

೯. ಪಾಂಡಿತ್ಯದ ಒರೆಗಲ್ಲುಗಳಲ್ಲಿ ಒಂದಾಗಿ ಟೀಕನ್ನು ಪರಿಭಾವಿಸಿದ್ದರಿಂದ ವಿದ್ವತ್ ಜಗತ್ತು ಇದರಲ್ಲಿ ಆಸಕ್ತವಾಯಿತು.

ಹೀಗೆ ಹಲವಾರು ಕಾರಣಗಳಿಂದ ಟೀಕುಗಳು ರಚನೆಯಾಗಿವೆ.

**೬.೬. ಆಧುನಿಕ ಸಂದರ್ಭದಲ್ಲಿ ಬಂದಿರುವ ಟೀಕುಗಳ ಸ್ವರೂಪ**

ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಿಕೊಂಡಿರುವ ಕಾಲಾವಧಿಯಲ್ಲಿ ಕನ್ನಡದಲ್ಲಿ ಸರಿಸುಮಾರು ಸಾವಿರಕ್ಕಿಂತ ಹೆಚ್ಚು ಟೀಕುಗಳು ರಚನೆಯಾಗಿವೆ. ೧೮೫೦ ರಿಂದ ೧೯೨೦ರ ನಡುವೆ ಸುಮಾರು ೨೫೦ ಕ್ಕೂ ಅಧಿಕ ಟೀಕುಗಳು

ಆಧುನಿಕ ಸಂದರ್ಭದಲ್ಲಿ ಪ್ರಕಟಗೊಂಡಿರುವುದು ಗಮನಾರ್ಹವಾಗಿದೆ. ಕನ್ನಡವೂ ಸೇರಿದಂತೆ ಭಾರತೀಯ ಸಂದರ್ಭದಲ್ಲಿ ೧೯ನೇ ಶತಮಾನವನ್ನು ಆಧುನಿಕ ಯುಗವೆಂದು ಪರಿಗಣಿಲಾಗಿದೆ. ಟೀಕುಗಳು ಕೇವಲ ಧಾರ್ಮಿಕ ಕೃತಿಗಳಿಗೆ ರಚನೆಗೊಂಡವು ಹಾಗೂ ಇದೊಂದು 'ಸೃಜನೇತರ' ಚಟುವಟಿಕೆ ಇತ್ಯಾದಿ ಹೇಳಿಕೆಗಳ ಸಂದರ್ಭದಲ್ಲಿ ಈ ಟೀಕುಗಳ ಪ್ರಮಾಣ ಮತ್ತು ವೈವಿಧ್ಯ ಕುತೂಹಲವನ್ನುಂಟುಮಾಡುತ್ತದೆ. ಈ ೨೫೦ಕ್ಕಿಂತ ಅಧಿಕ ಟೀಕುಗಳಲ್ಲಿ ೧/೫% ಧಾರ್ಮಿಕೇತರ ಕೃತಿಗಳಿಗೆ ವ್ಯಾಖ್ಯಾನ ಬಂದಿರುವುದು ೧೯ನೇ ಶತಮಾನದ ವಿಶಿಷ್ಟತೆಯನ್ನು ಹಾಗೂ ಟೀಕುಗಳ ವೈವಿಧ್ಯತೆಯನ್ನು ಗುರುತಾಗಿಸಿವೆ.

೧೯ನೇ ಶತಮಾನದಲ್ಲಿ ಕರ್ನಾಟಕವನ್ನು ಒಳಗೊಂಡಂತೆ ಸಮಸ್ತ ಭಾರತವು ಹೊಸ ಆಲೋಚನಾ ಕ್ರಮಕ್ಕೆ ಸಜ್ಜಾಗಿತ್ತು. ಇಂತಹ ಸಂದರ್ಭದಲ್ಲಿ ಹಳೆಯ ಮತ್ತು ಹೊಸದರ ನಡುವೆ ಅನುಸಂಧಾನ ಪ್ರಕ್ರಿಯೆಗೆ ಚಾಲನೆ ದೊರೆಯಿತು. ಇದರಿಂದಾಗಿ ಅಕ್ಷರಸ್ಥ ಕನ್ನಡಿಗರ ಆಲೋಚನೆ ಮತ್ತು ಸಾಹಿತ್ಯ ಚಟುವಟಿಕೆ ಇತ್ಯಾದಿಗಳು ಆಧುನಿಕತೆಗೆ ತೆರೆದುಕೊಳ್ಳುವ, ಒಡ್ಡಿಕೊಳ್ಳುವ ಪ್ರಯತ್ನದಲ್ಲಿತ್ತು. ಹೀಗಿದ್ದರೂ ಸೃಜನೇತರ, ಧರ್ಮಸಂಬಂಧಿ ಎಂದೆಲ್ಲಾ ಪರಿಗಣಿಸಲಾದ ಟೀಕು, ವ್ಯಾಖ್ಯಾನಗಳು ಅಧಿಕ ಪ್ರಮಾಣದಲ್ಲಿ ರಚನೆಯಾಗಿರುವುದು ವಿಶೇಷವಾಗಿದೆ. ಆಧುನಿಕ ಪೂರ್ವದಲ್ಲಿ ರಚನೆಗೊಂಡ ಟೀಕುಗಳ ಕಾಲ, ಸಂದರ್ಭಕ್ಕೂ ಹಾಗೂ ಆಧುನಿಕ ಅವಧಿಯಲ್ಲಿ ಬಂದಿರುವ ಟೀಕುಗಳಿಗೂ ಸಾಂಸ್ಕೃತಿಕವಾದ ಭಿನ್ನತೆಗಳಿರುವುದನ್ನು ಗಮನದಲ್ಲಿರಿಸಿಕೊಂಡು ಆಧುನಿಕ ಸಂದರ್ಭದಲ್ಲಿ ಬಂದಿರುವ ಟೀಕುಗಳನ್ನು ಗಮನಿಸಬಹುದು.

ಈ ಅವಧಿಯಲ್ಲಿ ಬ್ರಿಟೀಶರು ಭಾರತದ ಬಹುಭಾಗಗಳನ್ನು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು. ಆಧುನಿಕತೆಯಿಂದ ರೂಪುಗೊಂಡ ಆಧುನಿಕ ಶಿಕ್ಷಣದ ಭಾಗವಾಗಿ ಕೆಲವು ಜ್ಞಾನಶಾಖೆಗಳ ಪರಿಚಯ ಮತ್ತು ಈಗಾಗಲೇ ಇದ್ದ ಜ್ಞಾನಶಾಖೆಗಳ ಪುನರ್‌ರಚನೆಯ ಚಟುವಟಿಕೆ ಕನ್ನಡದಲ್ಲಿ ಆರಂಭವಾಯಿತು. ಇದರಿಂದಾಗಿ ಭಾರತೀಯ ಪರಂಪರೆ, ಸಂಪ್ರದಾಯಗಳ ಕುರಿತು ಹೊಸ ಬಗೆಯ ಆಲೋಚನೆಗಳು ಬರತೊಡಗಿದವು. ಹೀಗಾಗಿ ಆಧುನಿಕ ಅವಧಿಯಲ್ಲಿ ಕನ್ನಡದ ಧಾರ್ಮಿಕ, ಸಾಹಿತ್ಯಕ ಹಾಗೂ ಶಾಸ್ತ್ರ ಸಂಬಂಧಿ ವಿಷಯಗಳನ್ನು ಅರ್ಥೈಸಿಕೊಳ್ಳುವ, ಅರ್ಥಮಾಡಿಸುವ ಕೆಲಸಗಳು ಪಾಂಡಿತ್ಯದ ಭಾಗವಾಗಿ ಪ್ರಚುರಗೊಂಡವು. ಇದರ ಪ್ರಮುಖ ಭಾಗವಾಗಿ ಭಾಷಾಂತರದ ಮಾದರಿಯಾದ ಟೀಕು, ವ್ಯಾಖ್ಯಾನಗಳು ರಚನೆಗೊಂಡವು.

ಆಧುನಿಕ ಅವಧಿಯಲ್ಲಿ ಪ್ರಕಟಗೊಂಡ ಟೀಕುಗಳಲ್ಲಿ ಹೆಚ್ಚಿನವು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದವುಗಳಾದರೂ ಅವುಗಳೊಂದಿಗೆ ವೈದ್ಯಕೀಯ, ಶಾಸ್ತ್ರ ಇತ್ಯಾದಿಗಳಿಗೆ ಸಂಬಂಧಿಸಿದವುಗಳು ಸಾಕಷ್ಟಿವೆ. ೧೯ನೇ ಶತಮಾನದಲ್ಲಿ ರೂಪುಗೊಂಡ ಆಧುನಿಕ ಸಾರ್ವತ್ರಿಕ ಶಿಕ್ಷಣದ ಫಲವಾಗಿ ಹೊಸ ಆಲೋಚನೆಗಳು, ಇತರ ಜ್ಞಾನಶಿಸ್ತುಗಳು ಕನ್ನಡಕ್ಕೆ ಬಂದಿರುವ ಕುರಿತು ಈ ಹಿಂದೆ ಪ್ರಸ್ತಾಪಿಸಲಾಗಿದೆ. ವಸಾಹತುಶಾಹಿಯಿಂದ ರೂಪುಗೊಂಡ ಆಧುನಿಕ

ಸಂಚಲನದಿಂದಾಗಿ ಭಾರತೀಯ ಧರ್ಮಗಳು ಆಧುನಿಕತೆಯ ಎಚ್ಚರ ಪಡೆಯುವುದು ಅನಿವಾರ್ಯವಾಗಿತ್ತು. ಬ್ರಿಟೀಶರ ಆಡಳಿತದಿಂದಾಗಿ ಕ್ರೈಸ್ತ ಧರ್ಮವು ರಾಜಕೀಯ ಮತ್ತು ಶೈಕ್ಷಣಿಕ ನೆಲೆಗಳಿಂದ ಭಾರತದಲ್ಲಿ ನೆಲೆಯೂರಲು ಸಿದ್ಧಗೊಂಡು ಆ ಪ್ರಯತ್ನದಲ್ಲಿತ್ತು. ಇಂತಹ ಸನ್ನಿವೇಶದಲ್ಲಿ ಭಾರದಲ್ಲಿನ ಕೆಲವು ಧರ್ಮಗಳು ತಮ್ಮನ್ನು ತಾವು 'ರಿ-ಕೋಡಿಫಿಕೇಶನ್' ಮಾಡಿಕೊಳ್ಳಬೇಕಾದ ಅಗತ್ಯ ತಲೆದೋರಿತು. ಹೀಗಾಗಿ ಭಾರತೀಯ ಪ್ರಮುಖ ಧರ್ಮಗಳು ಧಾರ್ಮಿಕ, ಆಚಾರ, ವಿಚಾರ ಸಂಸ್ಕೃತಿಯೊಂದಿಗೆ ಅವುಗಳನ್ನು ಅಧಿಕೃತಗೊಳಿಸಬಲ್ಲ ಧಾರ್ಮಿಕ ಪಠ್ಯಗಳನ್ನು ಮರುವ್ಯಾಖ್ಯಾನ ಮಾಡಿಕೊಳ್ಳುವತ್ತ ಪ್ರಯತ್ನಿಸಿದವು. ಕನ್ನಡದ ಸಂದರ್ಭದಲ್ಲಿ ವಚನ ಹಾಗೂ ಇತರ ಕೃತಿಗಳ ಮೂಲಕ 'ವೀರಶೈವ ಧರ್ಮ' ವನ್ನು ರಿ-ಕೋಡಿಫಿಕೇಶನ್ ಮಾಡಿಕೊಳ್ಳಲು ವೀರಶೈವರು ಮುಂದಾದಂತೆ, ವೈದಿಕರು ಸಂಸ್ಕೃತದಲ್ಲಿನ ಕೃತಿಗಳಿಗೆ ಕನ್ನಡದಲ್ಲಿ ತಾತ್ಪರ್ಯ/ಭಾಷ್ಯ ಬರೆಯುವ ಮೂಲಕ ಈ ಪ್ರಕ್ರಿಯೆಯನ್ನು ಆರಂಭಿಸಿದರು. ಇವುಗಳಂತೆ ಜೈನ ಧರ್ಮ ಸಹ ತನ್ನ ಉಳಿವಿಗಾಗಿ ಈ ಬಗೆಯ ದಾರಿಯಲ್ಲಿ ಸಾಗಲೇಬೇಕಿತ್ತು. ಹೀಗೆ ಜೈನ, ವೈದಿಕ ಮತ್ತು ವೀರಶೈವ ಧರ್ಮಗಳ ಧಾರ್ಮಿಕ ಪರಂಪರೆಯ ಜ್ಞಾನಶಾಖೆಗಳನ್ನು ಪುನರ್ ವ್ಯಾಖ್ಯಾನಿಸಿಕೊಳ್ಳುವುದು ಅನಿವಾರ್ಯವೆನಿಸಿತು. ಇದರಿಂದಾಗಿಯೇ ಧಾರ್ಮಿಕ ಕೃತಿಗಳನ್ನು ಆಧುನಿಕ ಸಂದರ್ಭದಲ್ಲಿ ನೇರವಾಗಿ ಭಾಷಾಂತರಿಸಿಕೊಂಡಂತೆ ಟೀಕು/ವ್ಯಾಖ್ಯಾನಗಳೆಂಬ ಭಾಷಾಂತರದ ಮಾದರಿಯಲ್ಲಿಯೂ ಕನ್ನಡದ್ದಾಗಿಸಿಕೊಳ್ಳಲು ಪ್ರಯತ್ನಿಸಿದರು. ಹೀಗಾಗಿ ಧಾರ್ಮಿಕ ಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ವ್ಯಾಖ್ಯಾನಕ್ಕೆ ಒಳಗಾಗುವಂತಾಯಿತು.

ಬ್ರಿಟೀಶರು ಕೈಗೊಂಡ ಕೆಲಸ ಕಾರ್ಯಗಳಿಂದ ಪರಿಣಾಮಕಾರಿ ಪಲ್ಲಟಗಳಾದವಲ್ಲಿ ಗಮನಿಸಬೇಕಾದುದು ಆಧುನಿಕ ಜ್ಞಾನ ಕ್ಷೇತ್ರಗಳ ಪರಿಚಯ ಮತ್ತು ಪ್ರವೇಶ. ಪಶ್ಚಿಮದ ವಿಜ್ಞಾನ, ವೈದ್ಯಕೀಯ, ತಂತ್ರಜ್ಞಾನದಂತಹ ಜ್ಞಾನಶಿಸ್ತುಗಳು ಈ ನೆಲದಲ್ಲಿ ನೆಲೆಯೂರಲು ಪ್ರಯತ್ನಿಸುತ್ತಿದ್ದಂತೆ ಅವುಗಳಿಗೆ ಸಮನಾಗಿ ನಮ್ಮಲ್ಲಿನ ಪಾರಂಪರಿಕ ವೈದ್ಯಶಾಸ್ತ್ರ, ವಾಸ್ತುಶಿಲ್ಪ, ಹಸ್ತ ಮುದ್ರಿಕಾ ಮತ್ತು ತಂತ್ರಜ್ಞಾನ ಇತ್ಯಾದಿಗಳ ಪುನರ್‌ರಚನೆ, ಪುನರ್‌ವ್ಯಾಖ್ಯಾನ ಅಗತ್ಯವೆನಿಸಿತು. ಇದರಿಂದಾಗಿ ಭಾಷಾಂತರದ ಮಾದರಿಯಾದ ಟೀಕು, ವ್ಯಾಖ್ಯಾನಗಳ ಮೂಲಕ ಪಾರಂಪರಿಕ ಜ್ಞಾನಗಳಿಗೆ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನ ಬರೆದು ಅವುಗಳನ್ನು ಆಧುನಿಕ ಸಂದರ್ಭದ ಓದಿಗಾಗಿ ಸಿದ್ಧಗೊಳಿಸುವ ಪ್ರಯತ್ನಗಳು ನಡೆದವು. ಹೀಗಾಗಿ ಧಾರ್ಮಿಕ ಕೃತಿಗಳೊಂದಿಗೆ ಅನ್ಯ ಜ್ಞಾನಶಿಸ್ತುಗಳನ್ನು ಆಧುನಿಕ ಜ್ಞಾನ ಶಾಖೆಗೆ ಸಮನಾಗಿ ರೂಪಿಸಲು ಟೀಕು ಪರಿಣಾಮಕಾರಿ ಮಾದರಿಯಾಗಿ ಪಾತ್ರವಹಿಸಿತು. ಈ ಸಂಗತಿ ಭಾಷಾಂತರದ ಭಿನ್ನ ಆಯಾಮವನ್ನು ಅನಿವಾರ್ಯತೆಯನ್ನು ಪ್ರಸ್ತುತಪಡಿಸಬಲ್ಲುದು.

ಹೀಗೆ ಆಧುನಿಕ ಸಂದರ್ಭದಲ್ಲಿ ರಚನೆಯಾಗಿರುವ ಭಾಷಾಂತರದ ಮಾದರಿಯಾದ ಟೀಕುಗಳನ್ನು ವಿಂಗಡಿಸಿಕೊಂಡು ಗಮನಿಸುವುದು ಸೂಕ್ತವಾಗಿದೆ. ಆದ್ದರಿಂದ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಬಂದಿರುವ ಟೀಕುಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಲಾಗಿದೆ.

**೬.೬.೧. ಧಾರ್ಮಿಕ ಕೃತಿಗಳಿಗೆ ಬಂದಿರುವ ಟೀಕುಗಳು.**

ಒಟ್ಟು ಟೀಕುಗಳು : ೨೨೨

೧. ಜೈನ ಧರ್ಮ : ೩೮

೨. ವೀರಶೈವ : ೧೦೦

೩. ವೈದಿಕ : ೮೫




ಸುಮಾರು ೧೮೫೦ ರಿಂದ ೧೯೨೦ ಅವಧಿಯಲ್ಲಿ ೨೬೦ಕ್ಕಿಂತ ಅಧಿಕ ಟೀಕುಗಳು ಕನ್ನಡದಲ್ಲಿ ರಚನೆಯಾಗಿವೆ. ಈ ಅವಧಿಯಲ್ಲಿ ಬಂದಿರುವ ಒಟ್ಟು ಟೀಕುಗಳಲ್ಲಿ ೭೫% ರಷ್ಟು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ್ದಾಗಿವೆ. ಧರ್ಮಗಳಲ್ಲಿ ವೀರಶೈವ ಧರ್ಮಕ್ಕೆ ಅತಿ ಹೆಚ್ಚು ಟೀಕುಗಳು (೧೦೦) ಬಂದರೆ, ಅತಿ ಕಡಿಮೆ ಪ್ರಮಾಣದ ಟೀಕುಗಳು ಜೈನ ಧರ್ಮಕ್ಕೆ (೩೮) ಬಂದಿವೆ. ಉಳಿದಂತೆ ವೈದಿಕ ಧಾರ್ಮಿಕ ಕೃತಿಗಳಿಗೆ ಬಂದ ಟೀಕುಗಳ (೮೫) ವೀರಶೈವ ಧರ್ಮಕ್ಕೆ ಬಂದ ಟೀಕುಗಳ ಪ್ರಮಾಣಕ್ಕೆ ಹತ್ತಿರದಲ್ಲಿರುವುದು ಕಂಡುಬರುತ್ತದೆ.

ಜೈನಧರ್ಮದ ಕೃತಿಗಳಿಗೆ ಬಂದ ವ್ಯಾಖ್ಯಾನಗಳನ್ನು ಗಮನಿಸಿದಾಗ ಬಹುತೇಕ ಕೃತಿಗಳು 'ಅಂತರ್ ಭಾಷಾಂತರ'ದ ಮಾದರಿಯಲ್ಲಿ ತಾತ್ಪರ್ಯ ಪಡೆದುಕೊಂಡಿರುವವು. ವಿಕಳಂಕನ 'ಸಂಬೋಧನಾ ಪಂಚ ವಿಶಂತಿ' ಮತ್ತು ಕುಂದಕುಂದನ

ಕೃತಿಗಳಿಗೆ ಹೆಚ್ಚು ವ್ಯಾಖ್ಯಾನವನ್ನು ಬರೆಯಲಾಗಿದೆ. ಜೊತೆಗೆ ಸಾಹಿತ್ಯ ಕೃತಿಗಳೆನಿಸಿಕೊಂಡ 'ಪಂಚತಂತ್ರ' (೧೮೯೩), 'ವರ್ಧಮಾನ ಪುರಾಣ' (?), 'ಧರ್ಮ ಪರೀಕ್ಷೆ' (೧೮೯೦) ಕೃತಿಗಳನ್ನು ಸಹ ವ್ಯಾಖ್ಯಾನಿಸುವ ಮೂಲಕ ಹೊಸ ಓದಿಗೆ ಸಿದ್ಧಗೊಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಟೀಕು ಅಥವಾ ವ್ಯಾಖ್ಯಾನಗಳನ್ನು ಪಡೆದುಕೊಂಡಿರುವ ಜೈನ ಧರ್ಮದ ಹೆಚ್ಚಿನ ಕೃತಿಗಳು ಧಾರ್ಮಿಕ ತತ್ವ, ಸಿದ್ಧಾಂತ ಮತ್ತು ಆಚರಣಾ ಸೂತ್ರಗಳಿಗೆ ಸಂಬಂಧಿಸಿದವುಗಳಾಗಿವೆ. ಇವನ್ನು ಗಮನಿಸಿದರೆ ಧಾರ್ಮಿಕ ಕೃತಿಗಳಿಗೆ ಆಧುನಿಕ ಸಂದರ್ಭದಲ್ಲಿ ಹೊಸ ಬಗೆಯ ಅರ್ಥ, ತಾತ್ಪರ್ಯಗಳನ್ನು ನೀಡುವ ಮೂಲಕ ಧರ್ಮವನ್ನು ಸಂಘಟಿಸುವ ಕೆಲಸ ಈ ನೆಲೆಯಲ್ಲಿ ನಡೆದಿರುವ ಸಾಧ್ಯತೆಯಿದೆ. ಜೈನೇತರ ಧರ್ಮಗಳು ಪ್ರಬಲವಾಗುತ್ತಿದ್ದುದು ಹಾಗೂ ಪಶ್ಚಿಮದ ಧರ್ಮಗಳು ರಾಜಕೀಯವಾಗಿ ಕರ್ನಾಟಕದಲ್ಲಿ ತಳವೂರಲು ಪ್ರಯತ್ನಿಸುತ್ತಿದ್ದರಿಂದ ಭಾಷಾಂತರದ ಮೂಲಕ ಸ್ವಮತದ ಕಡೆಗೆ ಗಮನವನ್ನು ಕೇಂದ್ರಿಕರಿಸುವ ಅಗತ್ಯವಿತ್ತು.

ಆಧುನಿಕ ಅವಧಿಯಲ್ಲಿ ವೀರಶೈವ ಧಾರ್ಮಿಕ ಕೃತಿಗಳು ಹೆಚ್ಚು ವ್ಯಾಖ್ಯಾನಗೊಂಡಿರುವುದು ಈ ಚಿತ್ರದಿಂದ ಕಂಡುಬರುತ್ತದೆ. ಧಾರ್ಮಿಕ ಕೃತಿಗಳಿಗೆ ಬಂದಿರುವ ಒಟ್ಟು ಟೀಕುಗಳಲ್ಲಿ ೫೦% ರಷ್ಟು ವೀರಶೈವ ಧರ್ಮಕ್ಕೆ ಸಂಬಂಧಿಸಿರುವುದು ಗಮನಾರ್ಹವಾಗಿದೆ. 'ರಾಜಶೇಖರ ವಿಳಾಸ', 'ಕೈವಲ್ಯಪದ್ಧತಿ', ಬೆಡಗಿನ ವಚನಗಳು ಹಾಗೂ ಇತರ ವೀರಶೈವ ಸಂಬಂಧಿತ ಕೃತಿಗಳಿಗೆ ವ್ಯಾಖ್ಯಾನವನ್ನು ಬರೆಯಲಾಗಿದೆ. ಹೀಗೆ ಧಾರ್ಮಿಕ ಕೃತಿಗಳಿಗೆ ತಾತ್ಪರ್ಯ ನೀಡುವ ಬಗೆಯಲ್ಲಿ ಸಮಕಾಲೀನ ಸಂದರ್ಭದಲ್ಲಿ ಅವುಗಳನ್ನು ಅರ್ಥೈಸುವ, ಅಧಿಕೃತಗೊಳಿಸುವ ಕೆಲಸವನ್ನು ಮಾಡಿದ್ದಾರೆ.

೧೯ನೇ ಶತಮಾನದಲ್ಲಿ ವೈದಿಕ ಧರ್ಮದ ಕೃತಿಗಳಿಗೆ ಬಂದಿರುವ ಟೀಕುಗಳ ಪ್ರಮಾಣ ಜೈನ ಧರ್ಮದ ಟೀಕುಗಳಿಗಿಂತ ಹೆಚ್ಚಿದ್ದು ಸುಮಾರು ೮೫ ವ್ಯಾಖ್ಯಾನಗಳು ಬಂದಿವೆ. 'ಹರಿಕತಾಮೃತಸಾರ' 'ಕುಮಾರ ವ್ಯಾಸ ಭಾರತ' ಹಾಗೂ 'ಜೈಮಿನಿ ಭಾರತ'ಕ್ಕೆ ಹಲವು ಟೀಕಾಕಾರರು ವ್ಯಾಖ್ಯಾನ ರಚಿಸಿದ್ದಾರೆ.

ಹೀಗೆ ಧಾರ್ಮಿಕ ಕೃತಿಗಳಿಗೆ ಬಂದ ಟೀಕುಗಳು ಧರ್ಮವನ್ನು ಸಂಘಟಿಸುವ ಹಾಗೂ ಜನರಿಗಾಗಿ ಅದನ್ನು ಅರ್ಥೈಸುವ ಉದ್ದೇಶದಿಂದ ಬಂದವುಗಳಾಗಿರಬಹುದೆಂದು ಹೇಳಬಹುದು.

**೬.೬.೧.೧. ಟೀಕುಗಳ ಸ್ವರೂಪ**

ಇಂಗ್ಲಿಷ್ ಗೀತಗಳು ಪೂರ್ವದಲ್ಲಿ ವೀರಶೈವ, ವೈದಿಕ ಹಾಗೂ ಜೈನ ಧರ್ಮದ ಹಲವು ಕೃತಿಗಳಿಗೆ ಟೀಕುಗಳು ರಚನೆಯಾಗಿವೆ. ಇವುಗಳ ಪ್ರಮಾಣದ ಭಿನ್ನತೆಯನ್ನು ಈ ಹಿಂದೆ ಚರ್ಚಿಸಲಾಗಿದೆ. ಹಾಗಾಗಿ ಇಲ್ಲಿ ಟೀಕುಗಳ ಸ್ವರೂಪವನ್ನು ಗಮನಿಸಲಾಗುವುದು. ೧೨ನೇ ಶತಮಾನದಲ್ಲಿ ರಚನೆಯಾದ ವಚನಗಳಿಗೆ 'ಅಚ್ಚಗನ್ನಡದ ವಚನಗಳು' ಎಂದು ಕರೆದಿದ್ದರೂ ಈ ವಚನಗಳು ೧೯ನೇ ಶತಮಾನದ ಕನ್ನಡದಲ್ಲಿ ಮತ್ತೆ ವ್ಯಾಖ್ಯಾನಗೊಂಡಿರುವುದು ಕುತೂಹಲಕಾರಿಯಾಗಿದೆ. ವಸಾಹತು ಸಂದರ್ಭದಲ್ಲಿನ ಬಹುತೇಕ ವೀರಶೈವ ಪಠ್ಯಗಳು ಧಾರ್ಮಿಕ ಅರ್ಥಗಳಿಂದ

ಅಧಿಕೃತಗೊಳ್ಳಲು ಟೀಕುಗಳ ದಾರಿಯನ್ನು ಅನುಸರಿಸಿವೆ. ಭಾಷಾಂತರದ ಮಾದರಿಯಾದ ಟೀಕು ಅಥವಾ ವ್ಯಾಖ್ಯಾನಗಳ ಮೂಲಕ ವೀರಶೈವ ಕೃತಿಗಳಿಗೆ ಹೊಸ ಓದಿನ ಸ್ಥಳಾವಕಾಶ ಕೊಡುವ ಯತ್ನಗಳು ನಡೆದವು. ಇದಕ್ಕೆ ಕಾರಣಗಳೇನು ಎಂಬುದನ್ನು ಈ ಕೆಳಗಿನ ಅಂಶಗಳಲ್ಲಿ ಗುರುತಿಸಿಕೊಳ್ಳಬಹುದು.

೧. ವಸಾಹತುಶಾಹಿಯಿಂದಾಗಿ ಹೊರಗಿನ ಧರ್ಮಗಳು ವಿವಿಧ ಆಯಾಮಗಳಲ್ಲಿ ಜನಪ್ರಿಯತೆಯನ್ನು ಪಡೆಯುತ್ತಿತ್ತು.

೨. ವೀರಶೈವೇತರ ಧರ್ಮವಾದ ವೈದಿಕಧರ್ಮ ಭರತ ಖಂಡಕ್ಕೆ ಪರ್ಯಾಯವಾಗಿ ಬಳಸುವ ಪ್ರಯೋಗವನ್ನು ವಿದೇಶಿ ವಿದ್ವಾಂಸರು ಮಾಡುತ್ತಿದ್ದರು.

೩. ಓರಿಯೆಂಟಲೀಸಂನ ವಿಚಾರಧಾರೆಯ ಹಿನ್ನೆಲೆಯಲ್ಲಿ ವೀರಶೈವ ಸಾಹಿತ್ಯವನ್ನು ಪುನರುತ್ಪಾದಿಸುವ ಪ್ರಯತ್ನಕ್ಕೆ ಟೀಕು ಪೂರಕ ಮಾದರಿ ಎನಿಸಿರಬಹುದು.

೪. ವಚನಗಳನ್ನು ವೀರಶೈವ ಧರ್ಮದ ಸಾಹಿತ್ಯವೆಂದು ಅಧಿಕೃತಗೊಳಿಸುವುದರೊಂದಿಗೆ ಧರ್ಮ ಸಂಘಟನೆಯ ಕೆಲಸಗಳನ್ನು ಕೈಗೊಳ್ಳಬೇಕಿತ್ತು.

ಹೀಗಾಗಿ ವೀರಶೈವ ಧಾರ್ಮಿಕ ಸಾಹಿತ್ಯವು 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಹೆಚ್ಚು ಸಂಖ್ಯೆಯಲ್ಲಿ ತಾತ್ಪರ್ಯಗೊಂಡಿರುವ ಸಾಧ್ಯತೆಯಿದೆ.

ಕನ್ನಡದ ಕೃತಿಗಳೂ ಮತ್ತೆ ಕನ್ನಡದಲ್ಲಿ ತಾತ್ಪರ್ಯ, ಅರ್ಥ ಮತ್ತು ವ್ಯಾಖ್ಯಾನಗಳನ್ನು ಆಧುನಿಕ ಅವಧಿಯಲ್ಲಿ ಪಡೆದುಕೊಂಡವು. ಪ್ರೌಢದೇವರಾಯ ಕಾವ್ಯದಂತಹ ಚಾರಿತ್ರಿಕ ಕೃತಿಯೊಂದಿಗೆ 'ವೀರಶೈವ ವಿವಾಹ'ದಂತಹ ಕೃತಿಗಳಿಗೆ ಸಹ ವ್ಯಾಖ್ಯಾನ ಬರೆದಿದ್ದಾರೆ. ವಿವಾಹ ಧರ್ಮದ ಭಾಗವಾಗಿಯೆ ರೂಪುಗೊಂಡಿರುವುದರಿಂದ ವಿವಾಹ ಧರ್ಮ, ಆಚರಣೆಯ ಪ್ರತಿನಿಧಿಕರಣವು ಆಗಿತ್ತು. ಹೀಗಾಗಿ ಇಂತಹ ವಿಶಿಷ್ಟ ಕೃತಿಗಳಿಗೆ ೧೯ನೇ ಶತಮಾನದ ಸಂದರ್ಭದ ಅರ್ಥಕೊಡುವ, ಅಧಿಕೃತಗೊಳಿಸುವ ಕೆಲಸ ಮಾಡಿದರು. 'ರಾಜಶೇಖರ ವಿಳಾಸ' ಸುಮಾರು ೧೦ಕ್ಕಿಂತ ಹೆಚ್ಚುಸಾರಿ ವ್ಯಾಖ್ಯಾನಗೊಂಡಿವೆ. ಇಂಗ್ಲಿಷ್ ಗೀತಗಳು ಪೂರ್ವದಲ್ಲಿ 'ರಾಜಶೇಖರ ವಿಳಾಸ' ಕಾವ್ಯವಾಚನ ಪರಂಪರೆಗೆ ಸೇರಿಕೊಂಡಿತ್ತು. ಇದರಿಂದಾಗಿ ಕೇಳುಗರಿಗಾಗಿ ಅರ್ಥೈಸುವ, ಶೋತೃಗಳಿಗೆ ಭಿನ್ನ ಮಾದರಿಗಳಲ್ಲಿ ವಿವರಿಸುವ ಕಾರಣಗಳಿಂದ ಹೆಚ್ಚಿನ ವ್ಯಾಖ್ಯಾನಕಾರರು ಸಮಕಾಲೀನ ಭಾಷೆಗೆ ಭಾಷಾಂತರಿಸುವ ಪ್ರಯತ್ನ ಮಾಡಿದ್ದಾರೆ.

ಚರಿತ್ರೆಯುದ್ದಕ್ಕೂ ನಡೆದ ಧರ್ಮಗಳ ನಡುವಿನ ಪೈಪೋಟಿ ಟೀಕುಗಳ ರಚನೆಯ ಸಂದರ್ಭದಲ್ಲಿಯೂ ನಡೆದಂತಿದೆ. ಆಧುನಿಕ ಸಂದರ್ಭದಲ್ಲಿ ಪ್ರಕಟವಾಗಿರುವ ಟೀಕುಗಳ ಪ್ರಮಾಣವನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಗಮನಿಸಿದರೆ ವೈದಿಕ ಹಾಗೂ ವೀರಶೈವರ ಕೃತಿಗಳಿಗೆ ಬಹುತೇಕವಾಗಿ ಹೆಚ್ಚಿನ ಪ್ರಮಾಣದ ವ್ಯಾಖ್ಯಾನಗಳು ರಚನೆಗೊಂಡಿವೆ. ವೈದಿಕ ಧರ್ಮದ ವೇದ, ಉಪನಿಷತ್ ಮತ್ತು ಮಹಾಕಾವ್ಯದ ಭಾಗಗಳಿಗೆ ಪ್ರತ್ಯೇಕವಾದ ಟೀಕುಗಳು

ಬಂದಿವೆ. ಗಮಕ ಕಾವ್ಯವಾಗಿ ಜನಪ್ರಿಯಗೊಂಡ 'ಕುಮಾರವ್ಯಾಸ ಭಾರತ' ಹಲವರಿಂದ ವ್ಯಾಖ್ಯಾನಗೊಂಡಿದೆ. ಕೇಳುಗರಿಗೆ ಧಾರ್ಮಿಕ ಹಿನ್ನೆಲೆಯಲ್ಲಿ ಕಾವ್ಯದ ಅರ್ಥ, ಭಾವ, ತಾತ್ಪರ್ಯ, ವಿಶ್ಲೇಷಣೆಯನ್ನು ಸಮಕಾಲೀನ ಆಧುನಿಕ ಭಾಷೆಯಲ್ಲಿ ಭಾಷಾಂತರಿಸಲಾಗಿದೆ. ಉಳಿದಂತೆ ಪ್ರಾಚೀನ ಕೃತಿಗಳನ್ನು ಆಧುನಿಕ ಸಂದರ್ಭದಲ್ಲಿ ಅರ್ಥೈಸಿಕೊಳ್ಳಲು 'ಹರಿಕಥಾಮೃತಸಾರ', 'ಮನುಸ್ಮೃತಿ', 'ಭಾಗವತ', 'ಪುರಾಣ', 'ಗೀತಗೋವಿಂದ', 'ವೇದಾಂತ ವಿಚಾರ', 'ಭಗವದ್ಗೀತೆ' ಇತ್ಯಾದಿ ಕೃತಿಗಳಿಗೆ ವ್ಯಾಖ್ಯಾನ ರಚಿಸಿದ್ದಾರೆ. ''ಒಂದು ಕಾಲದ ಸಂಸ್ಕೃತ, ಪ್ರಾಕೃತ ಮೂಲದ ಧಾರ್ಮಿಕ ಗ್ರಂಥಗಳನ್ನು ಅವುಗಳ ಕೈಪಿಡಿಯಂತಿರುವ ಇತಿಹಾಸ, ಪುರಾಣಗಳಾದ ರಾಮಾಯಣ ಮಹಾಭಾರತಗಳಂತಹ ಕಾವ್ಯಗಳನ್ನು ಕನ್ನಡೀಕರಿಸಿದ ಪ್ರಾಚೀನ ಸಾಹಿತ್ಯಕ್ಕಿಂತಲೂ ಭಿನ್ನವಾಗಿ 'ಟೀಕಾ ಸಾಹಿತ್ಯ' ಸೃಷ್ಟಿಯಾಗಿದೆ'' (ರವೀಂದ್ರನಾಥ ಕೆ. ೨೦೦೬. ಪು.೪). ಎಂಬುದು ಟೀಕು ಪ್ರಾಚೀನ ಪುನರ್‌ಲೇಖಿಗಳಿಗಿಂತ ಹೇಗೆ ಭಿನ್ನವಾದ ಭಾಷಾಂತರ ಮಾದರಿಯೆಂಬುದನ್ನು ಖಚಿತಪಡಿಸುತ್ತದೆ. ವೈದಿಕ ಧರ್ಮದ ಬಹುತೇಕ ಧಾರ್ಮಿಕ ಕೃತಿಗಳ 'ಮೂಲ' ಸಂಸ್ಕೃತದಲ್ಲಿ ಹಾಗೂ ಕನ್ನಡದಲ್ಲಿಯೂ ಇವೆ. ಸಂಸ್ಕೃತದ ಕೃತಿಗಳಿಗೆ ಕನ್ನಡದಲ್ಲಿಯೂ ಮತ್ತು ಕನ್ನಡದ ಕೃತಿಗಳಿಗೆ ಮತ್ತೆ ಕನ್ನಡದಲ್ಲಿಯೇ ವ್ಯಾಖ್ಯಾನ ಬರೆಯುವ ವಿಧಾನ ಭಾಷಾಂತರವೆ ಆಗಿದೆ.

ಭಾಷಾಂತರದ ಕೃತಿಗಳಿಗೆ 'ಮೂಲ' ಎನ್ನುವುದು ಹೇಗೆ ಮುಖ್ಯವೊ ಹಾಗೇ ಟೀಕು/ ವ್ಯಾಖ್ಯಾನಗಳ ಸಂದರ್ಭದಲ್ಲಿಯೂ 'ಮೂಲ' ಗಮನಾರ್ಹವಾದುದು. ಭಾಷಾಂತರಕಾರರು ಮೂಲದ ಕುರಿತು ಹೊಂದಿದ ನಿಲುವುಗಳಿಗೂ ವ್ಯಾಖ್ಯಾನಕಾರರು ಮೂಲದ ಕುರಿತು ತಳೆದ ನಿಲುವುಗಳ ನಡುವೆ ಸಾಮ್ಯತೆಯಿದೆ. ಟೀಕು ಭಾಷಾಂತರ ಮಾದರಿಯಾದರೂ ಕೃತಿಯ ತಾಂತ್ರಿಕ ದೃಷ್ಟಿಯಿಂದ ಒಂದು ವಿಶಿಷ್ಟ ಅವಕಾಶ ಟೀಕಾ ಗ್ರಂಥದಲ್ಲಿ ದೊರೆಯುತ್ತದೆ. ಅದೇನೆಂದರೆ, ಟೀಕಾಕಾರ/ವ್ಯಾಖ್ಯಾನಕಾರರ ಭಾಷಾಂತರಕಾರರಂತೆ ಕೇವಲ ಭಾಷಾಂತರದ ಭಾಗವನ್ನು ಮಾತ್ರ ಕೊಡದೆ ಮೊದಲು ಮೂಲವನ್ನು ಕೊಟ್ಟು, ನಂತರ ಅದಕ್ಕೆ ಅರ್ಥ, ತಾತ್ಪರ್ಯ ಅಥವಾ ವ್ಯಾಖ್ಯಾನಗಳನ್ನು ನೀಡಿರುತ್ತಾರೆ. ಇಲ್ಲಿ ಓದುಗರಿಗೆ 'ಮೂಲ' ಮತ್ತು 'ಭಾಷಾಂತರ'ಗಳೆರಡು ಒಂದೇ ಪಠ್ಯದಲ್ಲಿ ದೊರೆಯುತ್ತದೆ. ಆದರೆ ಈ ಅವಕಾಶ ಆಧುನಿಕ ಭಾಷಾಂತರ ಕೃತಿಗಳಿಗಿರುವುದಿಲ್ಲ.

ಆಧುನಿಕ ಪೂರ್ವ ಅವಧಿಯಲ್ಲಿ ಟೀಕುಗಳು ಹಲವರಿಗಾಗಿ ಅರ್ಥೈಸುವ ಭಾಗವಾಗಿ ಹಾಗೂ ಪಾಂಡಿತ್ಯದ ಪ್ರಶ್ನೆಯಾಗಿ ರೂಪುಗೊಂಡರೆ ಆಧುನಿಕ ಸಂದರ್ಭದಲ್ಲಿ ಭಿನ್ನ ಆಯಾಮ ಪಡೆದುಕೊಂಡಿತು. ವಸಾಹತು ಸಂದರ್ಭದಲ್ಲಿನ ಪಲ್ಲಟದಿಂದ ಧರ್ಮಗಳ ಸಂಘಟನೆ ಅಗತ್ಯವೆನಿಸಿತ್ತು. ಹಾಗಾಗಿ ವೀರಶೈವ, ವೈದಿಕ ಮತ್ತು ಜೈನ ಧರ್ಮಗಳು ಧಾರ್ಮಿಕ ಕೃತಿಗಳನ್ನು ವ್ಯಾಖ್ಯಾನಿಸುವ ಮೂಲಕ ಆಯಾ ಧರ್ಮದ, ಸಮುದಾಯದ ಸಂಘಟನೆಯನ್ನು ಮಾಡಲು ಪ್ರಯತ್ನಿಸಿದವು. ತಮ್ಮ ತಮ್ಮ ಧರ್ಮವನ್ನು ಮುಂಚೂಣಿಗೆ ತರಬೇಕೆಂಬ ಬಯಕೆ/ ಉತ್ಸಾಹ ಎಲ್ಲರಲ್ಲಿಯೂ ಇತ್ತು. ಇದರಿಂದ ಧಾರ್ಮಿಕ ಕೃತಿಗಳು ಇಂಗ್ಲಿಷ್ ಗೀತಗಳು ಪೂರ್ವದ ಅವಧಿಯಲ್ಲಿ ಹೊಸ ಅರ್ಥದೊಂದಿಗೆ ನಾನಾ ಉದ್ದೇಶಗಳಡಿಯಲ್ಲಿ ಹೊಸ ಓದಿಗಾಗಿ ಟೀಕು/ವ್ಯಾಖ್ಯಾನಗಳನ್ನು ಪಡೆದುಕೊಂಡವು.

**೬.೬.೨. ಧಾರ್ಮಿಕೇತರ ಕೃತಿಗಳಿಗೆ ಬಂದ ಟೀಕುಗಳು**

ಒಟ್ಟು ಟೀಕುಗಳು : ೪೧

೧. ವ್ಯಾಕರಣ : ೧೩

೨. ವೈದ್ಯಕೀಯ : ೧೪

೩.ಇತರೆ : ೧೪




ಮೇಲಿನ ಚಿತ್ರವನ್ನು ಗಮನಿಸಿದಾಗ, ವೈದ್ಯಕೀಯ ಹಾಗೂ ಇತರ ವಿಷಯಗಳ ಕೃತಿಗಳಿಗೆ ಸುಮಾರು ೧೪ ಟೀಕುಗಳು ರಚನೆಯಾದರೆ, ವ್ಯಾಕರಣ ಕೃತಿಗೆ ೧೩ ಟೀಕುಗಳನ್ನು ಬರೆಯಲಾಗಿದೆ. ಸಾಹಿತ್ಯದ ಶಾಸ್ತ್ರೀಯವಾದ ಬರವಣಿಗೆ ಹಾಗೂ ಅಧ್ಯಯನದ ಭಾಗವಾಗಿ ವ್ಯಾಕರಣವನ್ನು ಅರ್ಥೈಸಿಕೊಳ್ಳುವುದು ಮುಖ್ಯವೆನಿಸಿರುವುದರಿಂದ ತಾತ್ಪರ್ಯಗಳನ್ನು ರಚಿಸಿ ಅವುಗಳಿಗೆ ಖಚಿತ ಅರ್ಥಕೊಡುವ ಪ್ರಯತ್ನ ಮಾಡಿದ್ದಾರೆ. ಹೊಸ ಜ್ಞಾನಕ್ಷೇತ್ರಗಳು ಪಶ್ಚಿಮದಿಂದ ಪರಿಚಿತಗೊಂಡು ಇಲ್ಲಿ ಅನುಷ್ಠಾನಗೊಳ್ಳುತ್ತಿದ್ದುದರಿಂದ ನಮ್ಮ ಪಾರಂಪರಿಕ ಜ್ಞಾನವನ್ನು ವ್ಯಾಖ್ಯಾನಿಸುವ ಪ್ರಯತ್ನಗಳು ನಡೆದವು. ಹೀಗಾಗಿ ವೈದ್ಯಕೀಯ ಮತ್ತು ಇತರ ಕೃತಿಗಳಿಗೆ ಹೆಚ್ಚು ತಾತ್ಪರ್ಯ ಬರೆದಿರುವ ಸಾಧ್ಯತೆ ಇದೆ.

**೬.೬.೨.೧. ಟೀಕುಗಳ ಸ್ವರೂಪ**

ವಸಾಹತುಶಾಹಿಯ ಸಂದರ್ಭದಲ್ಲಿ ಪರಿಚಯಗೊಂಡ ಹೊಸ ಜ್ಞಾನಶಿಸ್ತುಗಳು ಹೊಸ ಓದಿಗೆ ತೆರೆದುಕೊಂಡ ಭಾರತೀಯ ಯುವ ಜನಾಂಗದಲ್ಲಿ ಕುತೂಹಲವನ್ನುಂಟು ಮಾಡಿತ್ತು. ಈ ಕುತೂಹಲದಿಂದಾಗಿ ಭಾರತೀಯ ಪರಂಪರೆಯನ್ನು ಪುನರ್‌ವ್ಯಾಖ್ಯಾನಿಸುವುದರೊಂದಿಗೆ ಅವುಗಳನ್ನು ಕ್ರೋಢೀಕರಿಸಿ ಪಶ್ಚಿಮದ ಜ್ಞಾನಶಿಸ್ತುಗಳಿಗೆ

ಸಮನಾಂತರವಾಗಿ ರೂಪಿಸುವ ಪ್ರಯತ್ನಕ್ಕೆ ಮುಂದಾಗಿರುವುದನ್ನು ಕಾಣಬಹುದು. ಧಾರ್ಮಿಕೇತರ ಕೃತಿಗಳಿಗೆ ಬಂದಿರುವ ಟೀಕು, ವ್ಯಾಖ್ಯಾನಗಳನ್ನು ಈ ಮೇಲಿನಂತೆ ಗ್ರಹಿಸಿಕೊಳ್ಳುವುದು ಸಮಂಜಸವೆನಿಸುತ್ತದೆ. ಆಧುನಿಕ ಪೂರ್ವದಲ್ಲಿ ಸಂಸ್ಕೃತ, ಕನ್ನಡದ ಭಾಷೆಯಲ್ಲಿ ರಚನೆಯಾದ ಧಾರ್ಮಿಕೇತರ ಕೃತಿಗಳನ್ನು ವಸಾಹತು ಸಂದರ್ಭದ ಕಾಲಾವಧಿಗೆ ತಕ್ಕಂತೆ ಮರುರೂಪಿಸುವ ಕಾಯಕವನ್ನು ಟೀಕುಗಳ ಮೂಲಕ ಕೈಗೊಂಡರು. ಇದರಿಂದಾಗಿ ಆಧುನಿಕತೆಯಿಂದ ಪರಿಚಯಗೊಂಡ ವೈದ್ಯಕೀಯ, ತಂತ್ರಜ್ಞಾನದಂತಹ ಜ್ಞಾನಕ್ಷೇತ್ರಕ್ಕೆ ಸಮನಾಂತರವಾಗಿ, ನಮ್ಮಲ್ಲಿ ಹಿಂದಿನಿಂದಲೂ ಕಾಪಿಟ್ಟುಕೊಂಡು ಬಂದಿರುವ ಶಾಸ್ತ್ರ ಗ್ರಂಥಗಳನ್ನು, ವೈದ್ಯಕೀಯ ಕೃತಿಗಳನ್ನು ಆಧುನಿಕ ಅರ್ಥದಲ್ಲಿ ಅರ್ಥೈಸುವ ಕೆಲಸಗಳು ವ್ಯಾಖ್ಯಾನಗಳಿಂದ ನಡೆದವು. ಈ ಕಾಲಘಟ್ಟದ ಓದುಗ ಸಮುದಾಯಕ್ಕೆ ಇವುಗಳನ್ನು ಒದಗಿಸುವುದು ಪರಂಪರೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಮುಖ್ಯವೆಂದು ತಿಳಿದಿದ್ದರಿಂದ ಧಾರ್ಮಿಕ ಕೃತಿಗಳಂತೆ ಧಾರ್ಮಿಕೇತರ ಕೃತಿಗಳೂ ಸಹ ಹೆಚ್ಚೆಚ್ಚು ವ್ಯಾಖ್ಯಾನಗೊಂಡವು.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಶಾಸ್ತ್ರ ಅಥವಾ ವ್ಯಾಕರಣ ಕೃತಿಗಳಿಗೆ ಟೀಕುಗಳು ಬಂದಿರುವುದನ್ನು ಈ ಹಿಂದೆ ಗಮನಿಸಲಾಗಿದೆ. ಇಲ್ಲಿ ಅವುಗಳ ಸ್ವರೂಪದ ಕುರಿತು ಗಮನ ಹರಿಸಲಾಗುವುದು. ಸುಮಾರು ೧೩ ಶಾಸ್ತ್ರ ಕೃತಿಗಳು ಈ ಅವಧಿಯಲ್ಲಿ ವ್ಯಖ್ಯಾನಗೊಂಡಿವೆ. ಅವುಗಳಲ್ಲಿ 'ಶಬ್ದಮಂಜರಿ', 'ಕಬ್ಬಿಗರ ಕೈಪಿಡಿ', 'ಕಾವ್ಯಾವಲೋಕನ' ಮತ್ತು 'ಅಮರಕೋಶ'ದಂತಹ ಕೃತಿಗಳಿಗೆ ಬಂದ ತಾತ್ಪರ್ಯ, ಟೀಕುಗಳು ಮಹತ್ವವಾದವುಗಳು. ಶಬ್ದಮಂಜರಿಗೆ ಟೀಕನ್ನು ರಚಿಸುವಾಗ 'ಕರ್ಣಾಟಕ ಶಬ್ದಮಂಜರಿಗೆ ಟೀಕು ಅಥವಾ ವ್ಯಾಖ್ಯಾನ' ಗಳೆಂದು ಕರೆದಿದ್ದಾರೆ. ಈ 'ಕರ್ಣಾಟ' ವೆಂಬುದು ೧೯ನೇ ಶತಮಾನದ ಸಾಂಸ್ಕೃತಿಕ ಸಂದರ್ಭದಲ್ಲಿ ವಿವಿಧ ಆಯಾಮಗಳಲ್ಲಿ ನಿರ್ವಚನಗೊಂಡಿರುವಂತದ್ದು. ಯಾಕೆಂದರೆ ಇಂಗ್ಲಿಷ್ ಗೀತಗಳು ಪೂರ್ವದಲ್ಲಿ 'ಕರ್ಣಾಟ'ವು ಭಾಷೆ, ಸಂಸ್ಕೃತಿ, ರಾಷ್ಟ್ರೀಯತೆ ಹಾಗೂ ಭೂ ಪ್ರದೇಶಗಳಿಗೆ ಪರ್ಯಾಯವಾಗಿ ಬಳಕೆಯಾಗುವ, ಪ್ರತಿನಿಧಿಸುವ ಶಕ್ತಿಯನ್ನು ಹೊಂದಿತ್ತು. ಇದಕ್ಕೂ ಮೊದಲು ನಾಗವರ್ಮ ಭಾಷೆಗೆ ಸಂವಾದಿಯಾಗಿ ಬಳಸಿರುವುದು ತಿಳಿದ ಸಂಗತಿ. ಬಾಣನ ಕಾದಂಬರಿಯನ್ನು ಕನ್ನಡಕ್ಕೆ ತಂದುಕೊಳ್ಳುವಾಗ, 'ಕನ್ನಡೀಕರಣ'ಗೊಳಿಸುವಾಗ 'ಕರ್ಣಾಟ ಕಾದಂಬರಿ' ಯೆಂದು ಭಾಷಾಂತರಿಸಿಕೊಂಡಿದ್ದಾನೆ. ಈ ಸಂಗತಿಯ ಅರಿವು ವ್ಯಾಖ್ಯಾನಕಾರರಿಗೆ ಇದ್ದಿರಬಹುದು. ಅಲ್ಲದೆ ಇಂಗ್ಲಿಷ್ ಗೀತಗಳು ಪೂರ್ವದಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಗೊಂಡಿರುವ ಬಹುತೇಕ ನಾಟಕಗಳ ಶೀರ್ಷಿಕೆ 'ಕರ್ಣಾಟ' ವೆಂದೆ ಆರಂಭವಾಗುತ್ತದೆ. ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಬೋಧನಾ ಸಾಮಗ್ರಿಯಾಗಿ ರೂಪಿಸುವ ಅಗತ್ಯದಿಂದಾಗಿ ಟೀಕುಗಳಿಗೆ 'ಕರ್ಣಾಟ'ವೆಂದು ಬಳಸಿರುವ ಸಾಧ್ಯತೆಯಿದೆ. ವ್ಯಾಕರಣ ಕೃತಿಗಳಿಗೆ ಕನ್ನಡದಲ್ಲಿ ಅರ್ಥ, ತಾತ್ಪರ್ಯ, ವ್ಯಾಖ್ಯಾನ ಬರೆಯುವುದೆಂದರೆ ಅದು 'ಕರ್ಣಾಟ' ಭಾಷಾಂತರವೆ ಆಗುತ್ತಿತ್ತು (?)

೧೯ನೇ ಶತಮಾನದಲ್ಲಿ ಸುಮಾರು ಐವತ್ತರ ದಶಕದ ನಂತರ ಹೊಸ ವಿಚಾರಗಳು, ಜ್ಞಾನಶಿಸ್ತುಗಳು ಎನಿಸಿಕೊಂಡಿರುವ ಪಶ್ಚಿಮದ ವಿಜ್ಞಾನ, ವೈದ್ಯಕೀಯ ಮತ್ತು ಆಧುನಿಕ ಸಾಹಿತ್ಯ ಪ್ರಕಾರಗಳು ಭಾಷಾಂತರದ ವಿವಿಧ ಮಾದರಿಗಳಲ್ಲಿ ಕನ್ನಡದಲ್ಲಿ ರೂಪುಗೊಂಡಿರುವುದು ಕುತೂಹಲಕಾರಿಯಾದುದು. ಅಪರಿಚಿತ ಜ್ಞಾನಶಿಸ್ತುಗಳನ್ನು ಶಿಕ್ಷಣ ಇತ್ಯಾದಿ ಮಾದರಿಗಳಿಂದ ಪರಿಚಯಿಸುತ್ತಿದ್ದರಿಂದ ಈ ನೆಲದ ಪಾರಂಪರಿಕ ಜ್ಞಾನ ಮೂಲೆಗುಂಪಾಗುವ

ಸಾಧ್ಯತೆಗಳು ಎದುರಾದವು. ಇದರಿಂದಾಗಿ ಪ್ರಮುಖವಾಗಿ ಕರ್ನಾಟಕ (ಭಾರತ) ದ ಪಾರಂಪರಿಕ ಜ್ಞಾನವನ್ನು ಸಂಘಟಿಸುವ, ಸಂರಚಿಸುವ ಹಾಗೂ ಜನಸಮುದಾಯದತ್ತ ಕೊಂಡೊಯ್ಯಲು ಸಂಸ್ಕೃತ ಹಾಗೂ ಕನ್ನಡದ ಕೃತಿಗಳು ವಸಾಹತು ಸಂದರ್ಭದಲ್ಲಿ ಕನ್ನಡಕ್ಕೆ ಬರಲು ಆರಂಭಗೊಂಡವು. ಇದರ ಜೊತೆಗೆ ಪರಂಪರೆಯ ಮುಂದುವರಿಕೆ ಹಾಗೂ ಸಂಸ್ಕೃತಿ, ಸಂಪ್ರದಾಯದ ಉಳಿವಿನ ಪ್ರಶ್ನೆಯನ್ನು ಹಾಕಿಕೊಂಡ ಹಲವರು ನಮ್ಮಲ್ಲಿನ ಸಾಂಪ್ರದಾಯಿಕ ವೈದ್ಯಕೀಯ ಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಗಳಿಗೆ ನಿರ್ದಿಷ್ಟ ಅರ್ಥಕೊಡುವ ಪ್ರಯತ್ನಗಳನ್ನು ಮಾಡಿದರು. ಇದರ ಭಾಗವಾಗಿ ವೈದ್ಯಕೀಯ ಕೃತಿಗಳಿಗೆ ಕನ್ನಡದಲ್ಲಿ ಅರ್ಥ, ತಾತ್ಪರ್ಯ ಬರೆಯುವ ಮೂಲಕ ಟೀಕುಗಳನ್ನು ರಚಿಸಿದರು. ಅಂದರೆ ಸಮಕಾಲೀನ ಕನ್ನಡಕ್ಕೆ ಭಾಷಾಂತರಿಸಿದರು ಎಂದರ್ಥ. ಈ ಮಾದರಿಯಲ್ಲಿ ಭಾಷಾಂತರಗೊಂಡ ಕೃತಿಗಳೆಂದರೆ, 'ವೈದ್ಯಸಾರ ಸಂಗ್ರಹ', 'ಚಿಕಿತ್ಸಾಸಾರ', 'ವೈದ್ಯ ಚಿಂತಾಮಣಿ', 'ಅಶ್ವವೈದ್ಯ' ಇತ್ಯಾದಿ. ಟೀಕುಗಳ ಪಟ್ಟಿಯನ್ನು ಅನುಬಂಧ ಮೂರರಲ್ಲಿ ಗಮನಿಸಬಹುದು.

ಧರ್ಮ, ವೈದ್ಯಕೀಯ ಇತ್ಯಾದಿ ವಿಷಯಗಳನ್ನು ಕನ್ನಡದಲ್ಲಿ ವ್ಯಾಖ್ಯಾನಿಸಿಕೊಂಡಂತೆ ಬದುಕಿನೊಂದಿಗೆ ಬೆಸೆದುಕೊಂಡ ಜೋತಿಷ್ಯ, ವಾಸ್ತುಶಿಲ್ಪ, ಹಸ್ತಮುದ್ರಿಕಾ ಶಾಸ್ತ್ರ ಮುಂತಾದ ವಿಷಯಗಳ ಕೃತಿಗಳನ್ನು ಸಹ ೧೯ನೇ ಶತಮಾನದ ಅರ್ಥದಲ್ಲಿ ಅರ್ಥೈಸಿಕೊಂಡಿದ್ದಾರೆ. ಈ ವಿಚಾರ ಟೀಕು ಅಥವಾ ತಾತ್ಪರ್ಯಗಳು ತಮ್ಮ ಕಾರ್ಯ ವ್ಯಾಪ್ತಿಯನ್ನು ಎಲ್ಲಿಯವರೆಗೆ ವಿಸ್ತರಿಸಿಕೊಂಡಿದ್ದವು ಹಾಗೂ ಯಾವೆಲ್ಲ ವಿಷಯಗಳನ್ನು ತಮ್ಮೊಳಗೆ ಸೇರಿಸಿಕೊಂಡಿದ್ದವು ಎಂಬುದಕ್ಕೆ ಸಮರ್ಥನೆ ನೀಡುವಂತಿವೆ. ಧಾರ್ಮಿಕ ಕೃತಿಗಳೊಂದಿಗೆ ಇತರ ವಿಷಯಗಳ ಕೃತಿಗಳನ್ನು ಟೀಕುಗಳ ಮಾದರಿಯಲ್ಲಿ ಮರುರೂಪಿಸಿಕೊಳ್ಳುವುದಕ್ಕೆ ವಸಾಹತುಶಾಹಿಯೇ ಪ್ರಮುಖ ಕಾರಣ. ೧೮ ಮತ್ತು ೧೯ ನೇ ಶತಮಾನದಲ್ಲಿ ಪ್ರವೇಶಗೊಂಡ ಆಧುನಿಕತೆಯಿಂದಾಗಿ ಇಲ್ಲಿನ ಪಾರಂಪರಿಕ ಜ್ಞಾನ, ವಿಚಾರಗಳನ್ನು ಅವೈಜ್ಞಾನಿಕವೆಂದೂ, ಸಾಂಪ್ರದಾಯಕವೆಂದು ಪರಿಭಾವಿಸುವ ಪ್ರಯತ್ನಗಳು ನಡೆಯುತ್ತಿದ್ದವು. ಹೀಗಾಗಿ ತಲೆತಲಾಂತರಗಳಿಂದ ಕಾದಿರಿಸಿಕೊಂಡು ಬಂದಿರುವ, ನಂಬಿಕೆ ವಿಶ್ವಾಸಗಳನ್ನೇ ಮೂಲ ದ್ರವ್ಯವಾಗಿರಿಸಿಕೊಂಡ ಹಾಗೂ ಜನಸಮುದಾಯದತ್ತ ಇವುಗಳನ್ನು ಕೊಂಡೊಯ್ಯುವ ಕಾರಣದಿಂದ 'ಹಸ್ತಮುದ್ರಿಕಾ', 'ಇಂದ್ರಜಾಲ', 'ತಂತ್ರಪ್ರಕಾಶ', 'ದಾಂಪತ್ಯ' ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಕೃತಿಗಳಿಗೆ ಅರ್ಥ/ತಾತ್ಪರ್ಯಗಳನ್ನು ಬರೆದರು.

ಈ ಎಲ್ಲವುಗಳು ಧರ್ಮದ ಭಾಗವೇ ಆಗಿರುವುದರಿಂದ ಧಾರ್ಮಿಕ ಕೃತಿಗಳಂತೆ ವ್ಯಾಖ್ಯಾನಗೊಂಡಿರುವ ಸಾಧ್ಯತೆಯಿದೆ. ಹೊರಗಿನ ಪ್ರಭಾವ, ಪ್ರೇರಣೆಗಳ ನಡುವೆಯೂ ನಡೆಯುತ್ತಿದ್ದ ಈ ಬಗೆಯ ಭಾಷಾಂತರ ಪ್ರಕ್ರಿಯೆ ಕಾಲದೊಂದಿಗಿನ ಅನುಸಂಧಾನ; ಕಾಲಕ್ಕೆ ನೀಡಿದ ಉತ್ತರವೂ ಆಗಿದೆ.

### ೬.೭. ಟೀಕುಗಳು ರೂಪುಗೊಂಡ ಬಗೆಗಳು

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಟೀಕುಗಳನ್ನು ಗಮನಿಸಿದಾಗ ಕೆಲವು ಸಂಗತಿಗಳು ಅಧ್ಯಯನದಲ್ಲಿ ಕುತೂಹಲವನ್ನು ಮೂಡಿಸುತ್ತವೆ. ಅವುಗಳೆಂದರೆ ಒಬ್ಬ ವ್ಯಾಖ್ಯಾನಕಾರ ಹಲವು ಕೃತಿಗಳಿಗೆ ತಾತ್ಪರ್ಯ ಬರೆದಿರುವುದು, ಹಲವರು ಸೇರಿ ಒಂದೇ ಕೃತಿಗೆ ವ್ಯಾಖ್ಯಾನ ರಚಿಸಿರುವರು. ೧೮೫೦ ರಿಂದ ೧೯೨೦ ಅಂದರೆ ಸುಮಾರು ಏಳು ದಶಕಗಳ ಅವಧಿಯಲ್ಲಿ ಒಂದೇ ಕೃತಿ ಹಲವಾರು ಸಾರಿ ವ್ಯಾಖ್ಯಾನಗೊಂಡಿರುವುದನ್ನು ಕಾಣಬಹುದು.

ಈ ಹಿಂದೆ ಟೀಕುಗಳ ಸ್ವರೂಪದ ಕುರಿತು ಚರ್ಚಿಸುವಾಗ ಕೃತಿಯೊಂದನ್ನು ಒಂದು ಕಾಲದ ಜನ ಸಮುದಾಯದಿಂದ ಇನ್ನೊಂದು ಕಾಲದ ಜನ ಸಮುದಾಯಕ್ಕೆ ಒದಗಿಸುವ, ಅರ್ಥೈಸುವ ವಿಧಾನ ಎನ್ನಲಾಗಿತ್ತು. ಆದರೆ ೩೦-೪೦ ವರ್ಷದಲ್ಲಿ ಒಂದೇ ಕೃತಿ ಏಳೆಂಟು ಸಾರಿ ವ್ಯಾಖ್ಯಾನಗೊಂಡರೆ 'ಜನ ಸಮುದಾಯ' ಯಾವುದು ಎಂಬ ಪ್ರಶ್ನೆಯೆದುರಾಗುತ್ತದೆ. ಆದ್ದರಿಂದ ಇದಕ್ಕಿಂತ ಭಿನ್ನವಾದ ಸಾಧ್ಯತೆಗಳಿರಬಹುದು.

ವಿಕಳಂಕನ ಸ್ವರೂಪ ಸಂಬೋಧನಾ ಪಂಚವಿಸಂತ ಸುಮಾರು ನಾಲ್ಕುಸಾರಿ ನಾಲ್ವರಿಂದ ವ್ಯಾಖ್ಯಾನಗೊಂಡಿದೆ. ಷಡಕ್ಷರಿಯ 'ರಾಜಶೇಖರ ವಿಳಾಸ'ಕ್ಕೆ ೭೦ ವರ್ಷದಲ್ಲಿ ೧೧ ಸಾರಿ ತಾತ್ಪರ್ಯ ಬರೆಯಲಾಗಿದೆ. ಹಾಗೇ 'ಜೈಮಿನಿ ಭಾರತ'ಕ್ಕೆ ಸಹ ೧೦ ಸಾರಿ ವ್ಯಾಖ್ಯಾನ ರಚಿಸಿದ್ದಾರೆ. 'ಭಗವದ್ಗೀತೆ' ಹಾಗೂ 'ಹರಿ ಕಥಾಮೃತಸಾರ' ಕ್ಕೆ ಐದೈದು ಸಾರಿ ಟೀಕನ್ನು ಬರೆದಿದ್ದಾರೆ. ಈ ೭೦ ವರ್ಷಗಳ ಅವಧಿಯಲ್ಲಿ ೨, ೩ ಸಾರಿ ತಾತ್ಪರ್ಯಗೊಂಡ ಕೃತಿಗಳು ಹಲವಾರಿವೆ. ಯಾಕಾಗಿ ಈ ಕೃತಿಗಳು ಹೀಗೆ ನಾಲ್ಕೈದು ಸಾರಿ ವ್ಯಾಖ್ಯಾನಗೊಂಡವು ಹಾಗೂ ಇದಕ್ಕೆ ಕಾರಣಗಳೇನು ಎಂಬುವ ಕುತೂಹಲ ಸಹಜವಾದುದು.

'ರಾಜಶೇಖರ ವಿಳಾಸ' ಮತ್ತು 'ಕುಮಾರವ್ಯಾಸ' ಭಾರತ ಗಮಕವಾಚನವಾಗುತ್ತಿದ್ದರಿಂದ ಹೆಚ್ಚು ತಾತ್ಪರ್ಯಗಳು ಬಂದಿರಬಹುದು. ಆದರೆ ಜೈಮಿನಿ ಭಾರತ, ಹರಿಕಥಾಮೃತ ಸಾರ ಇತ್ಯಾದಿಗಳಿಗೆ? ಕೆಲವೊಂದು ಮನೆಗಳಲ್ಲಿ ಹಾಗೂ ದೇವಾಲಯಗಳಲ್ಲಿ ಈ ಕೃತಿಗಳು 'ಪಾರಾಯಣ' ಗೊಳ್ಳುತ್ತಿದ್ದರಿಂದ ಅರ್ಥ ಮತ್ತು ಸಂದರ್ಭದ ದೃಷ್ಟಿಯಿಂದಾಗಿ ಹಲವರಿಂದ ಟೀಕು, ವ್ಯಾಖ್ಯಾನಗಳನ್ನು ಹೊಂದಿರಬಹುದಾಗಿದೆ.

ಕೆಲವು ಟೀಕು ವ್ಯಾಖ್ಯಾನಗಳ ರಚನೆಯಲ್ಲಿ ವಿಶಿಷ್ಟವಾದ ಶಿಲ್ಪ (ಆಕಾರ) ಕಂಡು ಬರುತ್ತದೆ. ಆರಂಭದಲ್ಲಿ ಮುಂದಿನ ವಿಷಯ ಪ್ರಸ್ತಾವನೆಯ ಕನ್ನಡ ಅವತರಣಿಕೆ ಕೊಟ್ಟು, ಆಮೇಲೆ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಈ ಶ್ಲೋಕಗಳಿಗೆ ಟೀಕು ಬರೆದು, ಇಂತೀ ಪುರಾಣ, ವಾಕ್ಯರಣಗಳನ್ನು ಶ್ರೀ ಗುರು ಪುರಾತನರಿಗೆ ಉಪದೇಶವಿತ್ತು ಶಾವು ಎಂದು ಮುಗಿಸಿ ಇನ್ನೂ ಈ ಪುರಾತನರು ಗುರುವಾಕ್ಯ ತಪ್ಪದೇ ನಡೆದು ನುಡಿದು ವಚನಗಳೆಂದು ಕನ್ನಡ ವಚನಗಳನ್ನು ಉದಾಹರಿಸಿ ಟೀಕನ್ನು ಮುಗಿಸುತ್ತಾರೆ(ಉದ್ಧೃತ, ರವೀಂದ್ರನಾಥ ಕೆ. ೨೦೦೬, ಪು.೧೧). ಉದಾಹರಣೆ 'ಗಣಭಾಷ್ಯ ಮಾಲೆ'ಗೆ ಬರೆದ ಟೀಕು.

ಇಂಗ್ಲಿಷ್ ಗೀತಗಳು ಪೂರ್ವದಲ್ಲಿ ಬಂದಿರುವ ಟೀಕುಗಳನ್ನು ರಚಿಸಿದವರಲ್ಲಿ ಎಸ್.ಆರ್. ಕರಿಬಸವ ಶಾಸ್ತ್ರಿ, ಪದ್ಮರಾಜ ಪಂಡಿತ, ದಕ್ಷಿಣ ಮೂರ್ತಿ ಶಾಸ್ತ್ರಿ ಮತ್ತು ಮುಮ್ಮಡಿ ಕೃಷ್ಣರಾಜ ಮುಂತಾದವರು ಪ್ರಮುಖರಾಗಿದ್ದಾರೆ. ಕರಿಬಸವ ಶಾಸ್ತ್ರಿಯಂತಹ ವ್ಯಾಖ್ಯಾನಕಾರರು ಧಾರ್ಮಿಕ, ಧಾರ್ಮಿಕೇತರ ಕೃತಿಗಳಿಗೆ ಟೀಕನ್ನು ರಚಿಸಿರುವುದು ವಿಶಿಷ್ಟವಾಗಿದೆ. ಇದರಿಂದ ಯಾವೊಬ್ಬ ವ್ಯಾಖ್ಯಾನಕಾರನು ಧರ್ಮ ಅಥವಾ ವಿಷಯಕ್ಕೆ ಸೀಮಿತವಾಗಿರದೆ ಸ್ವತಂತ್ರವಾಗಿ ವ್ಯಾಖ್ಯಾಸುತ್ತಿದ್ದನು ಎಂಬುದು ತಿಳಿಯುತ್ತದೆ. ಹೀಗಾಗಿ ಧರ್ಮಗಳಿಗಿಂತ ಸಮಕಾಲೀನ ಸಂದರ್ಭದಲ್ಲಿ ಕೃತಿಗಳನ್ನು ಅರ್ಥೈಸುವುದು ಹಾಗೂ ಅವುಗಳ ಓದಿಗೆ, ಪಾಂಡಿತ್ಯಕ್ಕೆ ಅವಕಾಶ ನೀಡುವುದು ಮುಖ್ಯ ಎಂದು ತಿಳಿದಿರಬಹುದು. ಹೀಗಾಗಿ ''ಕೃತಿಯಲ್ಲಿರುವ ಅನೇಕ ದಾರ್ಶನಿಕ ಸಂದೇಹಗಳನ್ನು ಪರಿಹಾರ ಮಾಡುವುದಕ್ಕಾಗಿಯೇ ಮಧ್ಯಯುಗದಲ್ಲಿನ ವೈಷ್ಣವ ಸಂಪ್ರದಾಯದ ಪ್ರತಿಯೊಬ್ಬ ಆಚಾರ್ಯರೂ ಸಹ ಗ್ರಂಥಗಳ ಮೇಲೆ ವ್ಯಾಖ್ಯಾನವನ್ನು ರಚಿಸಿ ಗ್ರಂಥವನ್ನು

ಸುಬೋಧವನ್ನಾಗಿಯೂ ಮತ್ತು ಜನಪ್ರಿಯವನ್ನಾಗಿ ಮಾಡುವುದಕ್ಕೆ ಶ್ಲಾಘನೀಯವಾದ ಪ್ರಯತ್ನವನ್ನು ಮಾಡುತ್ತಾರೆ" (ರಾಮಚಂದ್ರ ಶಾಸ್ತ್ರಿ ಎಸ್. ೧೯೮೦, ಪು.೧೨೮). ಎಂಬುದರಿಂದ ವ್ಯಾಖ್ಯಾನಕಾರರ ಉದ್ದೇಶವೇನು ಎಂಬುದನ್ನು ಗುರುತಿಸಬಹುದಾಗಿದೆ. ಅಂದರೆ ಟೀಕುಗಳನ್ನು ಕೃತಿಯ ಜನಪ್ರಿಯತೆಯ ಹಿನ್ನೆಲೆಯಿಂದಲೂ ರಚಿಸಿರುವ ಸಾಧ್ಯತೆಯಿದೆ ಎನ್ನಬಹುದು.

ಭಾಷಾಂತರದ ಗಮನಾರ್ಹ ಮಾದರಿಯಲ್ಲಿ ಟೀಕು ಅಥವಾ ವ್ಯಾಖ್ಯಾನ ವಿಶಿಷ್ಟವಾದುದು. ಈವರೆಗಿನ ಚರ್ಚೆಯಿಂದ ಕಂಡುಕೊಂಡಿರುವುದೇನೆಂದರೆ, ಟೀಕುಗಳ ರಚನೆ ತಾತ್ವಿಕವಾಗಿ ಭಾಷಾಂತರವೇ ಆಗಿದೆ ಎಂಬುದು. ಈ ರೀತಿ ಭಾಷಾಂತರದ ಮಾದರಿಯಾಗಿರುವ ಟೀಕುಗಳ ರಚನೆಯಲ್ಲಿ ಕೆಲವೊಂದು ಗಮನಿಸಬೇಕಾದ ವಿಧಾನ ಅಥವಾ ಕ್ರಮಗಳಿವೆ. ಅವುಗಳೆಂದರೆ,

೧. ಕೆಲವು ಟೀಕಾಕಾರರು ಅಥವಾ ವ್ಯಾಖ್ಯಾನಕಾರರು ಒಂದು ಕೃತಿಯನ್ನು ವ್ಯಾಖ್ಯಾನಿಸುವಾಗ, ಟೀಕಿನ ಕೃತಿಯಲ್ಲಿ ಮೊದಲು ಮೂಲದ ಪದ್ಯ, ಶ್ಲೋಕ ಇತ್ಯಾದಿಗಳನ್ನು ಕೊಟ್ಟು ನಂತರದಲ್ಲಿ ಅದರ ಅರ್ಥ, ಭಾವಾನುವಾದ ಇಲ್ಲವೆ ತಾತ್ಪರ್ಯಗಳನ್ನು ಬರೆದಿರುತ್ತಾರೆ. ಈ ಕ್ರಮ ಭಾಷಾಂತರ ಮಾದರಿಯಾದ ಟೀಕುಗಳ ವಿಶಿಷ್ಟ ಗುಣವೆಂದೆ ಹೇಳಬೇಕು.

೨. ಮೂಲ ಕೃತಿಯ ಯಾವುದೇ ಭಾಗವನ್ನು ಕೊಡದೆಯೆ ನೇರವಾಗಿ ಕೃತಿಯಲ್ಲಿ ತಾತ್ಪರ್ಯ, ವ್ಯಾಖ್ಯಾನಗಳನ್ನು ನೀಡಿದ ವಿಧಾನಗಳು ಹೆಚ್ಚಾಗಿ ಕಂಡು ಬರುತ್ತದೆ.

೩. ಲಿಪಿಯ ಹಿನ್ನೆಲೆಯಲ್ಲಿ ಗಮನಿಸಿದಾಗ, ಸಂಸ್ಕೃತ ಲಿಪಿಯಲ್ಲಿರುವ ಕೃತಿಗೆ ಕನ್ನಡದಲ್ಲಿ ವ್ಯಾಖ್ಯಾನ ಬರೆದಿರುವುದು ಹಾಗೂ ಸಂಸ್ಕೃತ ಭಾಷೆ ಕನ್ನಡ ಲಿಪಿಯಲ್ಲಿರುವ ಕೃತಿಗೆ ಕನ್ನಡದಲ್ಲಿಯೇ ತಾತ್ಪರ್ಯ ಬರೆದಿರುವರು.

೪. ಕನ್ನಡದ ಕೃತಿಗಳಿಗೆ ಕನ್ನಡದಲ್ಲಿಯೂ, ಸಂಸ್ಕೃತದ ಕೃತಿಗಳಿಗೆ ಮತ್ತೊಮ್ಮೆ ಕನ್ನಡದಲ್ಲಿಯೂ ವ್ಯಾಖ್ಯಾನ ನೀಡಿ ಸಂಬಂಧಿಸಿದ ವಿಷಯಕ್ಕೆ ಪೂರಕ ಮಾಹಿತಿಯನ್ನು ಬೇರೆ ಬೇರೆ ಕೃತಿಗಳಿಂದ ಆಯ್ದು ಉಲ್ಲೇಖಿಸಿರುವ ಕ್ರಮವು ಕಂಡು ಬರುತ್ತದೆ.

೫. ಟೀಕಾಕಾರರು ಯಾವುದೇ ಒಂದು ಧರ್ಮಕ್ಕೆ ಮಾತ್ರ ಸೀಮಿತವಾಗಿದ್ದು ಆ ಒಂದು ಧರ್ಮದ ಕೃತಿಗಳನ್ನು ಮಾತ್ರ ವ್ಯಾಖ್ಯಾನಿಸದೆ ಧರ್ಮಾತೀತವಾಗಿ ಹಲವು ಕೃತಿಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಇಲ್ಲಿ ಟೀಕಾಕಾರರಿಗೆ ಧರ್ಮಕ್ಕಿಂತ ವಿದ್ವತ್ತಿನ/ಪಾಂಡಿತ್ಯದ ಪ್ರಶ್ನೆ ಮುಖ್ಯವಾಗಿದೆ. ಹಾಗೂ ತಮ್ಮ ಸಂದರ್ಭದಲ್ಲಿ ಕೃತಿಗಳನ್ನು ಮರುರೂಪಿಸಿಕೊಳ್ಳುವುದು ಅಗತ್ಯವಾಗಿತ್ತು.

ಇವುಗಳನ್ನು ಗಮನಿಸಿದಾಗ ಸಮಕಾಲೀನ ಸಂದರ್ಭದಲ್ಲಿ ಕೃತಿಯೊಂದನ್ನು ಅರ್ಥೈಸಿಕೊಳ್ಳುವುದಕ್ಕೆ ಟೀಕುಗಳ ಸಂದರ್ಭದಲ್ಲಿ ಹೆಚ್ಚು ಗಮನಹರಿಸಿರುವುದು ಕಂಡು ಬರುತ್ತದೆ. ಟೀಕಾಕಾರರು ಕೃತಿಗೆ ಅರ್ಥ, ತಾತ್ಪರ್ಯ, ವ್ಯಾಖ್ಯಾನ ನೀಡುವ ಮೂಲಕ ಭಾಷಾಂತರ ಚಟುವಟಿಕೆಯನ್ನು ಕೈಗೊಂಡಿದ್ದರು. ಈ ಪುನರ್ ವ್ಯಾಖ್ಯಾನವು ತಾತ್ವಿಕವಾಗಿ ಭಾಷಾಂತರವೆ ಆಗಿರುವುದರೊಂದಿಗೆ ಭಾಷಾಂತರದ ಹಲವು ಸಾಧ್ಯತೆಗಳನ್ನು ಟೀಕುಗಳ ರಚನೆಯ ಸಂದರ್ಭದಲ್ಲಿ ಚಾಲ್ತಿಗೆ ತರಲು ಪ್ರಯತ್ನಿಸಿರುವುದು ಉಲ್ಲೇಖಾರ್ಹ.

ಕನ್ನಡ ಸಂದರ್ಭದಲ್ಲಿ ಭಾಷಾಂತರದ ಕುರಿತಾಗಲಿ, ಭಾಷಾಂತರದ ಮಾದರಿಗಳ ಬಗ್ಗೆಯಾಗಲಿ ಅಥವಾ ಭಾಷಾಂತರ ಚಿಂತನೆ ಸಿದ್ಧಾಂತಗಳ ಕುರಿತಾಗಲಿ ಚರ್ಚಿಸುವಾಗ 'ರಾಮವರ್ಮ ಲೀಲಾವತಿ', 'ಪ್ರತಾಪರುದ್ರದೇವ', 'ಶಾಕುಂತಲ' ಇತ್ಯಾದಿ ಕೃತಿಗಳ ಕುರಿತೇ ಮತ್ತೆ ಮತ್ತೆ ಚರ್ಚೆಗಳು ನಡೆದವು. ಬದಲಾಗಿ ಸಾಹಿತ್ಯೇತರ ಭಾಷಾಂತರ ಕೃತಿಗಳನ್ನು ಇಲ್ಲವೆ ಇಂತಹ ಟೀಕು, ವ್ಯಾಖ್ಯಾನಗಳನ್ನಾಗಲಿ ಭಾಷಾಂತರ ಅಧ್ಯಯನದಲ್ಲಿ ಬಳಸಿಕೊಳ್ಳುವ ಪ್ರಯತ್ನಗಳು ನಡೆಯಲೇ ಇಲ್ಲ. ಇದು ಒಂದು ರೀತಿಯಿಂದ ಭಾಷಾಂತರ ಅಧ್ಯಯನದಲ್ಲಿನ 'ಸೃಜನ ಶೀಲ' ರಾಜಕಾರಣವೇ?

ಟೀಕುಗಳು ಹೀಗೆ ತಾತ್ವಿಕವಾಗಿ ಭಾಷಾಂತರದ ಗಮನಾರ್ಹ ಮಾದರಿಯಾಗಿವೆ. ಜೊತೆಗೆ ಭಾಷಾಂತರದ ಕೆಲವು ಪ್ರಕಾರ, ಪರಿಕಲ್ಪನೆ ಹಾಗೂ ಸೈದ್ಧಾಂತಿಕ ಚರ್ಚೆಯನ್ನು ತಮ್ಮ ಸಂದರ್ಭದಲ್ಲಿ ಎತ್ತಿರುವುದು ವಿಶ್ಲೇಷಣಾರ್ಹ. ಮುಂದಿನ ದಿನಗಳಲ್ಲಿ ಇವುಗಳ ಕುರಿತು ಸಮಗ್ರ ಅಧ್ಯಯನಗಳು ನಡೆಯಬೇಕಾಗಿದೆ. ಟೀಕುಗಳ ಭಾಷಾಂತರ ಅಧ್ಯಯನದ ಚರ್ಚೆಯಲ್ಲಿ ಒಂದುವೇಳೆ ಸೇರಿಕೊಂಡರೆ ಈವರೆಗಿನ ಭಾಷಾಂತರ ಚರಿತ್ರೆ, ಸಿದ್ಧಾಂತ, ವಾಗ್ವಾದ ಇತ್ಯಾದಿಗಳನ್ನು ಮರು ಪರಿಶೀಲಿಸುವ 'ಮುರಿದು ಕಟ್ಟುವ' ಸಾಧ್ಯತೆ ಹೆಚ್ಚಿದೆ.

**ಟಿಪ್ಪಣಿ**

೧. ಕನ್ನಡದ ಸಂದರ್ಭದಲ್ಲಿ 'ಅಧ್ಯಯನ' ಮತ್ತು 'ವಿಮರ್ಶೆ' ಯ ಕುರಿತು ಭಿನ್ನ ನಿಲುವುಗಳಿವೆ. ಕೆಲವು ವಿದ್ವಾಂಸರು ಅಧ್ಯಯನವೇ ಬೇರೆ ವಿಮರ್ಶೆಯೇ ಬೇರೆ ಎಂದು ವಾದಿಸಿದರೆ, ಇನ್ನೂ ಕೆಲವರು ಅವು ಎರಡು ಒಂದೇ ಅವುಗಳಲ್ಲಿ ಭಿನ್ನತೆಗಳಿಲ್ಲ ಎನ್ನುತ್ತಾರೆ. ಆದರೆ, ಮತ್ತೆ ಕೆಲವರು ಎರಡು ಒಂದೇ ಅಲ್ಲ ಮತ್ತು ಬೇರೆ ಬೇರೆಯೂ ಅಲ್ಲ ಒಂದಕ್ಕೊಂದು ಪೂರಕ, ವಿಮರ್ಶೆಯಲ್ಲಿ ಅಧ್ಯಯನ ಬೇಕು ಹಾಗೆ ಅಧ್ಯಯನ ಸಮರ್ಪಕವಾಗಬೇಕಾದರೆ ವಿಮರ್ಶಾತ್ಮಕ ದೃಷ್ಟಿಕೋನ ಅಗತ್ಯ ಎನ್ನುವರು.

೨. ಭಾರತದ ಬಹುತೇಕ ಭಾಷೆಗಳಲ್ಲಿ ಟೀಕು, ವ್ಯಾಖ್ಯಾನಗಳು ರಚನೆಯಾಗಿವೆ. ಆದರೆ, ಎಲ್ಲಿಯೂ ಇದೊಂದು ಸಾಹಿತ್ಯ ಪ್ರಕಾರವೆಂದು ಪರಿಗಣಿಸುವುದಾಗಿರಲಿ ಅಥವಾ ಅದರ ಕುರಿತಾಗಲಿ ಅಧ್ಯಯನಗಳು ನಡೆದಿರುವ ಬಗ್ಗೆ ಮಾಹಿತಿಗಳು ದೊರೆಯುವುದಿಲ್ಲ. ಇತರ ಸಾಹಿತ್ಯ ಪ್ರಕಾರಗಳಿಗೆ ಸಮನಾಗಿ ಬೆಳೆದು ನಿಂತ ಈ ಚಟುವಟಿಕೆಯ ಕುರಿತು ಯಾಕಾಗಿ ಅಧ್ಯಯನಗಳು ನಡೆದಿಲ್ಲ ಎಂಬುದು ಕುತೂಹಲಕಾರಿಯಾಗಿದೆ. ಮುಂದಿನ ದಿನಗಳೇ ಟೀಕುಗಳ ಕುರಿತು ಬಹುಮುಖಿ ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ. ಈ ಬಗ್ಗೆ ವಿದ್ವಾಂಸರು ಅಧ್ಯಯನಕಾರರು ಗಮನಿಸಬೇಕಾಗಿದೆ.



# ಅಧ್ಯಾಯ-೭

## ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ

೭.೧. ವಿಷಯಾಧಾರಿತವಾಗಿ ಸಾಹಿತ್ಯೇತರ ಭಾಷಾಂತರ ಕೃತಿಗಳ ವಿಂಗಡಣೆ

೭.೨. ಸಾಹಿತ್ಯೇತರ ಕೃತಿಗಳ ಭಾಷಾಂತರ ಮತ್ತು ಭಾಷೆ

೭.೨.೧. ಇಂಗ್ಲಿಷ್‌ನಿಂದ ನಡೆದ ಸಾಹಿತ್ಯೇತರ ಕೃತಿಗಳ ಭಾಷಾಂತರ

೭.೨.೨. ಭಾರತೀಯ ಭಾಷೆಗಳಿಂದ ನಡೆದ ಸಾಹಿತ್ಯೇತರ ಕೃತಿಗಳ ಭಾಷಾಂತರ

೭.೩. ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ

೭.೩.೧. ಪಠ್ಯಗಳ ಏಕಮೂಲ ಭಾಷಾಂತರ ಪ್ರಕ್ರಿಯೆ

೭.೩.೨. ಬಹುಮೂಲಗಳನ್ನಾಧರಿಸಿ ಪಠ್ಯಗಳನ್ನು ರೂಪಿಸುವಿಕೆ

## ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ

ಭಾಷಾಂತರ ಪ್ರಕ್ರಿಯೆಯ ಕುರಿತು ಚರ್ಚಿಸುವಾಗ 'ಸಾಹಿತ್ಯಿಕ' ಭಾಷಾಂತರ ಚಟುವಟಿಕೆಯಂತೆ 'ಸಾಹಿತ್ಯೇತರ' ಭಾಷಾಂತರ ಸಹ ಅಷ್ಟೇ ಮುಖ್ಯವಾಗುತ್ತದೆ. ಸಾಹಿತ್ಯ ಎನ್ನುವುದನ್ನು ಬರಹ ಎಂಬ ವಿಶಾಲಾರ್ಥದಲ್ಲಿ ಬಳಸುವುದಾದರೂ ಸಾಮಾನ್ಯ ಅರ್ಥದಲ್ಲಿ ಈಗಾಗಲೇ ಬರಹವನ್ನು ಸಾಹಿತ್ಯ-ಸಾಹಿತ್ಯೇತರ ಎಂಬ ವಿಭಜನಾಕ್ರಮ ಇದ್ದು, ಅಧ್ಯಯನದ ಅನುಕೂಲಕ್ಕಾಗಿ ಅದನ್ನ ಇಲ್ಲಿ ಬಳಸಿಕೊಳ್ಳಲಾಗಿದೆ. ಸಾಹಿತ್ಯ-ಸಾಹಿತ್ಯೇತರ ಭಾಷಾಂತರಗಳಲ್ಲಿ ಯಾವುದಾದರೂ ಒಂದಕ್ಕೆ ಮಾತ್ರ ಗಮನಹರಿಸಿ ಭಾಷಾಂತರ ಚರ್ಚೆ ಅಥವಾ ಅಧ್ಯಯನಗಳನ್ನು ಕೈಗೊಂಡರೆ ಅಂತಹ ಅಧ್ಯಯನವು ಏಕಮುಖವೂ, ಪಾರ್ಶ್ವಿಕವು ಆಗುವ ಸಾಧ್ಯತೆಯಿದೆ. ಇದನ್ನು ಗಮನದಲ್ಲಿರಿಸಿಕೊಂಡು, 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯ ಅಧ್ಯಯನದ ಸಂದರ್ಭದಲ್ಲಿ ಈ ಹಿಂದೆ ಸಾಹಿತ್ಯಕ ಭಾಷಾಂತರದ ಕುರಿತು ಚರ್ಚಿಸಿದ್ದು ಇಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆಯನ್ನು ಗಮನಿಸಲಾಗಿದೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಡೆದ ಸಾಹಿತ್ಯಕ ಭಾಷಾಂತರ ಪ್ರಕ್ರಿಯೆಯು ಬಿ.ಎಂ.ಶ್ರೀಯವರ ಒಟ್ಟು ಭಾಷಾಂತರ ಚಟುವಟಿಕೆಗೆ ಹಾಗೂ ಕನ್ನಡ ಸಾಹಿತ್ಯದ ಆಧುನಿಕ ಆಯಾಮಕ್ಕೂ ಪೂರಕ ಭೂಮಿಕೆಯನ್ನು ಒದಗಿಸಿತು. ಹಾಗೇ ಈ ಸನ್ನಿವೇಶದಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರ ಚಟುವಟಿಕೆ ಯಾವ ಬಗೆಯ ನಿರ್ಣಾಯಕ ಪಾತ್ರ ವಹಿಸಿತ್ತು ಮತ್ತು ಇದರಿಂದಾಗಿ 'ಇಂಗ್ಲಿಷ್ ಗೀತಗಳು' ಸಂದರ್ಭ ಈ ಪ್ರಕ್ರಿಯೆಯನ್ನು ಯಾವ ಸ್ವರೂಪದಲ್ಲಿ ಅರ್ಥೈಸಿಕೊಂಡಿತು ಎಂಬುವ ಸಂಗತಿಗಳನ್ನು ಚರ್ಚಿಸುವುದು ಅಗತ್ಯವಾಗಿದೆ.

ಭಾಷಾಂತರ ಅಧ್ಯಯನದಲ್ಲಿ ಸಾಹಿತ್ಯೇತರ ಪಠ್ಯಗಳು ಚರ್ಚೆಯಾಗದೆ ಇರುವುದನ್ನು ಗಮನದಲ್ಲಿರಿಸಿಕೊಂಡು 'ಇಂಗ್ಲಿಷ್ ಗೀತಗಳು' ಪೂರ್ವದ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆಯ ಸ್ವರೂಪ, ತಾತ್ವಿಕತೆ, ಕಾರಣ ಮತ್ತು ಉದ್ದೇಶಗಳೊಂದಿಗೆ ವಸಾಹತುಶಾಹಿ ಸಂದರ್ಭದೊಂದಿಗಿನ ಇದರ ಅನುಸಂಧಾನದ ಮೂಲ ಚಹರೆಗಳನ್ನು ಕಂಡುಕೊಳ್ಳುವ ಪ್ರಯತ್ನಗಳು ನಡೆಯಬೇಕಾಗಿದೆ. ೧೮೫೦ ರಿಂದ ೧೯೨೦ರ ನಡುವೆ ಕನ್ನಡಕ್ಕೆ ಬಂದಿರುವ, ಕನ್ನಡದಲ್ಲಿ ರೂಪುಗೊಂಡಿರುವ ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಪ್ರಕ್ರಿಯೆಯ ತಾತ್ವಿಕತೆಯನ್ನು

ಅರ್ಥೈಸಿಕೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಇದನ್ನು ಭಾಷೆಯ ಹಿನ್ನೆಲೆಯಲ್ಲಿ, ವಿಷಯಾಧಾರಿತವಾಗಿ ಹಾಗೂ ಭಾಷಾಂತರ ಪ್ರಕ್ರಿಯೆಯ ಅಡಿಯಲ್ಲಿ ಪಠ್ಯಗಳನ್ನು ವಿಂಗಡಿಸಿಕೊಂಡು ಆ ಮೂಲಕ ವಿಭಿನ್ನ ಆಯಾಮಗಳಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರ ಚಟುವಟಿಕೆಯನ್ನು ವಿಶ್ಲೇಷಿಸಲಾಗುವುದು. ಇದರೊಂದಿಗೆ, ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆಯ ಕುರಿತಿರುವ ಪೂರ್ವ ನಿರ್ಧಾರಗಳನ್ನು, ಸೀಮಿತ ವ್ಯಾಪ್ತಿಯನ್ನು ಪರಿಶೀಲಿಸುವ ಭಾಗವಾಗಿ ಮುಂದಿನ ಚರ್ಚೆಗಳನ್ನು ಕೈಗೊಳ್ಳಲಾಗಿದೆ. ಇದರ ಉದ್ದೇಶ ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಪ್ರಕ್ರಿಯೆ ಸಹ ಸಾಹಿತ್ಯಕ ಭಾಷಾಂತರದಷ್ಟೆ ಪರಿಣಾಮಕಾರಿಯೂ, ಗಮನಾರ್ಹವು ಮತ್ತು ಅಧ್ಯಯನಾರ್ಹವು ಆಗಿದೆ ಎಂಬುದನ್ನು ಗುರುತಿಸುವುದಾಗಿದೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಪ್ರಕಟವಾಗಿರುವ ಸಾಹಿತ್ಯೇತರ ಭಾಷಾಂತರಗಳ ಕೃತಿಗಳು ಸುಮಾರು ೧೬೦ಕ್ಕಿಂತ ಅಧಿಕ. (ಅನುಬಂಧ ೪ರಲ್ಲಿ ಸಾಹಿತ್ಯೇತರ ಕೃತಿಗಳ ಸಮಗ್ರ ಪಟ್ಟಿಯನ್ನು ಗಮನಿಸಬಹುದು.) ಗಣಿತ, ಕೃಷಿ, ವೈದ್ಯಕೀಯ, ವಿಜ್ಞಾನದಂತಹ ಸಾಹಿತ್ಯೇತರ ವಿಷಯಗಳಿಗೆ ಸಂಬಂಧಪಟ್ಟ ಹಲವಾರು ಕೃತಿಗಳು ಈ ಅವಧಿಯಲ್ಲಿ ಕನ್ನಡದಲ್ಲಿ ರೂಪುಗೊಂಡಿವೆ. ಒಂದೇ ವಿಷಯದಲ್ಲಿ ಹತ್ತಕ್ಕಿಂತ ಹೆಚ್ಚು ಕೃತಿಗಳು ಪ್ರಕಟವಾಗಿದ್ದರೆ ಅದನ್ನು ಪ್ರತ್ಯೇಕ ಗುಂಪಾಗಿ ವಿಂಗಡಿಸಿಕೊಳ್ಳಲಾಗಿದೆ. ಹಾಗೇ ನೋಡಿದರೆ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕೃಷಿ, ವಿಜ್ಞಾನ, ಗಣಿತ, ವೈದ್ಯ ಮತ್ತು ಪಶುವೈದ್ಯ ಹಾಗೂ ಇತರೆ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ಹೆಚ್ಚಿವೆ. ಅವುಗಳನ್ನು ನಕ್ಷೆಯ ಮೂಲಕ ಹೀಗೂ ಗಮನಿಸಬಹುದು.




'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸಾಹಿತ್ಯೇತರ ಜ್ಞಾನಶಿಸ್ತುಗಳಾದ ಕೃಷಿ, ವಿಜ್ಞಾನ, ಗಣಿತ ಇತ್ಯಾದಿಗಳಿಗೆ ಸಂಬಂಧಿಸಿದ ಹಲವಾರು ಕೃತಿಗಳನ್ನು ಪ್ರಮುಖವಾಗಿ ಇಂಗ್ಲಿಷ್ ಹಾಗೂ ಭಾರತೀಯ ಭಾಷೆಗಳಾದ ಸಂಸ್ಕೃತ, ಮರಾಠಿ, ತಮಿಳು ಮತ್ತು ತೆಲುಗಿನಿಂದ ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ೧೯ನೇ ಶತಮಾನದ ಸಾಂದರ್ಭಿಕ ಸನ್ನಿವೇಶಗಳ ಹಿನ್ನೆಲೆಯಲ್ಲಿ ಇವುಗಳನ್ನು ಗಮನಿಸಿದರೆ, ಸಾಹಿತ್ಯೇತರ ಭಾಷಾಂತರ ಕೃತಿಗಳು ಶಿಕ್ಷಣದ ಮಾಧ್ಯಮವಾಗಿ ದೇಶ ಭಾಷೆಗಳನ್ನು ಸ್ವೀಕರಿಸಿದ್ದರ, ಪ್ರೋತ್ಸಾಹಿಸಿದ್ದರ ಹಿನ್ನೆಲೆಯಲ್ಲಿ ಕನ್ನಡದಲ್ಲಿ ರೂಪುಗೊಂಡವು. ಈ ಶತಮಾನದ ಸಂಕೀರ್ಣ ವ್ಯವಸ್ಥೆ ಹಾಗೂ ಆಧುನಿಕತೆಯೊಂದಿಗಿನ ಅನುಸಂಧಾನದ ಸಂದರ್ಭದಲ್ಲಿ ಈ ಪ್ರಕ್ರಿಯೆ ಪೂರಕವಾದ ಅಂಶಗಳನ್ನು ಪಡೆದುಕೊಂಡಿತು. ಇಂತಹ ಸಂದರ್ಭದಲ್ಲಿ ಶಿಕ್ಷಣ ಗಮನಾರ್ಹ ಪಾತ್ರವನ್ನು ನಿರ್ವಹಿಸಿತ್ತು. ಕನ್ನಡದ ಸಂದರ್ಭದಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರವು ಜ್ಞಾನವನ್ನು ಪಡೆದುಕೊಳ್ಳುವ, ರೂಪಿಸುವ ಹಾಗೂ ದೇಶೀಯ ಭಾಷೆಗಳಲ್ಲಿ ಇವುಗಳನ್ನು ಅಭಿವೃದ್ಧಿಪಡಿಸುವ ಆಸಕ್ತಿಯಿಂದ ನಡೆದಿದೆ. ಯಂತ್ರ, ತಂತ್ರಜ್ಞಾನ ಮತ್ತು ವೈದ್ಯಕೀಯ ವಿಷಯಕ್ಕೆ ಸಂಬಂಧಿಸಿದ ಜ್ಞಾನ, ಮಾಹಿತಿಯೆಲ್ಲವೂ ಕನ್ನಡದಲ್ಲಿ ದೊರೆಯಬೇಕು ಎಂಬ ಉದ್ದೇಶ ಕೂಡ ಇವುಗಳ ಭಾಷಾಂತರಕ್ಕೆ ಒತ್ತಾಸೆಯಾದವು. ಹೀಗೆ ಪಶ್ಚಿಮದ ಹಾಗೂ ಭಾರತೀಯ ಭಾಷೆಗಳಲ್ಲಿರುವ ಸಾಹಿತ್ಯೇತರ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ಮಾಹಿತಿಗಳು ಕನ್ನಡದ ಓದಿಗೆ ದೊರೆಯಬೇಕು,

ದಕ್ಕಬೇಕೆಂಬುದರಿಂದ ಇವುಗಳನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವ ಪ್ರಯತ್ನಗಳು ನಡೆದವು. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ ಭಾಷಾಂತರಗೊಂಡಿರುವ ಸಾಹಿತ್ಯೇತರ ಕೃತಿಗಳನ್ನು ಬೇರೆ ಬೇರೆ ಕ್ರಮಗಳಲ್ಲಿ ವಿಂಗಡಿಸಿಕೊಳ್ಳುವ ಮೂಲಕ ಇದರ ರೂಪ, ಸ್ವರೂಪ ಮತ್ತು ತಾತ್ವಿಕತೆಯನ್ನು ಗಮನಿಸಲು ಪ್ರಯತ್ನಿಸಲಾಗುವುದು.

### ೭.೧. ವಿಷಯಾಧಾರಿತವಾಗಿ ಸಾಹಿತ್ಯೇತರ ಭಾಷಾಂತರ ಕೃತಿಗಳ ವಿಂಗಡಣೆ

೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡದಲ್ಲಿ ರೂಪುಗೊಂಡಿರುವ ಸಾಹಿತ್ಯೇತರ ಪಠ್ಯಗಳ ಪ್ರಮಾಣ ಸುಮಾರು ೧೬೮. ಇವುಗಳನ್ನು ವಿಷಯಾಧಾರಿತವಾಗಿ ವಿಂಗಡಿಸಿಕೊಳ್ಳುವುದಾದರೆ.

೧. ಕೃಷಿ - ೧೬

೨. ಗಣಿತ - ೭೪

೩. ವೈದ್ಯ ಮತ್ತು ಪಶುವೈದ್ಯ - ೪೧

೪. ವಿಜ್ಞಾನ - ೧೮

೫. ಇತರೆ - ೧೯

ಒಟ್ಟು - ೧೬೮

ಇದನ್ನು ನಕ್ಷೆಯ ಮೂಲಕ ಗಮನಿಸುವುದಾದರೆ



'ಇಂಗ್ಲಿಷ್ ಗೀತಗಳು' ಪೂರ್ವದ ಸುಮಾರು ೭೦ ವರ್ಷಗಳ ಅವಧಿಯಲ್ಲಿ ಕನ್ನಡದಲ್ಲಿ ರೂಪುಗೊಂಡ ಸಾಹಿತ್ಯೇತರ ಭಾಷಾಂತರ ಕೃತಿಗಳ ಪ್ರಮಾಣವನ್ನು ಗಮನಿಸಿದಾಗ ಗಣಿತದ ವಿಷಯದಲ್ಲಿ ಹೆಚ್ಚು ಕೃತಿಗಳು (೭೪) ಬಂದರೆ, ಅತಿ ಕಡಿಮೆ ಕೃತಿಗಳು ಕೃಷಿಗೆ (೧೬) ಸಂಬಂಧಿಸಿದ್ದಾಗಿವೆ. ಉಳಿದಂತೆ ವೈದ್ಯ ಮತ್ತು ಪಶುವೈದ್ಯದ ವಿಷಯದಲ್ಲಿ ೪೧ ಕೃತಿಗಳು ಭಾಷಾಂತರಗೊಂಡರೆ, ವಿಜ್ಞಾನದ ೧೮ ಹಾಗೂ ಇತರೆ ೧೯ ಕೃತಿಗಳು ಪ್ರಕಟವಾಗಿವೆ. ಸಮಾಜ ವಿಜ್ಞಾನದ ಯಾವೊಂದು ಕೃತಿಯು ಈ ಏಳು ದಶಕಗಳಲ್ಲಿ ಪ್ರಕಟವಾಗಿರುವ ಕುರಿತು ಮಾಹಿತಿ ದೊರೆಯದೆ ಇರುವುದು ವಿಷಾದನೀಯ.

ಭಾರತದ ಬಹುಪಾಲು ಜನರು ಕೃಷಿಯನ್ನೇ ಅವಲಂಬಿಸಿರುವುದು ಹಾಗೂ ಜೀವನೋಪಾಯವನ್ನು ಕೃಷಿಯಿಂದಲೇ ಕಂಡುಕೊಳ್ಳುತ್ತಿದ್ದರಿಂದ ಕೃಷಿಯ ಕುರಿತಾದ ವೈಜ್ಞಾನಿಕ ಮಾಹಿತಿಗಳು ಕನ್ನಡದಲ್ಲಿ ದೊರೆಯಬೇಕು ಎಂಬ ಆಸಕ್ತಿಯಿಂದಾಗಿ ಕೃಷಿ ಸಂಬಂಧಿ ಕೃತಿಗಳು ಹೆಚ್ಚಾಗಿ ಕನ್ನಡಕ್ಕೆ ಭಾಷಾಂತರಗೊಂಡಿರುವ ಸಾಧ್ಯತೆಯಿದೆ. ಇದರ ಹಿಂದೆ ಇಲ್ಲಿನ ಸಾಂಪ್ರದಾಯಿಕ ಕೃಷಿಯನ್ನು ವೈಜ್ಞಾನಿಕವಾಗಿ ಅಭಿವೃದ್ಧಿ ಪಡಿಸಬೇಕೆಂಬ ಹಂಬಲವು ಇತ್ತು. 'ಇಂಗ್ಲಿಷ್ ಗೀತಗಳು' ಪೂರ್ವದ ಸುಮಾರು ಏಳು ದಶಕಗಳಲ್ಲಿ ಕೃಷಿಗೆ ಸಂಬಂಧಪಟ್ಟಂತೆ 'ವ್ಯವಸಾಯ ಬೋಧಿನಿ' (೧೯೦೦), 'ಬೇಸಾಯದ ಪಾಠಗಳು' (೧೯೧೨), 'ಕೃಷಿ ಸಂಜೀವಿನಿ' (೧೯೧೬), 'ಬೆಳೆಯನ್ನು ಹಾಳುಮಾಡುವ ಹುಳಗಳ ವಿಷಯ' (೧೯೦೨) ಇತ್ಯಾದಿ ಕೃತಿಗಳು ಕನ್ನಡದಲ್ಲಿ ಪ್ರಕಟವಾಗಿವೆ. ಕೃತಿಗಳ ಪಟ್ಟಿಯನ್ನು ಅನುಬಂಧ ೪ರಲ್ಲಿ ಗಮನಿಸಬಹುದು. ಈ ಕೃತಿಗಳಲ್ಲಿ ಕೆಲವು ನೇರವಾಗಿ ಏಕಮೂಲದಿಂದ ಬೇರೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಬಂದರೆ, ಇನ್ನೂ ಕೆಲವನ್ನು ಬಹುಮೂಲಗಳನ್ನು ಆಧರಿಸಿ ಕನ್ನಡದಲ್ಲಿ ರೂಪಿಸಿಕೊಳ್ಳಲಾಗಿದೆ. ಈ ಕುರಿತು ಮುಂದೆ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

ಕನ್ನಡದ ಸಂದರ್ಭದಲ್ಲಿ ಕೃಷಿಯ ಕುರಿತು ವೈಜ್ಞಾನಿಕ ಮಾಹಿತಿಯನ್ನು ಒದಗಿಸುವ ಹಾಗೂ ಸಾಂಪ್ರದಾಯಿಕ ಬೇಸಾಯಕ್ಕಿಂತ ಆಧುನಿಕ ಬೇಸಾಯದ ಸಕಾರಾತ್ಮಕ, ಅಭಿವೃದ್ಧಿಪರ ಅಂಶಗಳನ್ನು ತಿಳಿಸುವ ಕಾರಣದಿಂದ ಸಹ ಕೃಷಿ ಸಂಬಂಧಿ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಳ್ಳುವಂತಾಯಿತು. ಬೆಳೆಗಳಿಗೆ ಬರುವ ರೋಗಗಳಿಗೆ ಕಾರಣ, ಅದನ್ನು ಪರಿಹರಿಸಿಕೊಳ್ಳುವ ವಿಧಾನಗಳ ಮಾಹಿತಿಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಔಷಧಿ ಇತ್ಯಾದಿಗಳನ್ನು ಪರಿಚಯಿಸುವ ಭಾಗವಾಗಿ ಭಾಷಾಂತರ ಚಟುವಟಿಕೆ ನಡೆದಿದೆ. ಇದರ ಒಟ್ಟು ಗಮನ ಆಧುನಿಕ ಬೇಸಾಯ ಅಥವಾ ಕೃಷಿ ಪದ್ಧತಿಯನ್ನು ಕನ್ನಡದ ಸಂದರ್ಭದಲ್ಲಿ ಕಟ್ಟಿಕೊಳ್ಳುವುದೇ ಆಗಿದೆ. ಇದರಲ್ಲಿ ಗಮನಿಸಬಹುದಾದ ಮುಖ್ಯ ಅಂಶಗಳೆಂದರೆ

೧. ಕೃಷಿಕ ಸಮುದಾಯವನ್ನು ಸಾಕ್ಷರ/ ಅಕ್ಷರಸ್ಥ ಸಮುದಾಯವಾಗಿ ಪರಿಭಾವಿಸುವ ಸಂಗತಿಯು ಇದರಿಂದ ತೋರುತ್ತದೆ.

೨. ಕೃಷಿ ಸಂಬಂಧಿತ ವಿಚಾರಗಳನ್ನು ಶೈಕ್ಷಣಿಕ ಶಿಸ್ತಿಗೆ ಒಗ್ಗಿಸುವ ಪ್ರಯತ್ನವಾಗಿಯೂ ಗುರುತಿಸಬಹುದು. ಇಲ್ಲಿ ಭಾಷಾಂತರ ಪ್ರಕ್ರಿಯೆಯು ವಸಾಹತು ಸಂದರ್ಭದಲ್ಲಿ ಪೂರಕ ಬೇಸಾಯ ಕ್ರಮವನ್ನು ಅಭಿವೃದ್ಧಿಪಡಿಸುವ ಮೂಲಕ ಬದುಕನ್ನು ಸಬಲಗೊಳಿಸುವಲ್ಲಿ ಪಾಲ್ಗೊಂಡಿರುವುದು ಗಮನಾರ್ಹವಾಗಿದೆ.[1]

ಅಲ್ಲದೆ ಈ ವಿಚಾರ ಭಾಷಾಂತರ ಪ್ರಕ್ರಿಯೆಯ ಮಹತ್ವವನ್ನು ಹಾಗೂ ಅದರ ವ್ಯಾಪ್ತಿಯನ್ನು ಖಚಿತಪಡಿಸುತ್ತದೆ. ಯಾಕೆಂದರೆ, ಭಾಷಾಂತರ ಚಟುವಟಿಕೆಯಲ್ಲಿ ಭಾಷೆ, ಸಾಹಿತ್ಯ ಮತ್ತು ಶಾಸ್ತ್ರ ಗ್ರಂಥಗಳನ್ನು ಮಾತ್ರ 'ಕನ್ನಡೀಕರಿಸು'ವುದಲ್ಲದೆ ವಸಾಹತು ಸಂದರ್ಭದ ಅಗತ್ಯದಿಂದಾದ ಸಾಹಿತ್ಯೇತರ (ಕೃಷಿ, ವಿಜ್ಞಾನ, ಇತ್ಯಾದಿಗಳು) ಕೃತಿಗಳನ್ನು ಭಾರತೀಕರಿಸುವ, ಪುನರ್ ರೂಪಿಸುವ ಪ್ರಕ್ರಿಯೆಯಾಗಿ ರೂಪುಗೊಂಡಿದೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ ಭಾಷಾಂತರಗೊಂಡಿರುವ ಕೃಷಿ ಸಂಬಂಧಿ ಕೃತಿಗಳ ವೈವಿಧ್ಯತೆಯನ್ನು ಗಮನಿಸುವುದಾದರೆ.

೧. ಬೇಸಾಯದ ಕುರಿತಾದ ಪೂರಕ ಮಾಹಿತಿಯುಳ್ಳ ಕೃತಿಗಳು ಕನ್ನಡದಲ್ಲಿ ರೂಪುಗೊಂಡಂತೆ ವಿವಿಧ ಬೆಳೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಕೃತಿಗಳನ್ನು ರೂಪಿಸಿಕೊಂಡರು. ಉದಾಹರಣೆಗೆ 'ಆಲೂಗಡ್ಡೆ ವ್ಯವಸಾಯ' (೧೯೧೦), 'ತೆಂಗಿನ ಫಸಲು ಸಾಗುವಳಿ' (೧೯೧೨) ಇತ್ಯಾದಿಗಳು.

೨. ಶಾಲೆಯ ತೋಟದ ಕುರಿತು ಬಂದಿರುವ ಕೃತಿಗಳನ್ನು ಗಮನಿಸಿದಾಗ ಕೃಷಿ ಸಂಬಂಧಿತ ಕೃತಿಗಳು ಪಠ್ಯೇತರ ಚಟುವಟಿಕೆಯ ಭಾಗವಾಗಿ ಸಹ ಬಂದಿರುವುದನ್ನು ಕಾಣಬಹುದು.

೩. ಕೆಲವು ಕೃತಿಗಳು ಗದ್ಯದ ಮಾದರಿಯಲ್ಲಿ ಕನ್ನಡಕ್ಕೆ ಬಂದರೆ ಇನ್ನೂ ಕೆಲವು ಪ್ರಶ್ನೋತ್ತರ ಮಾದರಿಯಲ್ಲಿ ಪ್ರಕಟಗೊಂಡಿವೆ. ಉದಾಹರಣೆಗೆ: 'ವ್ಯವಸಾಯ ಚಂದ್ರಿಕೆಯೆಂಬ ವ್ಯವಸಾಯ ಶಾಸ್ತ್ರದ ಪ್ರಶ್ನೋತ್ತರಗಳು' (೧೮೮೮), 'ಕೃಷಿ ಪ್ರಶ್ನೋತ್ತರ ಮಾಲೆ' (೧೯೧೯) ಇತ್ಯಾದಿ.

೪. ಬೇಸಾಯವನ್ನು ಹೇಗೆ ಮಾಡಬೇಕು ಎಂಬುದರೊಂದಿಗೆ ಬೆಳೆಗಳಿಗೆ ಬರುವ ರೋಗಭಾದೆ, ಅದಕ್ಕೆ ಕಾರಣ ಹಾಗೂ ಪರಿಹಾರಗಳ ಕುರಿತು ಸಹ ಕನ್ನಡದಲ್ಲಿ ಕೃತಿಗಳು ರೂಪುಗೊಂಡಿವೆ. ಉದಾಹರಣೆಗೆ ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಗೊಂಡಿರುವ 'ಬೆಳೆಯನ್ನು ಹಾಳು ಮಾಡುವ ಹುಳಗಳ ವಿಷಯ' (೧೯೦೨)

೫. ಕೃಷಿಯ ಕುರಿತು ಸಮಗ್ರ ಮಾಹಿತಿಯುಳ್ಳ ಕೃತಿಗಳನ್ನು ಕನ್ನಡದಲ್ಲಿ ರೂಪಿಸಿಕೊಂಬುದರೊಂದಿಗೆ ಹೊಲದ ಬೇಸಾಯ, ತೋಟ, ಕೈತೋಟ ಹಾಗೂ ವಿವಿಧ ಪ್ರದೇಶಗಳ ಬೇಸಾಯದ ವಿಧಾನದ ಕುರಿತ ಪ್ರತ್ಯೇಕವಾದ ಕೃತಿಗಳು ಪ್ರಕಟಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ 'ತೋಟದ ಬೇಸಾಯ' (೧೯೧೮), 'ಮೈಸೂರು ಸೀಮೆಯಲ್ಲಿ ಕೈತೋಟಗಳ ವ್ಯವಸಾಯ' (೧೯೨೦) ಇತ್ಯಾದಿ.

ಹೀಗೆ ಸಾಹಿತ್ಯೇತರ ಕೃತಿಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವಾಗ ಇಲ್ಲಿನ ಅಗತ್ಯಕ್ಕೆ ಅನುಗುಣವಾಗಿ ಭಾಷಾಂತರದ ರೂಪ ಸ್ವರೂಪಗಳನ್ನು ನಿರ್ಧರಿಸಿಕೊಳ್ಳುವ ಪ್ರಯತ್ನಗಳು ನಡೆದಿರುವುದನ್ನು ಗಮನಿಸಬಹುದಾಗಿದೆ.

ಕನ್ನಡಕ್ಕೆ ಭಾಷಾಂತರಗೊಂಡಿರುವ ಸಾಹಿತ್ಯೇತರ ಜ್ಞಾನಶಿಸ್ತುಗಳ ಒಟ್ಟು ಕೃತಿಗಳಲ್ಲಿ ೬೮% ರಷ್ಟು ಕೃತಿಗಳು ಗಣಿತಕ್ಕೆ ಸಂಬಂಧಿಸಿರುವುದು ಕುತೂಹಲಕಾರಿಯಾಗಿದೆ. ಸಾಹಿತ್ಯೇತರ ಕೃತಿಗಳು ಕನ್ನಡದಲ್ಲಿ ರೂಪುಗೊಂಡಿರುವುದೆ ಶಿಕ್ಷಣದ ಭಾಗವಾಗಿ. ಅದರಲ್ಲೂ ಗಣಿತದ ಹೆಚ್ಚಿನ ಕೃತಿಗಳು ವಿದ್ಯಾರ್ಥಿಗಳಿಗಾಗಿಯೇ ಭಾಷಾಂತರಗೊಂಡಿರುವುದು ಗಮನಾರ್ಹ. ಗಣಿತದ ವಿವಿಧ ಪ್ರಕಾರಗಳಾದ ಬೀಜಗಣಿತ, ರೇಖಾಗಣಿತ ಮತ್ತು ಅಂಕಗಣಿತ ಇತ್ಯಾದಿಗಳಿಗೆ

ಸಂಬಂಧಿಸಿದ ಹಲವಾರು ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಇವುಗಳಲ್ಲಿ ಹಲವು ಇಂಗ್ಲಿಷಿನಿಂದ ಕನ್ನಡಕ್ಕೆ ನೇರವಾಗಿ ಭಾಷಾಂತರಗೊಂಡರೆ ಇನ್ನೂ ಕೆಲವು ತಮಿಳು, ಮರಾಠಿಯಂತಹ ಭಾರತೀಯ ಭಾಷೆಗಳಿಂದ ಕನ್ನಡಕ್ಕೆ ಬಂದಿವೆ.

ಬೇರೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಬಂದಿರುವ ಗಣಿತದ ಕೃತಿಗಳೆಂದರೆ, ‘ಯುಕ್ಲೀಡ್‌ನ ಸಿದ್ಧಾಂತ’ (೧೮೮೪), ‘ಕೃತ್ಯ ಭೂಮಿತಿ’ (೧೮೯೧), ‘ಗಣಿತ ಕಲಾನಿಧಿ’ (೧೯೦೩), ‘ವಿವಿಧ ಗಣಿತ ಶತಕವು’ (೧೯೧೮), ‘ಅಂಕಗಣಿತವು’ (೧೮೭೩), ‘ಗಣಿತಾಮೃತ’ (೧೯೦೪) ಇತ್ಯಾದಿ. ಕೃತಿಗಳ ಸಮಗ್ರ ಪಟ್ಟಿಯನ್ನು ಅನುಬಂಧ ೪ರಲ್ಲಿ ಗಮನಿಸಬಹುದಾಗಿದೆ. ಇಲ್ಲಿನ ಕೆಲವು ಭಾಷಾಂತರ ಕೃತಿಗಳ ಮೇಲಿರುವ ‘ಹುಡುಗರಿಗಾಗಿ’, ‘ಹುಡುಗಿಯರಿಗಾಗಿ’ ಮತ್ತು ‘ಈ ತರಗತಿಯ ವಿದ್ಯಾರ್ಥಿಗಳಿಗಾಗಿ’ ಎಂಬುವ ಬರಹಗಳು ಗಣಿತದ ಪಠ್ಯಗಳು ಯಾರಿಗಾಗಿ ಮತ್ತು ಯಾಕಾಗಿ ಭಾಷಾಂತರಗೊಳ್ಳುತ್ತಿದ್ದವು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಬಗೆಯಲ್ಲಿ ನಿರ್ದಿಷ್ಟ ‘ಓದುಗ ಸಮುದಾಯ’ಕ್ಕಾಗಿ ಯಾವುದೇ ಕೃತಿಯು ಭಾಷಾಂತರವಾಗಬೇಕಾದರೂ ಅದಕ್ಕೆ ಪೂರಕವಾಗಿಯೆ ಭಾಷಾಂತರ ಪ್ರಕ್ರಿಯೆ ನಡೆಯಬೇಕಾದುದು ಸೂಕ್ತ. ಭಾಷಾಂತರ ಯಾರಿಗಾಗಿ, ಯಾಕಾಗಿ ಮತ್ತು ಯಾವ ಸಂದರ್ಭದಲ್ಲಿ ನಡೆಯುತ್ತದೆ ಎಂಬುದು ಸಹ ಅದರ ರೂಪ, ಸ್ವರೂಪವನ್ನು ನಿರ್ಧರಿಸುತ್ತದೆ. ಈ ಹಂತದಲ್ಲಿ ಭಾಷಾಂತರ ಕುರಿತಾದ ಚರ್ಚೆಯು ಸಾಹಿತ್ಯೇತರ ಕೃತಿಗಳ ಭಾಷಾಂತರದಲ್ಲಿ ನಡೆದಿವೆ. ಶಿಕ್ಷಣದ ಭಾಗವಾಗಿ ರೂಪುಗೊಂಡು ‘ಪಠ್ಯಪುಸ್ತಕ’ದ ಮಾದರಿಯಲ್ಲಿ ಗಣಿತದ ಕೃತಿಗಳು ಕನ್ನಡಕ್ಕೆ ಬಂದಿರುವವು.

ಕನ್ನಡದಲ್ಲಿ ರೂಪುಗೊಂಡ ಆಧುನಿಕ ಶಿಕ್ಷಣದಲ್ಲಿ ಸಾಹಿತ್ಯ ಕೃತಿಗಳನ್ನು ವಿವಿಧ ಉದ್ದೇಶಗಳಿಗೆ ಅನುಸಾರವಾಗಿ ಪುನರ್‌ಲೇಖ ಮಾಡಿಕೊಂಡಿರುವಲ್ಲಿ ಶೈಕ್ಷಣಿಕ ಉದ್ದೇಶಕ್ಕೆ ಬಳಸಿಕೊಂಡಿರುವುದೆ ಹೆಚ್ಚು. ಇದೇ ರೀತಿ ಸಾಹಿತ್ಯೇತರ ಪಠ್ಯಗಳು ಸಹ ಬೋಧನೆಯಾಗುತ್ತಿದ್ದವು. ಇದಕ್ಕೆ ಪೂರಕವಾಗಿ ಬೇರೆ ಬೇರೆ ಭಾಷೆಗಳಿಂದ ಈ ಪಠ್ಯಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವುದು ಅಗತ್ಯವೆನಿಸಿತ್ತು. ಸಾಂಪ್ರದಾಯಿಕ ಅಥವಾ ಆಧುನಿಕ ಶಿಕ್ಷಣಕ್ರಮದ ಮೊದಲು ಚಾಲ್ತಿಯಲ್ಲಿದ್ದ ಶಿಕ್ಷಣ ಪದ್ಧತಿಯಲ್ಲಿನ ‘ಬಾಯಿಲೆಕ್ಕಗಳು’ ಆಧುನಿಕ ಶಿಕ್ಷಣದ ಸಂದರ್ಭದಲ್ಲಿ ಮುದ್ರಣಗೊಳ್ಳುವ ಮೂಲಕ ಮೌಖಿಕ ಪರಂಪರೆಯಿಂದ ‘ಬರಹ’ ಅಥವಾ ‘ಲಿಖಿತ’ ಪರಂಪರೆಯಲ್ಲಿ ಭಾಷಾಂತರಗೊಂಡವು. ಈ ಕ್ರಮ ಸಾಹಿತ್ಯೇತರ ಕೃತಿಗಳ ಭಾಷಾಂತರದಲ್ಲಿ ಕುತೂಹಲಕಾರಿಯಾದುದು. ಹೀಗೆ ಗಣಿತದ ವಿವಿಧ ಮಾದರಿಗಳನ್ನು ಕನ್ನಡದಲ್ಲಿ ಸಿದ್ಧಗೊಳಿಸಿದ್ದರಿಂದ ಅವುಗಳ ಪರಿಚಯ ಮತ್ತು ಬಳಕೆ ಕನ್ನಡಗರಿಗೆ ಸುಲಭವಾಯಿತು. ಈ ಚಟುವಟಿಕೆ ಭಾರತೀಯ ಇತರ ಭಾಷೆಗಳಸಂದರ್ಭದಲ್ಲಿಯೂ ನಡೆದಿದೆ. ಆಧುನಿಕ ಶಿಕ್ಷಣದಿಂದಾಗಿ ಸಾಹಿತ್ಯೇತರ ಜ್ಞಾನಶಿಸ್ತುಗಳು ಮೌಖಿಕ ಪರಂಪರೆಯಿಂದ ಬರಹ ಪರಂಪರೆಗೆ ಪಲ್ಲಟವಾಗುವ ಭಾಷಾಂತರಗೊಳ್ಳುವ ಅವಕಾಶವು ಒದಗಿತು ಎನ್ನಬಹುದು.

೧೮೫೦ ರಿಂದ ೧೯೨೦ರ ನಡುವೆ ಕನ್ನಡದಲ್ಲಿ ರೂಪುಗೊಂಡ ಗಣಿತದ ಕೃತಿಗಳ ವೈವಿಧ್ಯತೆಯನ್ನು ಗಮನಿಸುವುದಾದರೆ,

೧. ಗಣಿತದ ವಿವಿಧ ಪ್ರಕಾರಗಳ ಕುರಿತು ಪ್ರತ್ಯೇಕವಾದ ಪಠ್ಯಗಳನ್ನು ಈ ಸಂದರ್ಭದಲ್ಲಿ ಕನ್ನಡಕ್ಕೆ ರೂಪಿಸಿಕೊಳ್ಳುವ ಪ್ರಯತ್ನಗಳು ಹೆಚ್ಚಾಗಿ ನಡೆದಿವೆ. ಉದಾಹರಣೆಗೆ 'ಅಂಕಗಣಿತ' (೧೯೦೬), 'ರೇಖಾಗಣಿತ' (೧೮೭೨), 'ಕನ್ನಡ ಬೀಜಗಣಿತವು' (೧೮೯೫) ಇತ್ಯಾದಿಗಳು.

೨. ಗಣಿತದ ಕೃತಿಗಳನ್ನು ನೇರವಾಗಿ ಬೇರೆ ಬೇರೆ ಭಾಷೆಗಳಿಂದ ಭಾಷಾಂತರಿಸಿಕೊಳ್ಳುವುದಲ್ಲದೆ ಸಂಗ್ರಹಿಸಿಕೊಳ್ಳುವ ಕೆಲಸಗಳು ಸಹ ನಡೆದಿವೆ. ಉದಾಹರಣೆಗೆ 'ಗಣಿತ ಸಂಗ್ರಹ' (೧೮೮೧), 'ಗಣಿತಸಾರ ಸಂಗ್ರಹ' (೧೮೯೭), 'ಕ್ಷೇತ್ರ ಗಣಿತ ಸಂಗ್ರಹ' (೧೯೦೩) ಇತ್ಯಾದಿ.

೩. ಹಲವಾರು ಕೃತಿಗಳು ಪ್ರಶ್ನೋತ್ತರ ಮಾದರಿಯಲ್ಲಿ ಸಹ ಸಿದ್ಧಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ಇಂಗ್ಲಿಷಿನಿಂದ ಕನ್ನಡಕ್ಕೆ ನೇರ ಭಾಷಾಂತರಗೊಂಡ 'ಯುಕ್ಲೀಡ್‌ನ ರೇಖಾ ಗಣಿತದ ಎರಡನೆ ಪುಸ್ತಕದ ಪ್ರಶ್ನೆಗಳ ಪ್ರಥಕ್ಕರಣ' (೧೮೭೨), 'ಅಂಕ ಗಣಿತದ ಪ್ರಶ್ನಾ ಸಮುದಾಯ' (೧೮೭೪) ಇತ್ಯಾದಿ.

೪. ಶೈಕ್ಷಣಿಕ ಉದ್ದೇಶಕ್ಕಾಗಿ ಗಣಿತದ ಕೃತಿಗಳನ್ನು ಭಾಷಾಂತರಿಸಿಕೊಳ್ಳುವಾಗ ವಿವಿಧ ತರಗತಿ ಮತ್ತು ಮಕ್ಕಳ ವಯಸ್ಸಿಗೆ ಅನುಸಾರವಾಗಿ ರೂಪಿಸಿಕೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ 'ನಾಲ್ಕನೆ ತರಗತಿ ಗಣಿತ' (೧೯೦೫), 'ಸಲ್ಲಾಪ' (ಮಕ್ಕಳ ಲೆಕ್ಕ) (?), 'ಚಿಕ್ಕ ಬಾಲಕರ ಸಲುವಾಗಿ ಕೋಷ್ಟಕಗಳು' (೧೮೯೧), 'ಕೋಷ್ಟಕಗಳು' (೧೮೭೨, ಬಾಲಕರಿಗಾಗಿ) ಇತ್ಯಾದಿಗಳು.

೫. ಗಣಿತದ ವಿವಿಧ ತತ್ವ ಸಿದ್ಧಾಂತಗಳನ್ನು ಕನ್ನಡದಲ್ಲಿ ಸಿದ್ಧಗೊಳಿಸಿಕೊಳ್ಳುವ ಪ್ರಯತ್ನವು ಈ ಅವಧಿಯಲ್ಲಿ ನಡೆದಿವೆ. ಉದಾಹರಣೆಗೆ ಇಂಗ್ಲಿಷಿನಿಂದ ಕನ್ನಡಕ್ಕೆ ಬಂದಿರುವ 'ಯುಕ್ಲೀಡ್‌ನ ಸಿದ್ಧಾಂತಗಳು' (೧೮೮೭), 'ವಾಣಿಜ್ಯ ಗಣಿತ' (೧೯೧೬), ಮರಾಠಿಯಿಂದ ಬಂದ 'ಬೀಜಗಣಿತದ ಮೂಲ ತತ್ವಗಳು' (೧೮೯೭) ಇತ್ಯಾದಿ.

೬. ಗಣಿತದ ವಿವಿಧ ಕೃತಿಗಳನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವಾಗ ಯಾವುದು ಇಲ್ಲಿಗೆ ಅಗತ್ಯ ಮತ್ತು ಅನಿವಾರ್ಯ ಎಂಬುದನ್ನು ತಿಳಿದೆ ಭಾಷಾಂತರ ನಡೆದಿದೆ ಎನ್ನಬಹುದು.

ಹಾಗೆಯೇ ವಿಜ್ಞಾನದ ಹಲವು ಕೃತಿಗಳು 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ ಭಾಷಾಂತರಗೊಂಡಿವೆ. ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಜೀವಶಾಸ್ತ್ರ ಇತ್ಯಾದಿಗಳಿಗೆ ಸಂಬಂಧಿಸಿದ ಸುಮಾರು ೧೮ ಕೃತಿಗಳು ಈ ಅವಧಿಯಲ್ಲಿ ಕನ್ನಡಕ್ಕೆ ಬಂದಿವೆ. ಅವುಗಳೆಂದರೆ 'ನೀನು ವಿಜ್ಞಾನಿಯಾಗು' (೧೮೯೫), 'ವಿಜ್ಞಾನದ ವಿಚಿತ್ರಗಳು ಸಚಿತ್ರ' (೧೯೧೬), 'X - ಕಿರಣ' (೧೯೦೬), 'ಶಾಖ ಪ್ರಕರಣ' (೧೯೦೬), 'ಪರಮಾಣು ಸಚಿತ್ರ' (೧೯೧೪) ಇತ್ಯಾದಿ. ಇತರ ಸಾಹಿತ್ಯೇತರ ಕೃತಿಗಳಂತೆ ಇವನ್ನು ಸಹ ಇಂಗ್ಲಿಷಿನಿಂದ ನೇರವಾಗಿ ಹಾಗೂ ಬಹು ಮೂಲಗಳನ್ನು ಆಧರಿಸಿ ಕನ್ನಡದ ಸಂದರ್ಭದಲ್ಲಿ ಸಿದ್ಧಗೊಳಿಸಿಕೊಳ್ಳಲಾಗಿದೆ. ವಿಜ್ಞಾನದ ಅಗತ್ಯ ಮಾಹಿತಿಯನ್ನು, ಜ್ಞಾನವನ್ನು ಕನ್ನಡದ ಓದಿಗೆ ಒದಗಿಸಬೇಕು ಮತ್ತು ಕನ್ನಡ ಭಾಷೆಯಲ್ಲಿ ದೊರೆಯಬೇಕೆಂಬ ಕಾರಣದಿಂದ ಈ ಕೃತಿಗಳು ಕನ್ನಡದ್ದಾಗಿವೆ. ವಿಜ್ಞಾನದ ವಿವಿಧ ಸಂಗತಿಗಳು ಭಿನ್ನ ಮಾದರಿಯಲ್ಲಿ ಕನ್ನಡಿಗರಿಗೆ ತಿಳಿಸುವ ಉದ್ದೇಶದಿಂದ

ಭಾಷಾಂತರ ಚಟುವಟಿಕೆ ನಡೆದಿರುವಂತೆ ಪಶ್ಚಿಮದ ವಿಜ್ಞಾನಿಗಳನ್ನು ಕನ್ನಡಿಗರಿಗೆ ಪರಿಚಯಿಸುವುದರ ಭಾಗವಾಗಿ ಸಹ ವಿಜ್ಞಾನದ ಕೃತಿಗಳು ಭಾಷಾಂತರಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ 'ವಿಜ್ಞಾನ ವಿಕಾಸ' (೧೯೦೮, ಐಚ್ಛಿಕ)ವೆಂಬ ಕೃತಿಯಲ್ಲಿ ಪಾಶ್ಚಿಮಾತ್ಯ ವಿಜ್ಞಾನಿಗಳಾದ ಲೂಯಿ ಪಾಶ್ಚರ್, ಗೆಲಿಲಿಯೊ ಮುಂತಾದವರ ಜೀವನ ಪರಿಚಯ ಹಾಗೂ ಅವರ ವಿಜ್ಞಾನದ ಸಾಧನೆಯನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅಲ್ಲದೆ ವಿವಿಧ ಯಂತ್ರಗಳ ಬಳಕೆ, ಉಪಯೋಗ ಹಾಗೂ ಅವುಗಳ ಚಾಲನೆಯ ಮಹತ್ವವನ್ನು ಸಹ ಭಾಷಾಂತರದ ಮೂಲಕವೆ ಒದಗಿಸಿರುವುದು ವಿಶಿಷ್ಟವಾಗಿದೆ.

ಇದರಿಂದ ಗುರುತಿಸಬಹುದಾದ ಅಂಶಗಳೆಂದರೆ, ಸಾಹಿತ್ಯೇತರ ಕೃತಿಗಳ ಭಾಷಾಂತರಕಾರರು ಕೇವಲ ವಿಜ್ಞಾನ, ಗಣಿತ ಇತ್ಯಾದಿ ವಿಚಾರಗಳನ್ನು ಮಾತ್ರ ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನಮಾಡದೆ, ಅವುಗಳ ಅಗತ್ಯತೆ ಹಾಗೂ ಉಪಯೋಗ, ಬಳಕೆಯ ಕುರಿತು ಹೆಚ್ಚು ಗಮನಹರಿಸಿದರು. 'ವಿಜ್ಞಾನದ ವಿಚಿತ್ರಗಳು' (೧೯೦೬) ಕೃತಿಯಲ್ಲಿ ರೇಡಿಯೋ, ಟೆಲಿವಿಷನ್ ಮುಂತಾದ ಹದಿನಾರು ವಿಷಯಗಳ 'ಪಾರಿಭಾಷಿಕ ಪದಕೋಶ'ವನ್ನು ಕೊಟ್ಟಿರುವುದನ್ನು ಗಮನಿಸಿದರೆ ಭಾಷಾಂತರದ ವಿಶಿಷ್ಟ ಸ್ವರೂಪ ಗೋಚರಿಸುತ್ತದೆ. ಕೇವಲ ಸಾಹಿತ್ಯಕ 'ಪಾರಿಭಾಷಿಕ ಕೋಶ' ವನ್ನಲ್ಲದೆ ಸಾಹಿತ್ಯೇತರ ಜ್ಞಾನಶಿಸ್ತುಗಳಲ್ಲಿಯೂ ಕನ್ನಡದ 'ಪಾರಿಭಾಷಿಕ ಕೋಶ'ಗಳನ್ನು ರೂಪಿಸಿಕೊಳ್ಳುವ ಪ್ರಯತ್ನಕ್ಕೆ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿಯೇ ಅಸ್ತಿವಾರ ಹಾಕಲಾಯಿತು. ಜೊತೆಗೆ ಸಾಹಿತ್ಯೇತರ ಜ್ಞಾನಶಿಸ್ತುಗಳ ಮಾಹಿತಿಯನ್ನು ಪ್ರಾಂತೀಯ ಭಾಷೆಗಳಲ್ಲಿ ಒದಗಿಸುವ ಉದ್ದೇಶದಿಂದ ಕೂಡ ಭಾಷಾಂತರ ಚಟುವಟಿಕೆ ನಡೆದಿದೆ.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ವೈದ್ಯ ಮತ್ತು ಪಶುವೈದ್ಯಕ್ಕೆ ಸಂಬಂಧಿಸಿದಂತೆ ಸುಮಾರು ೪೧ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. 'ಆರೋಗ್ಯ ಸೂತ್ರ ಸಂಗ್ರಹ' (೧೮೮೩), 'ಆಂಗ್ಲ ವೈದ್ಯ ಶಾಸ್ತ್ರ' (೧೯೦೪), 'ಪ್ರಶ್ನೋತ್ತರ ಆರೋಗ್ಯ ಶಾಸ್ತ್ರ' (೧೮೮೬), 'ವೈದ್ಯ ಸಂಗ್ರಹ' (೧೮೮೮), 'ಪ್ರಾಣಿ ಶಾಸ್ತ್ರ ಸಚಿತ್ರ' (೧೯೧೫) ಇತ್ಯಾದಿಗಳು, ವಿವಿಧ ಉದ್ದೇಶಗಳಡಿಯಲ್ಲಿ ಕನ್ನಡದಲ್ಲಿ ರೂಪುಗೊಂಡಿವೆ. ಕೃತಿಗಳ ಪಟ್ಟಿಯನ್ನು ಅನುಬಂಧ ೪ರಲ್ಲಿ ಗಮನಿಸಬಹುದು. ಇತರ ಸಾಹಿತ್ಯೇತರ ಜ್ಞಾನಶಿಸ್ತುಗಳ ಕೃತಿಗಳಂತೆ ಈ ಕೃತಿಗಳಲ್ಲಿ ಬಹುಪಾಲು ಇಂಗ್ಲಿಷ್ ಮತ್ತು ಸಂಸ್ಕೃತದಿಂದ ನೇರವಾಗಿ ಕನ್ನಡಕ್ಕೆ ಭಾಷಾಂತರಗೊಂಡಿದ್ದು ಕೆಲವು ಕೃತಿಗಳು ವಿದ್ಯಾರ್ಥಿಗಳ ಓದಿಗಾಗಿ ಸಹ ಕನ್ನಡಕ್ಕೆ ಬಂದಿವೆ. ಈ ಎಲ್ಲಾ ಕೃತಿಗಳು ಕನ್ನಡದಲ್ಲಿ ಆರೋಗ್ಯದ ಮಾಹಿತಿಯನ್ನು ವೈಜ್ಞಾನಿಕವಾಗಿ ಒದಗಿಸುವ, ರೋಗಗಳ ಕುರಿತು ಅರಿವು ಮೂಡಿಸುವ ಹಾಗೂ ಪ್ರಾಣಿಗಳ ಸಾಕಾಣಿಕೆ ಇತ್ಯಾದಿಗಳನ್ನು ತಿಳಿದುಕೊಳ್ಳುವ ಭಾಗವಾಗಿ ಕೂಡ ಭಾಷಾಂತರಿಸಿಕೊಳ್ಳುವ ಪ್ರಯತ್ನಗಳು ನಡೆದಿರುವವು.

ರಾಮಕೃಷ್ಣಯ್ಯ ಪಂಡಿತರ 'ಆಯುರ್ವೇದಸಾರ' (೧೯೨೦) ಮತ್ತು 'ಹರಿರಾಮ ಶಾಸ್ತ್ರಿಯವರ ಚಿಕಿತ್ಸಾಸಾರ' (೧೮೯೨) ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಸಾಹಿತ್ಯೇತರ ಜ್ಞಾನಶಿಸ್ತುಗಳ ಪ್ರಮುಖ ಕೃತಿಗಳು. ಚಿಕಿತ್ಸಾಸಾರದಲ್ಲಿ ಶುಶೃತ, ವಾಗ್ಭಟರು ಚರ್ಚಿಸಿದ ಸಂಸ್ಕೃತದಲ್ಲಿನ ಆರೋಗ್ಯ ಸೂತ್ರಗಳನ್ನು ಕನ್ನಡದಲ್ಲಿ ರೂಪಿಸಿಕೊಂಡರೆ ಆಯುರ್ವೇದಸಾರ ಸಂಸ್ಕೃತದ ಆಯುರ್ವೇದದ ವಿಷಯಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವುದರ ಜೊತೆಗೆ ಅಗತ್ಯವೆನಿಸಿರುವ ಕಡೆಗಳಲ್ಲಿ ರೋಗಗಳ ಹೆಸರನ್ನು ಕನ್ನಡದೊಂದಿಗೆ ಇಂಗ್ಲಿಷಿನಲ್ಲಿಯೂ ಕೊಟ್ಟಿರುವುದು

ಗಮನಾರ್ಹವಾಗಿದೆ. ಯಾವುದೇ ಪಠ್ಯವು ಒಂದು ಭಾಷೆಯಿಂದ ಬೇರೊಂದು ಭಾಷೆಗೆ ಭಾಷಾಂತರವಾಗುವಾಗ ಅದು ಉದ್ದಿಷ್ಟ ಭಾಷೆಯಲ್ಲಿ ನಿರೀಕ್ಷಿತ ಫಲವನ್ನು ಕೊಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಭಾಷಾಂತರ ಕೃತಿಗಳಲ್ಲಿ ಇಂಗ್ಲಿಷ್ ಹೆಸರುಗಳನ್ನು ಕೊಡುವ ಹಾಗೂ ಪಾರಿಭಾಷಿಕ ಪದಕೋಶ ಬರೆಯುವ ಪ್ರಯೋಗಗಳು ಪರಿಣಾಮಕಾರಿಯಾಗಿ ನಡೆದಿರಬೇಕು. ರಾಮಕೃಷ್ಣಯ್ಯ ಅವರು ಮುನ್ನುಡಿಯಲ್ಲಿ ಈ ಕುರಿತು ಪ್ರಸ್ತಾಪಿಸುತ್ತ, ''ಆಯುರ್ವೇದಸಾರವನ್ನು ಕನ್ನಡದಲ್ಲಿ ರಚಿಸುವಾಗ ಈವರೆಗೆ ಸಂಸ್ಕೃತದಲ್ಲಿಯೂ ಇಂಗ್ಲಿಷ್‌ನಲ್ಲಿಯೂ ಹಾಗೂ ಕನ್ನಡದಲ್ಲಿ ಬಂದಿರುವ ಕೃತಿಗಳನ್ನು ಓದಿ, ಪಂಡಿತರಿಂದ ಮಾಹಿತಿ ವಿವರಗಳನ್ನು ಪಡೆದು ರಚಿಸಿರುವೆ'' (ರಾಮಕೃಷ್ಣಯ್ಯ, ಆಯುರ್ವೇದಸಾರ, ೧೯೨೧, ಮುನ್ನುಡಿ) ಎನ್ನುತ್ತಾರೆ. ಅಂದರೆ ಕನ್ನಡದ ಸಂದರ್ಭಕ್ಕೆ ಅಗತ್ಯವೆನಿಸಿದ ವೈದ್ಯಕೀಯ ಕೃತಿಯೊಂದು ಬೇರೊಂದು ಭಾಷೆಯಿಂದ ನೇರವಾಗಿ ಭಾಷಾಂತರಗೊಳ್ಳುವುದರೊಂದಿಗೆ ಬಹುಮೂಲವನ್ನು (ಕನ್ನಡವನ್ನು ಬಳಸಿಕೊಂಡು) ಆಧರಿಸಿ ಸಹ ರೂಪಿಸಿಕೊಳ್ಳಲಾಗಿದೆ ಎಂಬುದು ತಿಳಿಯುತ್ತದೆ.

ಯಾವುದೇ ಒಂದು ಕೃತಿಯು ಬೇರೊಂದು ಭಾಷೆಗೆ ಭಾಷಾಂತರಗೊಳ್ಳುವಾಗ ಮೂಲ ಪಠ್ಯದ ಎಲ್ಲಾ ಪದ, ವಿಷಯಗಳಿಗೆ ಸಂಬಂಧಿಸಿದ ಅರ್ಥಗಳು ಭಾಷಾಂತರಗೊಳ್ಳುವ ಭಾಷೆಯಲ್ಲಿ ದೊರೆಯುವುದು ಕಷ್ಟ ಸಾಧ್ಯ. ಅಂತಹ ಸಂದರ್ಭದಲ್ಲಿ ಅಡಿ ಟಿಪ್ಪಣಿ ಕೊಡುವ ಹಾಗೂ ಮೂಲದ ಪದವನ್ನು ಯಥಾ ರೀತಿಯಲ್ಲಿ ಭಾಷಾಂತರ ಕೃತಿಯಲ್ಲಿ ಕೊಡುವ ಕ್ರಮವನ್ನು ಅನುಸರಿಸಲಾಗುತ್ತದೆ. ಹೀಗಾಗಿ ವೈದ್ಯಕೀಯ ಸಂಬಂಧಿತ ಕೆಲವೊಂದು ಪರಿಕಲ್ಪನೆ ಹಾಗೂ ರೋಗಗಳ ಹೆಸರುಗಳನ್ನು ಇಂಗ್ಲಿಷಿನಲ್ಲಿ ಕೊಡಲಾಗಿದೆ. ಅದರಲ್ಲೂ ಇಂಗ್ಲಿಷಿನಿಂದ ಕೆಲವೊಂದು ಪರಿಕಲ್ಪನೆಯನ್ನು ಕನ್ನಡವೂ ಸೇರದಂತೆ ದೇಶೀಯ ಭಾಷೆಗಳಲ್ಲಿ ಭಾಷಾಂತರಿಸಿಕೊಳ್ಳುವಾಗ ಸಂಸ್ಕೃತದ ಪದಗಳನ್ನು ಇದಕ್ಕೆ ಸಮನಾಗಿ ಬಳಸಿಕೊಳ್ಳುವ, ಪ್ರಯೋಗಿಸುವ ಕ್ರಮ ಚಾಲ್ತಿಯಲ್ಲಿದೆ. ಉದಾಹರಣೆಗೆ ಕನ್ನಡದ ಸಂದರ್ಭದಲ್ಲಿ Coldwar - ಶೀತಲ ಸಮರವಾದರೆ Blue revalution - ಮತ್ಸ್ಯಕ್ರಾಂತಿಯಾಗಿ ಕನ್ನಡದ್ದಾಗಿಯೇ ಉಳಿದುಕೊಂಡಿದೆ. ಅದರಿಂದ ಸಾಹಿತ್ಯೇತರ ಕೃತಿಗಳ ಭಾಷಾಂತರಕಾರರು ಭಾಷಾಂತರಗೊಳ್ಳುವ ಭಾಷೆಯಲ್ಲಿ ಇಂಗ್ಲಿಷ್‌ನ ಹೆಸರುಗಳನ್ನು ಮಾಹಿತಿ ಹಾಗೂ ಜ್ಞಾನದ ದೃಷ್ಟಿಯಿಂದ ಕೊಡುವ ಪ್ರಯತ್ನ ಮಾಡಿದ್ದಾರೆ.

ಸಾಹಿತ್ಯೇತರ ಕೃತಿಗಳ ಭಾಷಾಂತರದಲ್ಲಿ ನೇರವಾದ, ಖಚಿತವಾದ ಮಾಹಿತಿಗಳು ಮುಖ್ಯವು ಅಗತ್ಯವು ಆಗಿರುವುದರಿಂದ ಮೂಲ ಭಾಷೆಯಿಂದ ಈ ವಿಷಯಗಳನ್ನು ಭಾಷಾಂತರಿಸಿಕೊಳ್ಳುವಾಗ ಅದು ಉದ್ದಿಷ್ಟ ಭಾಷೆಯ ಜನರಿಗೆ ಅರ್ಥವಾಗುವುದು ಮುಖ್ಯವಾಗಿರುತ್ತದೆ. ಹೀಗಾಗಿ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಭಾಷಾಂತರ ಪ್ರಕ್ರಿಯೆ ಕೆಲವು ಪ್ರಯೋಗಗಳನ್ನು ಕಂಡುಕೊಂಡಿತು. ಇಂದು ಅವು ಭಿನ್ನ ರೀತಿಯಲ್ಲಿ ಮುಂದುವರಿಯುತ್ತಿವೆ.

ಕೃಷಿ, ಗಣಿತ ಮತ್ತು ವೈದ್ಯಕೀಯ ವಿಷಯಗಳ ಕುರಿತು ಕನ್ನಡದಲ್ಲಿ ಕೃತಿಗಳನ್ನು ರೂಪಿಸಿಕೊಳ್ಳುವುದರೊಂದಿಗೆ ಇತರ ವಿಷಯಗಳ ಕೃತಿಗಳನ್ನು ಸಹ ಕನ್ನಡದಲ್ಲಿ ಭಾಷಾಂತರಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ೧೮೫೦ ರಿಂದ ೧೯೨೦ರ ನಡುವೆ ಬಂದಿರುವ ಇತರ ಕೃತಿಗಳೆಂದರೆ 'ಕಲಾತರಂಗ' (೧೯೦೯), 'ಸೂರ್ಯ ಸಚಿತ್ರ' (೧೯೧೮), 'ಕನ್ನಡ ಯಂತ್ರ ಶಾಸ್ತ್ರ' (೧೮೮೨) ಇತ್ಯಾದಿಗಳು. ಈ ಎಲ್ಲಾ ಕೃತಿಗಳು ಜ್ಞಾನ ಹಾಗೂ ಜೀವನಾವಶ್ಯಕತೆಯ ಹಿನ್ನೆಲೆಯಿಂದ ಭಾಷಾಂತರಗೊಂಡವುಗಳಾಗಿವೆ.

‘ಇಂಗ್ಲಿಷ್ ಗೀತಗಳು’ ಪೂರ್ವದಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರವು ಸಾಹಿತ್ಯ ಕೃತಿಗಳ ಭಾಷಾಂತರದಂತೆ ವಸಾಹತುಶಾಹಿಯನ್ನು ಅರ್ಥೈಸಿಕೊಳ್ಳುವುದರ ಭಾಗವಾಗಿಯೂ ನಡೆದಿವೆ. ಇದರ ಉದ್ದೇಶ ಅಥವಾ ಅಗತ್ಯದ ಬಗ್ಗೆ ಭಾಷಾಂತರಕಾರರು ಹೀಗೆ ಹೇಳುವರು. ‘‘ಇತರ ಭಾಷೆಗಳಲ್ಲಿರುವಂತೆ ನಮ್ಮ ಕನ್ನಡ ಭಾಷೆಯಲ್ಲಿ ಗ್ರಂಥಗಳು ಹೇರಳವಾಗಿಲ್ಲವಾದ್ದರಿಂದ ಅನ್ಯ ಭಾಷಾ ಪರಿಚಯಕ್ಕವಕಾಶವಿಲ್ಲದೆ ಗ್ರಾಮಾಂತರಗಳಲ್ಲಿಯೂ ಮತ್ತು ಇತರ ಸ್ಥಳಗಳಲ್ಲಿಯೂ ಇರುವ ಸಹಸ್ರಾರು ಮಂದಿ ಸೋದರ ಬಾಂಧವರು ಮೇಲ್ಕಂಡ ಭಾಷೆಗಳಲ್ಲಿನ ಗ್ರಂಥ ವಿಶೇಷಗಳನ್ನು ಸುಲಭವಾಗಿ ಗ್ರಹಿಸುವಂತೆ ಭಾಷಾಂತರಾದಿಗಳಿಂದ ಅನುಕೂಲಪಡಿಸುವುದೇ ಭಾಷಾ ಸೇವಕರ ಮುಖ್ಯ ಕರ್ತವ್ಯವೆಂದು ಬೋಧಿತವಾಗಿ ನಾನು ಈ ಮಹತ್ಕಾರ್ಯಕ್ಕೆ ಕೈ ನೀಡಿದನು. ಈ ಭಾಷೆಯಲ್ಲಿ ಇದುವರೆಗೆ ಇಂತಹ ಪುಸ್ತಕವೇ ಇರಲಿಲ್ಲ. ಈ ಕೊರತೆಯನ್ನು ಹೋಗಲಾಡಿಸುವ ಉದ್ದೇಶದಿಂದ...... ಈ ಪುಸ್ತಕದ ಮುಖ್ಯೋದ್ದೇಶವು ದೇಶೀಯರಲ್ಲಿ ಕೈಗಾರಿಕೆಗಳನ್ನು ವೃದ್ಧಿಗೆ ತರಬೇಕೆಂಬುದೇ, ಇದರಲ್ಲಿನ ವಿಧವಿಧವಾದ ಅನೇಕ ವಿಷಯಗಳನ್ನು ಇಂಗ್ಲಿಷ್ ಮೊದಲಾದ ಅನ್ಯಭಾಷಾ ಗ್ರಂಥಗಳಿಂದ ಸಂಗ್ರಹಿಸಿ, ಗ್ರಾಹಕರು ವರ್ತಮಾನ ಕಾಲದ ವಿವಿಧ ವ್ಯಾಪಾರಗಳನ್ನಾಗಲಿ, ವಿನೋದಗಳನ್ನಾಗಲೀ, ಯಾವ ವಿಷಯವನ್ನು ಬೇಕಾದರೂ ನೋಡಿದೊಡನೆ ವಿಶದವಾಗಿ ತಿಳಿಯಲುನುಕೂಲಸುವಂತೆ ವಿವರಿಸಿರುತ್ತೇನೆ’’ (ಗೋವಿಂದರಾಜ ನಾಯುಡು, ೧೯೦೯, ಪೀಠಿಕೆ).

ಈ ಮೇಲಿನ ವಿಚಾರವನ್ನು ನಾಯುಡು ಅವರು ಕೈಗಾರಿಕೆಗಳಿಗೆ ಬೋಧಿಸುವ ಪಠ್ಯವೊಂದರ ಭಾಷಾಂತರದ ಸಂದರ್ಭದಲ್ಲಿ ಹೇಳಿದರೂ ಇದು ೧೯ನೇ ಶತಮಾನದಲ್ಲಿ ಸಾಹಿತ್ಯೇತರ ಕೃತಿಗಳು ಯಾಕಾಗಿ ಭಾಷಾಂತರಗೊಳ್ಳುತ್ತಿದ್ದವು ಎಂಬ ಪ್ರಶ್ನೆಗೆ ಉತ್ತರವೂ ಆಗಿದೆ. ‘ಇಂಗ್ಲಿಷ್ ಗೀತಗಳು’ ಪೂರ್ವದ ಸುಮಾರು ಏಳು ದಶಕಗಳಲ್ಲಿ ನಡೆದ ಗಣಿತ, ವಿಜ್ಞಾನ ಮತ್ತು ವೈದ್ಯಕೀಯ ಇತ್ಯಾದಿಗಳಿಗೆ ಸಂಬಂಧಿಸಿದ ಕೃತಿಗಳು ಕೂಡ ಈ ಹಿನ್ನೆಲೆಯಲ್ಲಿಯೇ ರೂಪುಗೊಂಡಿವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರದ ಅಗತ್ಯವನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಬಹುದು.

೧. ಕನ್ನಡ ಹಾಗೂ ಇತರೆ ಪ್ರಾಂತೀಯ ಭಾಷೆಯಲ್ಲಿರುವ ಸಾಹಿತ್ಯೇತರ ಜ್ಞಾನಶಿಸ್ತುಗಳ ಕೃತಿಗಳ ಕೊರತೆಯನ್ನು ತುಂಬಿಕೊಳ್ಳುವ ಅಗತ್ಯಕ್ಕಾಗಿ.

೨. ಈ ವಿಷಯದ ಕುರಿತಾದ ಮಾಹಿತಿಯನ್ನು ತಮ್ಮ ಭಾಷೆಯಲ್ಲಿ ಪಡೆಯಬೇಕೆಂಬುದು.

೩. ಗ್ರಾಮಾಂತರ ಜನರಿಗೆ ಇವುಗಳ ವಿಚಾರವನ್ನು ತಿಳಿಸುವ ಉದ್ದೇಶದಿಂದ ಹಾಗೂ

೪. ಹೊರಗಿನ ಜ್ಞಾನವನ್ನು ದೇಶೀಯ ಭಾಷೆಗಳಲ್ಲಿ ಒದಗಿಸಬೇಕು ಎಂಬ ಇಚ್ಛಾ ಶಕ್ತಿ ಕೂಡ ಭಾಷಾಂತರಕ್ಕೆ ಕಾರಣವಾಗಿದೆ.

೫. ಕನ್ನಡ ಭಾಷೆಯನ್ನು ಎಲ್ಲಾ ಜ್ಞಾನಶಿಸ್ತುಗಳ ಮಾಧ್ಯಮ ಭಾಷೆಯಾಗಿ ಬಳಸುವುದು ಹಾಗೂ ಶಿಕ್ಷಣದ ಮಾಧ್ಯಮವಾಗಿ ಅಳವಡಿಸುವುದು ಈ ಎಲ್ಲಾ ಭಾಷಾಂತರಗಳ ಹಿಂದಿನ ಉದ್ದೇಶವಾಗಿದೆ.

೬. ಸಾಹಿತ್ಯೇತರ ಜ್ಞಾನಶಿಸ್ತುಗಳ ಕುರಿತಿರುವ ಕೃತಿ ಮತ್ತು ಮಾಹಿತಿಗಳ ಕೊರತೆಗಳನ್ನು ತುಂಬುವ ಭಾಗವಾಗಿ ಸಹ ಭಾಷಾಂತರ ನಡೆದಿದೆ.

ಹೀಗೆ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಬಂದಿರುವ ಸಾಹಿತ್ಯೇತರ ಭಾಷಾಂತರ ಕೃತಿಗಳನ್ನು ವಿಷಯಾಧಾರಿತವಾಗಿ ವಿಂಗಡಿಸಿಕೊಂಡಾಗ ಈ ಮೇಲಿನ ಹತ್ತು - ಹಲವು ಸಂಗತಿಗಳು ಬೆಳಕಿಗೆ ಬರುತ್ತವೆ. ಇಲ್ಲಿನ ಬಹುತೇಕ ಕೃತಿಗಳ ಭಾಷಾಂತರದ ಉದ್ದೇಶ ಜ್ಞಾನ ಹಾಗೂ ಮಾಹಿತಿಯನ್ನು ಕನ್ನಡದಲ್ಲಿ ಪಡೆಯುವುದಾದರೂ ಆ ಮೂಲಕ ಪ್ರಾಂತೀಯ ಭಾಷೆಗಳನ್ನು ಪಶ್ಚಿಮದ ಭಾಷೆಗಳಂತೆ ಸಜ್ಜುಗೊಳಿಸುವ ಕೆಲಸವನ್ನು ಮಾಡಿದ್ದಾರೆ. ಇಲ್ಲಿ ಭಾಷಾಂತರ ಬರಿ ಚಟುವಟಿಕೆಯಾಗಿರದೆ, ಈ ಕಾಲದ ಸಾಮಾಜಿಕ ಸಂದರ್ಭದ ಅಗತ್ಯತೆಯ ನಡುವೆ ಕನ್ನಡದಲ್ಲಿ ಸಾಹಿತ್ಯಕ ವಿಷಯಗಳಿರುವಂತೆ ಸಾಹಿತ್ಯೇತರ ಜ್ಞಾನಶಿಸ್ತುಗಳ ಕುರಿತ ಮಾಹಿತಿಯನ್ನು ಕೊಡುವುದು, ರೂಪಿಸುವುದು ಮುಖ್ಯವೆನಿಸಿತ್ತು.

**೭.೨. ಸಾಹಿತ್ಯೇತರ ಕೃತಿಗಳ ಭಾಷಾಂತರ ಮತ್ತು ಭಾಷೆ**

ಕನ್ನಡದ ಸಂದರ್ಭದಲ್ಲಿ ರೂಪುಗೊಂಡ ಸಾಹಿತ್ಯೇತರ ಪಠ್ಯಗಳು ಬೇರೆ ಬೇರೆ ಭಾಷೆಗಳಿಂದ ಬಂದವುಗಳಾಗಿದ್ದು ಕೆಲವು ಪಠ್ಯಗಳು ಇಂಗ್ಲಿಷ್ ಅಥವಾ ಸಂಸ್ಕೃತದಿಂದ ನೇರವಾಗಿ ಕನ್ನಡಕ್ಕೆ ಭಾಷಾಂತರಗೊಂಡರೆ ಇನ್ನೂ ಕೆಲವು ಮಧ್ಯವರ್ತಿ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿವೆ. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಬಂದಿರುವ ಸಾಹಿತ್ಯೇತರ ಕೃತಿಗಳನ್ನು ಒಟ್ಟಾಗಿ ಗಮನಿಸಿದರೆ ಅವುಗಳು ಪ್ರಮುಖವಾಗಿ ಎರಡು ಧಾರೆಗಳಲ್ಲಿ ಕನ್ನಡಕ್ಕೆ ಬಂದಿರುವುದನ್ನು ಕಾಣಬಹುದು. ಒಂದು, ಇಂಗ್ಲಿಷ್ ಅಥವಾ ಪಶ್ಚಿಮದ ಭಾಷೆಗಳಿಂದ ನಡೆದ ಸಾಹಿತ್ಯೇತರ ಕೃತಿಗಳ ಭಾಷಾಂತರವಾದರೆ ಎರಡು, ಭಾರತೀಯ ಭಾಷೆಗಳಿಂದ ಆಗಿರುವ ಸಾಹಿತ್ಯೇತರ ಕೃತಿಗಳ ಭಾಷಾಂತರ. ಈ ಎರಡು ಪ್ರಕ್ರಿಯೆಗಳ ಮೂಲ ಉದ್ದೇಶ ಕನ್ನಡದಲ್ಲಿ ಸಾಹಿತ್ಯೇತರ ಜ್ಞಾನಶಿಸ್ತುಗಳ ಜ್ಞಾನವನ್ನು ರೂಪಿಸುವುದಾದರೂ ಕಂಡುಕೊಂಡ ದಾರಿ ಹಾಗೂ ಪ್ರಕ್ರಿಯೆಯ ಸ್ವರೂಪ ಸಂಪೂರ್ಣ ಭಿನ್ನವಾಗಿವೆ.

**೭.೨.೧. ಇಂಗ್ಲಿಷ್‌ನಿಂದ ನಡೆದ ಸಾಹಿತ್ಯೇತರ ಕೃತಿಗಳ ಭಾಷಾಂತರ**

೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡಕ್ಕೆ ಬಂದಿರುವ ಒಟ್ಟು ಸಾಹಿತ್ಯೇತರ ಜ್ಞಾನಶಿಸ್ತುಗಳ ಕೃತಿಗಳಲ್ಲಿ ಹೆಚ್ಚಿನವು ಇಂಗ್ಲಿಷ್ ಮೂಲದಿಂದ ಕನ್ನಡಕ್ಕೆ ಬಂದವುಗಳಾಗಿವೆ. ಆದರೆ ಈ ಕೃತಿಗಳು ಪ್ರಾಥಮಿಕವಾಗಿ ಇಂಗ್ಲಿಷಿನಲ್ಲಿ ರಚನೆಯಾದವೆ ಅಥವಾ ಇನ್ನಿತರ ಪಶ್ಚಿಮದ ಭಾಷೆಗಳನ್ನು ಆಧರಿಸಿ ಇಂಗ್ಲಿಷಿನಲ್ಲಿ ರಚನೆಗೊಂಡು ನಂತರ ಕನ್ನಡದ ಅಗತ್ಯತೆಗಾಗಿ 'ಕನ್ನಡೀಕರಣ'ಗೊಂಡವೆ ಎಂಬುವ ಕುರಿತು ಖಚಿತವಾದ ಮಾಹಿತಿ ದೊರೆಯುವುದಿಲ್ಲ. ಆದರೂ ಕನ್ನಡ ಭಾಷೆಯು ಸಾಹಿತ್ಯದ ಗಮನಾರ್ಹ ಸಂಗತಿಗಳನ್ನು ಇಂಗ್ಲಿಷಿನಿಂದ ಪಡೆದುಕೊಂಡು ಕನ್ನಡದಲ್ಲಿ ರೂಪಿಸಿಕೊಂಡಂತೆ ಸಾಹಿತ್ಯೇತರ ಕೃತಿಗಳನ್ನು ಸಹ ಇಂಗ್ಲಿಷಿನಿಂದ ಕನ್ನಡದ್ದಾಗಿಸಿಕೊಳ್ಳುವ ಪ್ರಯತ್ನವನ್ನು ಮಾಡಿವೆ.

ವಸಾಹತುಶಾಹಿಯ ಪರಿಣಾಮದಿಂದಾಗಿ ೧೯ನೇ ಶತಮಾನದಲ್ಲಿ ಆಧುನಿಕ ಶಿಕ್ಷಣ ಪದ್ಧತಿ ಸಮರ್ಪಕವಾಗಿ ಜಾರಿಗೊಂಡಿದ್ದು ಹಾಗೂ ಇಂಗ್ಲಿಷ್ ಮಾಧ್ಯಮದಲ್ಲಿರುವ ಆಡಳಿತ ವ್ಯವಸ್ಥೆ ಇತ್ಯಾದಿಗಳಿಂದ ಕರ್ನಾಟಕವು ಸೇರಿದಂತೆ ಇಡೀ ಭಾರತ ದೇಶವು ಅನಿವಾರ್ಯವಾಗಿ ಇಂಗ್ಲಿಷ್‌ನ್ನು ಅನುಸರಿಸುವ, ಕಲಿಯುವ ವಾತಾವರಣದೊಳಗೆ ಸೇರಿಕೊಂಡಿತು. ಅದರೊಂದಿಗೆ ಬ್ರಿಟೀಷ್ ಆಡಳಿತವೇ ಆಧುನಿಕ ಶಿಕ್ಷಣದ ಪ್ರಾಥಮಿಕ ಹಂತದಲ್ಲಿ ಕನ್ನಡವನ್ನು ಮಾಧ್ಯಮವಾಗಿಸುವ ಅವಕಾಶವನ್ನು ಒದಗಿಸಿತು. ಪರಿಣಾಮವಾಗಿ ಇಂಗ್ಲಿಷ್-ಕನ್ನಡದ ಭಾಷಾಂತರದ ನಂಟು

ಬೆಳೆಯಿತು. ಕನ್ನಡದ ಸಂದರ್ಭದಲ್ಲಿ ಚಾಲ್ತಿಗೆ ಬಂದ ಆಧುನಿಕ ಶಿಕ್ಷಣ ಕ್ರಮ ಹಾಗೂ ಅದರ ಭಾಗವಾಗಿ ಬಂದ 'ಪಠ್ಯಪುಸ್ತಕ'ಗಳು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಗೊಂಡಿರುವವುಗಳೇ ಆಗಿವೆ. ಇಂತಹ ಸಂದರ್ಭದಲ್ಲಿ ಸಾಹಿತ್ಯೇತರ ಕೃತಿಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ತಂದುಕೊಳ್ಳುವುದು ಅಗತ್ಯವೆನಿಸಿತು. ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ಈರೀತಿ ಕೃತಿಗಳು ಶಿಕ್ಷಣ ಹಾಗೂ ಹೊಸದಾಗಿ ರೂಪುಗೊಳ್ಳುತ್ತಿದ್ದ ಶಿಕ್ಷಿತ ಸಮುದಾಯದ ಅಗತ್ಯಕ್ಕಾಗಿ ಬಂದಿವೆಯೆಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ.

ಈ ಹಿನ್ನೆಲೆಯಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ ಬಂದಿರುವ ಕೃತಿಗಳೆಂದರೆ 'ಯುಕ್ಲೀಡ್‌ನ ಸಿದ್ಧಾಂತಗಳು' (೧೮೭೨), 'ವ್ಯವಸಾಯ ಕ್ರಮ ಬೋಧಿನಿ' (೧೮೭೯), 'ಕ್ಷೇತ್ರಫಲ - ಘನಫಲ' (೧೮೯೬), 'ಹಿಂದೂ ದೇಶದ ಸಸ್ಯಶಾಸ್ತ್ರ' (೧೯೧೯), 'ಆರೋಗ್ಯ ವಿಜ್ಞಾನ' (೧೯೧೫), 'ಸರಳಾರೋಗ್ಯ ಪಾಠ' (೧೮೯೯), 'ಕಲಾತರಂಗ' (೧೯೦೯) 'ಕನ್ನಡ ಯಂತ್ರ ಶಾಸ್ತ್ರ' (೧೮೮೨) ಇತ್ಯಾದಿಗಳು. (ಕೃತಿಗಳ ಪಟ್ಟಿಯನ್ನು ಅನುಬಂಧ ೪ರಲ್ಲಿ ನೋಡಬಹುದು.) ವಸಾಹತು ಸಂದರ್ಭದಲ್ಲಿನ ಬಹುತೇಕ ಚಿಂತನೆ, ಆಲೋಚನೆಗಳನ್ನು ಇಂಗ್ಲಿಷ್ ಭಾಷೆ ನಿಯಂತ್ರಿಸುತ್ತಿತ್ತು. ಅಲ್ಲದೆ ಜಾಗತಿಕ ಮಟ್ಟದಲ್ಲಿ ಏನಾದರೂ ಆವಿಷ್ಕಾರವಾದರೆ ಅದರ ಪರಿಚಯವಾಗುವುದೇ ಈ ಭಾಷೆಯಲ್ಲಿಯೇ ವಸಾಹತು ಆಳ್ವಿಕೆಯಿಂದಾಗಿ ಆಗಲೂ - ಈಗಲೂ ಪಶ್ಚಿಮದೊಂದಿಗಿನ ಭಾರತದ ಮುಖಾಮುಖಿ ಪ್ರಮುಖವಾಗಿ ಇಂಗ್ಲಿಷ್ ಮುಖಾಂತರವೇ. ಇದರಿಂದಾಗಿ ಸಾಹಿತ್ಯದಂತೆಯೇ ಸಾಹಿತ್ಯೇತರ ಕೃತಿಗಳನ್ನು ಭಾರತೀಯ ಭಾಷೆಗಳು ಸಹ ಇದೇ ಮಾದರಿಯಲ್ಲಿ ಇಂಗ್ಲಿಷಿನಿಂದ ಪಡೆದುಕೊಂಡವು. ಕನ್ನಡದಲ್ಲಿ ಈ ಸ್ವರೂಪ ಹೇಗಿತ್ತೆಂದರೆ, ಭಾರತವು ಬ್ರಿಟೀಷ್‌ರ ವಸಾಹತಾಗಿ ರೂಪಾಂತರಗೊಂಡಿದ್ದರ ಪರಿಣಾಮವಾಗಿ ಇಂಗ್ಲಿಷ್ ಈ ದೇಶದ ಪ್ರಮುಖ ಸಂವೇದನಾ ನೆಲೆಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿತು. ಇದರಿಂದಾಗಿ ಅಥವಾ ಇದರ ಭಾಗವಾಗಿ ಯುರೋಪಿನ ಮಾದರಿಗಳು ಕನ್ನಡದಲ್ಲಿ ವಿವಿಧ ಆಯಾಮಗಳಲ್ಲಿ ರೂಪುಗೊಳ್ಳುವಂತಾಯಿತು. ಇದರಿಂದಾಗಿ ಇಂಗ್ಲಿಷ್‌ನ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡವು. ಶಿಕ್ಷಣ ಮತ್ತು ಆಡಳಿತ ಫಲವಾಗಿ ಬಹುತೇಕ ಕನ್ನಡಿಗರಿಗೆ (ಭಾರತೀಯರಿಗೂ) ಇಂಗ್ಲಿಷ್‌ನ ಪರಿಚಯವಿದ್ದರಿಂದ ಜ್ಞಾನ ಮತ್ತು ಮಾಹಿತಿಯ ಕಾರಣದಿಂದ ಇಂಗ್ಲಿಷಿನಲ್ಲಿರುವ ಸಾಹಿತ್ಯೇತರ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನಕ್ಕೆ ಮುಂದಾದರು. ಇದರಿಂದ ಗಣಿತ, ವಿಜ್ಞಾನ ಇತ್ಯಾದಿ ವಿಷಯಕ್ಕೆ ಸಂಬಂಧಿಸಿದ ವಿಭಿನ್ನ ಮಾದರಿಯ ಕೃತಿಗಳು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಗೊಳ್ಳುವಂತಾಯಿತು.

ಸಾಹಿತ್ಯಕ ಭಾಷಾಂತರಗಳಲ್ಲಿರುವಂತೆ ಇದರಲ್ಲಿ ಪರ್ಯಾಯಗಳ ಗೊಂದಲಗಳಿಲ್ಲ. ಈ ಕೃತಿಗಳನ್ನು ಭಾಷಾಂತರದ ಯಾವ ಮಾದರಿಯಲ್ಲಿ ಭಾಷಾಂತರಿಸಿದರೆ ಉದ್ದಿಷ್ಟ ಭಾಷೆಯ ಪರಿಸರಕ್ಕೆ ಹೊಂದಿಕೊಳ್ಳಬಹುದು ಎನ್ನುವಂತಹ ಆಲೋಚನೆಯ ಬಗ್ಗೆ ಹೆಚ್ಚು ಒತ್ತಿಲ್ಲ. ಮೂಲದಲ್ಲಿರುವ ಮಾಹಿತಿ ಅಥವಾ ಜ್ಞಾನವನ್ನು ಖಚಿತವಾಗಿ, ನಿರ್ದಿಷ್ಟವಾಗಿ ಭಾಷಾಂತರವಾಗುವ ಭಾಷೆಯಲ್ಲಿ ರೂಪಿಸಿರುವುದು ಮುಖ್ಯವಾಗಿರುತ್ತದೆ. ಹೀಗಾಗಿ ಇಂಗ್ಲಿಷಿನಲ್ಲಿರುವ ವಿಜ್ಞಾನದ ವಿಚಾರ, ವಿಶೇಷಗಳನ್ನು ಗಣಿತದ ಪ್ರಯೋಗಗಳನ್ನು ಮತ್ತು ವೈದ್ಯಕೀಯದ ವಿಭಿನ್ನ ಉಪಯೋಗಗಳನ್ನು ನೇರವಾಗಿ ಇಂಗ್ಲಿಷಿನಿಂದ ಕನ್ನಡಕ್ಕೆ ತಂದುಕೊಳ್ಳುವ, ಕನ್ನಡದಲ್ಲಿ ಸಿದ್ಧಗೊಳಿಸುವ ಕಾಯಕವು ಮುಂಚೂಣಿಗೆ ಬಂದಿತು.

ಈ ರೀತಿಯಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರ ಕನ್ನಡದ ಸಂದರ್ಭಕ್ಕೆ ಪೂರಕವಾಗಿ ನಡೆದಿರುವುದನ್ನು ಕಾಣಬಹುದು. ಇದು ಒಂದು ರೀತಿಯಿಂದ ವಸಾಹತು ಸಂದರ್ಭಕ್ಕೆ ಕನ್ನಡವನ್ನು ಸಿದ್ಧಗೊಳಿಸುವ ಕೆಲಸವೂ ಆಗಿತ್ತು ಎನ್ನಬಹುದು.

**೭.೨.೨. ಭಾರತೀಯ ಭಾಷೆಗಳಿಂದ ನಡೆದ ಸಾಹಿತ್ಯೇತರ ಕೃತಿಗಳ ಭಾಷಾಂತರ.**

ಈ ಕಾಲಘಟ್ಟದಲ್ಲಿ ಸಾಹಿತ್ಯೇತರ ಕೃತಿಗಳನ್ನು ಇಂಗ್ಲಿಷಿನಿಂದ ಭಾಷಾಂತರಿಸಿಕೊಂಡಿರುವಂತೆ ಭಾರತೀಯ ಭಾಷೆಗಳಿಂದಲೂ ಭಾಷಾಂತರಿಸಿಕೊಂಡಿರುವುದನ್ನು ಕಾಣಬಹುದು. ಇತರ ಜ್ಞಾನಶಿಸ್ತುಗಳು ಕೇವಲ ಇಂಗ್ಲಿಷ್ ಮತ್ತಿತರ ಪಶ್ಚಿಮದ ಭಾಷೆಗಳ ಸ್ವತ್ತಲ್ಲ, ಭಾರತೀಯ ಭಾಷೆಗಳಲ್ಲಿಯೂ ಈ ಮಾದರಿಯ ಜ್ಞಾನವಿದೆಯೆಂಬುದನ್ನು ೧೯ನೇ ಶತಮಾನದ ಭಾಷಾಂತರ ಪ್ರಕ್ರಿಯೆ ಬೆಳಕಿಗೆ ತಂದಿತು. ಹೀಗಾಗಿ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಭಾರತೀಯ ಭಾಷೆಗಳಾದ ಸಂಸ್ಕೃತ, ಮರಾಠಿ, ತೆಲುಗು ಮತ್ತು ತಮಿಳು ಭಾಷೆಗಳ ಹಲವು ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡವು.[೨] ಭಾರತೀಯ ಭಾಷೆಗಳಿಂದ ಕನ್ನಡಕ್ಕೆ ಬಂದಿರುವ ಕೃತಿಗಳೆಂದರೆ, ಸಂಸ್ಕೃತದಿಂದ-'ಚಿಕಿತ್ಸಾಸಾರ', 'ಆಯುರ್ವೇದಸಾರ', ತಮಿಳಿನಿಂದ-'ಔಷಧಿ ಶಾಸ್ತ್ರ', ತೆಲುಗಿನಿಂದ-'ಜಂತು ಶಾಸ್ತ್ರ' ಮತ್ತು ಮರಾಠಿಯಿಂದ-'ಪದಾರ್ಥ ವಿಜ್ಞಾನಶಾಸ್ತ್ರ ಸಚಿತ್ರ' ಇತ್ಯಾದಿಗಳು. (ಕೃತಿಗಳ ಮೂಲ ಭಾಷೆ ಮತ್ತು ಹೆಸರನ್ನು ಅನುಬಂಧ ೪ರಲ್ಲಿ ಕೊಡಲಾಗಿದೆ.)

ಸಂಸ್ಕೃತದಿಂದ ಬಂದ ಕೃತಿಗಳು ಕನ್ನಡಕ್ಕೆ ನೇರವಾಗಿ ಭಾಷಾಂತರಗೊಂಡವಾದರೆ, ಮರಾಠಿ, ತಮಿಳು ಮತ್ತು ತೆಲುಗಿನಿಂದ ಕನ್ನಡಕ್ಕೆ ಬಂದಿರುವ ಬಹುತೇಕ ಕೃತಿಗಳು ಇಂಗ್ಲಿಷ್ ಮೂಲದಿಂದ ಈ ಭಾಷೆಗಳ ಮೂಲಕ ಬಂದವುಗಳಾಗಿವೆ. ಬಹುಶಃ ಇಂಗ್ಲಿಷ್‌ನ್ನು ಅರ್ಥೈಸಿಕೊಳ್ಳಲಾರದ ಭಾಷಾಂತರಕಾರರು ತಮ್ಮ ನೆರೆಯ ಭಾಷೆಯಾದ ಅಥವಾ ಮಾತೃ ಭಾಷೆಯಾದ ತಮಿಳು, ತೆಲುಗು, ಮರಾಠಿ ಇತ್ಯಾದಿ ಭಾಷೆಗಳಲ್ಲಿ ಈಗಾಗಲೇ ಭಾಷಾಂತರಗೊಂಡಿರುವ ಕೃತಿಗಳನ್ನು ಕನ್ನಡಕ್ಕೆ ಮರು ಭಾಷಾಂತರಿಸುವ ಮೂಲಕ ಕನ್ನಡದ ಅಗತ್ಯವನ್ನು ಈಡೇರಿಸತೊಡಗಿದರು. ಅಭಿಜಾತ ಭಾಷೆಯಾದ ಸಂಸ್ಕೃತವು ವಸಾಹತುಶಾಹಿ ಸಂದರ್ಭದಲ್ಲಿ ಪರಂಪರೆಗೆ ಪರ್ಯಾಯವಾಗಿ ಬಳಕೆಯಾಗುವ ಗುಣವನ್ನು ಪಡೆದುಕೊಂಡಿತ್ತು. ಇದರಿಂದಾಗಿ ಭಾರತೀಯ ಪರಂಪರೆಯ ಹಿನ್ನೆಲೆಯಲ್ಲಿ ಪಶ್ಚಿಮದ ಪರಂಪರೆಯೊಂದಿಗೆ ಅನುಸಂಧಾನ ಮಾಡುವಾಗ ಇಂಗ್ಲಿಷ್ ಕೃತಿಗಳಿಗೆ ಹಾಗೂ ಜ್ಞಾನಕ್ಕೆ ಸಮನಾಂತರವಾಗಿ ಸಂಸ್ಕೃತದ ಕೃತಿಗಳನ್ನು ಬಳಸಿಕೊಂಡರು. ಇದರಿಂದ ಸಾಹಿತ್ಯೇತರ ಕೃತಿಗಳ ಭಾಷಾಂತರ ಸಂದರ್ಭದಲ್ಲಿ ಇಂಗ್ಲಿಷಿನಿಂದ ಖಗೋಳ, ವಿಜ್ಞಾನ, ಮತ್ತು ಆರೋಗ್ಯ ಇತ್ಯಾದಿಗಳಿಗೆ ಸಂಬಂಧಿಸಿದ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವುದಕ್ಕೆ ಸಮನಾಗಿ ಸಂಸ್ಕೃತದ ಕೃತಿಗಳನ್ನು ಕೂಡ ಕನ್ನಡಕ್ಕೆ ಭಾಷಾಂತರಿಸಿಕೊಂಡರು. ಈ ಪ್ರಕ್ರಿಯೆಯ ಸ್ವರೂಪ ವಸಾಹತುಶಾಹಿ ಸಂದರ್ಭದ ವ್ಯವಸ್ಥೆಯ ಸಾಂಸ್ಕೃತಿಕ ಸ್ವರೂಪವು ಆಗಬಹುದು.

ಈ ಮೊದಲೇ ಸಂಸ್ಕೃತದಲ್ಲಿರವ ಸಾಹಿತ್ಯೇತರ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನದಲ್ಲಿ ಜಗನ್ನಾಥ ಶ್ರೀಧರ, ಹರಿರಾಮ ಶಾಸ್ತ್ರಿ ಮತ್ತು ವೆಂಕಟೇಶಯ್ಯಂಗಾರರಂಥಹ ದೇಶೀಯ ಭಾಷಾಂತರಕಾರರು ತೊಡಗಿಕೊಂಡಿದ್ದರು.

ಭಾರತೀಯ ಭಾಷೆಗಳಲ್ಲಿರುವ ಸಾಹಿತ್ಯೇತರ ಮಾಹಿತಿಯನ್ನು ಜ್ಞಾನವನ್ನು ದೇಶೀಯ ಭಾಷೆಗಳಿಗಿಳಿಸುವುದು ಮತ್ತು ಇಂಗ್ಲಿಷಿನಂತೆ ಭಾರತೀಯ ಭಾಷೆಗಳಲ್ಲಿಯೂ ಸಾಹಿತ್ಯೇತರ ಜ್ಞಾನಶಿಸ್ತುಗಳ ವಿವರಗಳಿವೆ, ಜ್ಞಾನಗಳಿವೆ ಎಂಬುದನ್ನು ಸಾದರಪಡಿಸುವುದು ಮುಖ್ಯವೆನಿಸಿತ್ತು. ಹೀಗಾಗಿ ಚರಕ, ಶುಶ್ರುತರ ಜ್ಞಾನಸುಧೆಯನ್ನು ಹಾಗೂ ಲೀಲಾವತಿ ರಾಮಾನುಜರಂಥವರ ಗಣಿತದ ವಿವರಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಂಡರು. ಇಂತಹ ಸಂದರ್ಭದಲ್ಲಿ ಸಂಸ್ಕೃತಿದಲ್ಲಿರುವ ಶ್ಲೋಕ, ಸೂತ್ರಗಳಿಗೆ ಕನ್ನಡದಲ್ಲಿ ಅರ್ಥ ಬರೆಯುವ ಮತ್ತು ವ್ಯಾಖ್ಯಾನಿಸುವ ಕೆಲಸಗಳೂ ನಡೆದವು. ಅಲ್ಲದೆ 'ಆಯುರ್ವೇದಸಾರ' (೧೯೨೦) ಕೃತಿಯಲ್ಲಿನ ಸಂಸ್ಕೃತದ ಆಯುರ್ವೇದದ ವಿಚಾರಗಳಿಗೆ ಇಂಗ್ಲಿಷಿನ ಮಾಹಿತಿಯನ್ನು ಸಹ ಬಳಸಿಕೊಂಡಿರುವುದು ಕಂಡುಬರುತ್ತದೆ. ಈ ಪ್ರಯತ್ನ ಭಾಷಾಂತರವು ಸಫಲವಾಗಬೇಕು ಹಾಗೂ ಮೂಲ ಭಾಷೆಯಲ್ಲಿನ ಮಾಹಿತಿ ಉದ್ದಿಷ್ಟ ಭಾಷೆಯ ಓದುಗನಿಗೆ ಖಚಿತವಾಗಿ ದೊರೆಯಬೇಕು ಎಂಬ ಉದ್ದೇಶದಿಂದ ಕೂಡಿದ್ದಾಗಿದೆ.

ಸಂಸ್ಕೃತದಲ್ಲಿನ ಸಾಹಿತ್ಯೇತರ ಕೃತಿಗಳ ಜ್ಞಾನವನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಮೂಲಕ ಕನ್ನಡದ ಭಾಷಾಂತರಕಾರರು ಭಾರತೀಯ ಭಾಷೆಗಳ ಹಿನ್ನೆಲೆಯಿಂದ ಇಂಗ್ಲಿಷಿನೊಂದಿಗೂ ವಸಾಹತುಶಾಹಿಯೊಂದಿಗೂ ಅನುಸಂಧಾನಕ್ಕೆ ತೊಡಗಿಕೊಂಡಿದ್ದರು. ಈ ಕ್ರಮ ಇಂಗ್ಲಿಷ್ ಅನ್ನು ಹಾಗೂ ಇಂಗ್ಲಿಷಿನಲ್ಲಿನ ಜ್ಞಾನವನ್ನು ದೇಶೀಯ ಭಾಷೆಯಲ್ಲಿ ರೂಪಿಸಿಕೊಂಡು ವಸಾಹತುಶಾಹಿಯನ್ನು ಅರ್ಥೈಸಿಕೊಳ್ಳುವುದೇ ಆಗಿದೆ. ವಸಾಹತುಶಾಹಿಯ ಪ್ರತಿನಿಧೀಕರಣವೆ ಇಂಗ್ಲಿಷ್ ಭಾಷೆ. ಇದನ್ನರಿತ ಭಾರತೀಯರು ಇಂಗ್ಲಿಷಿನಲ್ಲಿರುವ ಸಾಹಿತ್ಯ ಹಾಗೂ ಸಾಹಿತ್ಯೇತರ ಜ್ಞಾನಶಿಸ್ತುಗಳನ್ನು ದೇಶೀಯ ಭಾಷೆಗಳಿಗೆ ತಂದುಕೊಳ್ಳುವ ಹಾಗೂ ಇದಕ್ಕೆ ಸಮನಾಗಿ ಭಾರತೀಯ ಭಾಷೆಗಳಲ್ಲಿರುವ ಈ ಮಾದರಿಯ ಜ್ಞಾನವನ್ನು ಇಂಗ್ಲಿಷಿಗೆ ಸಮನಾಗಿ ರೂಪಿಸಿಕೊಳ್ಳಲು ಮತ್ತು ಅದನ್ನು ದೇಶೀಯರಿಗೆ ತೋರ್ಪಡಿಸಲು ದೇಶೀಯ ಭಾಷೆಗಳಲ್ಲಿ ಮರು ರೂಪಿಸಿಕೊಳ್ಳುವ ಪ್ರಯತ್ನಗಳನ್ನು ನಡೆಸಿದರು. ಪರಿಣಾಮ ಸಾಹಿತ್ಯದಂತೆ ಸಾಹಿತ್ಯೇತರ ಜ್ಞಾನ ಕೂಡ ಇಂಗ್ಲಿಷಿನಂತೆ ಭಾರತೀಯ ಭಾಷೆಗಳ ಮೂಲಕ ಕನ್ನಡವು ಸೇರಿದಂತೆ ದೇಶದ ಇತರ ಭಾಷೆಗಳಿಗೆ ಹರಿದುಬಂದಿತು. ಇದರಿಂದ ವಸಾಹತುಶಾಹಿಯನ್ನು ಕನ್ನಡದ ಸಂದರ್ಭಕ್ಕೆ ಪೂರಕವಾಗಿ ಅರ್ಥೈಸುವ, ಜೀರ್ಣಿಸಿಕೊಳ್ಳುವ ಪ್ರಯತ್ನಗಳು ನಡೆದವು. ಆದರೆ ಈ ಬಗೆಯ ಪ್ರಯತ್ನ ಎಷ್ಟು ಸಫಲವಾಯಿತು ಎಂಬ ಪ್ರಶ್ನೆಗಿಂತ ಭಾರತೀಯ ಭಾಷೆಗಳ ಮೂಲಕ ನಡೆದ ಇಂತಹ ಪರಿಣಾಮಕಾರಿ ಜಾಗ್ರತೆಯ ಸ್ವರೂಪ ವಿಶ್ಲೇಷಣಾರ್ಹ ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಈ ಪ್ರಯತ್ನವು ಮರಾಠಿ 'ಬಾಯಿಲೆಕ್ಕದ' ಪತ್ಯವನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಹಾಗೂ 'ಔಷಧಿ ಶಾಸ್ತ್ರ'ವನ್ನು ತಮಿಳಿನಿಂದ ಕನ್ನಡದ್ದಾಗಿಸಿಕೊಳ್ಳುವರೆಗೆ ಮುಂದುವರಿದಿದೆ.

ಈ ಬಗೆಯಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರಕಾರರು ಇಂಗ್ಲಿಷ್‌ನ ಮಾದರಿಯಲ್ಲಿಯೇ ಭಾರತೀಯ ಇತರ ಭಾಷೆಗಳಿಂದ ಹಲವಾರು ಕೃತಿಗಳನ್ನು ಕನ್ನಡದ ಸಂದರ್ಭಕ್ಕೆ ಪೂರಕವಾಗಿ ರೂಪಿಸಿಕೊಂಡಿದ್ದು ವಿಶಿಷ್ಟವಾಗಿದೆ. ಈ ಚಟುವಟಿಕೆಯನ್ನು ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯ ಹಿನ್ನೆಲೆಯಲ್ಲಿ ವಿಸ್ತರಿಸುವುದಾದರೆ, ಆಧುನಿಕ ಸಾಹಿತ್ಯದ 'ಹರಿಕಾರ'ರೆನಿಸಿದ ಬಿ.ಎಂ.ಶ್ರೀಯವರ ಹಿಂದೆ ಕನ್ನಡ ಸಾಹಿತ್ಯದ ಗಮನಾರ್ಹ ಪರಂಪರೆಯಿದ್ದಂತೆ ಗ್ರೀಕ್ ನಾಟಕಗಳ ರೂಪ ಸ್ವರೂಪದ ಪರಿಚಯವೂ ಅವರಿಗೆ ಇತ್ತು. ಇದರಿಂದಾಗಿ ಗ್ರೀಕ್‌ನ ನಾಟಕ ಮಾದರಿಯ

ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದ ವಸ್ತುವನ್ನು ಪುನರ್‌ರೂಪಿಸುವ ಪ್ರಯತ್ನದಲ್ಲಿ 'ಅಶ್ವತ್ಥಾಮ', 'ಗದಾಯುದ್ಧಂ'ದಂತಹ ನಾಟಕಗಳ ಮೂಲಕ ಆಧುನಿಕ ಕನ್ನಡ ನಾಟಕಕ್ಕೆ ಹೊಸ ಆಯಾಮ ನೀಡಿದರು. ಆದರೆ ಇದಕ್ಕೂ ಪೂರ್ವದಲ್ಲಿನ ಸಾಹಿತ್ಯೇತರ ಕೃತಿಗಳ ಭಾಷಾಂತರಕಾರರು ಇಂಗ್ಲಿಷಿನಲ್ಲಿರುವ ಸಾಹಿತ್ಯೇತರ ಮಾಹಿತಿ, ಜ್ಞಾನಗಳು ಅನುಭವಕ್ಕೆ ಬಂದಾಗ ಅವುಗಳನ್ನು ನೇರವಾಗಿ ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಹಾಗೂ ಭಾರತೀಯ ಭಾಷೆಗಳಲ್ಲಿನ ಸಾಹಿತ್ಯೇತರ ಜ್ಞಾನವನ್ನು ಇಂಗ್ಲಿಷಿನ ಸಾಹಿತ್ಯೇತರ ಮಾದರಿಯಂತೆ ಕನ್ನಡದಲ್ಲಿ ರೂಪಿಸಿಕೊಳ್ಳುವ, ಕಟ್ಟುವ ಕೆಲಸಗಳನ್ನು ಮಾಡಿದ್ದಾರೆ. ಈ ಪ್ರಯತ್ನ ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯಷ್ಟೆ ಗಮನಾರ್ಹವಾದುದು. ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ ಬಿ.ಎಂ.ಶ್ರೀಯವರಿಗೆ ಪ್ರೇರಣೆಯಾಗಿರುವ ಸಾಧ್ಯತೆಯೂ ಇದೆ. ಯಾಕೆಂದರೆ, ಈ ಭಾಷಾಂತರಕಾರರು ಇಂಗ್ಲಿಷ್ ಜ್ಞಾನದ ಮಾದರಿಯಂತೆ ಭಾರತೀಯ ಭಾಷೆಗಳಿಂದ ಸಾಹಿತ್ಯೇತರ ಜ್ಞಾನವನ್ನು ಕನ್ನಡದಲ್ಲಿ ರೂಪಿಸಿಕೊಳ್ಳಲು ಪ್ರಯತ್ನಿಸಿದರು. ಆ ನಂತರ ಬಂದ ಬಿ.ಎಂ.ಶ್ರೀಯವರು ಪಶ್ಚಿಮದ ಸಾಹಿತ್ಯದಲ್ಲಿನ ಪಾಂಡಿತ್ಯ ಹಾಗೂ ಅನುಭವಗಳ ಹಿನ್ನೆಲೆಯಲ್ಲಿ ಕನ್ನಡದ ವಿಷಯ ವಸ್ತುಗಳಿಗೆ ಹೊಸ ರೂಪಕೊಡುವ 'ರೂಪಾಂತರಿ'ಸುವ ಪ್ರಯತ್ನ ಮಾಡಿರುವುದು ತಿಳಿದಿರುವ ಸಂಗತಿ. ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಬೇಕೆನ್ನುವ ದಿಕ್ಕಿನಲ್ಲಿ ಬಿ.ಎಂ.ಶ್ರೀ ಅವರು ಆಡುವ ಮಾತುಗಳು, ಶೈಕ್ಷಣಿಕವಾಗಿ ಕನ್ನಡವನ್ನು ಬಳಸಬೇಕೆನ್ನು ಮಾತುಗಳು ಇವನ್ನೇ ಸೂಚಿಸುವುದಾಗಿದೆ. ಆದರೂ ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಪ್ರಕ್ರಿಯೆಯ ಅಧ್ಯಯನದ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀಯವರ ಭಾಷಾಂತರ ಚಟುವಟಿಕೆಯನ್ನು ಮರುಪರಿಶೀಲಿಸುವ ಪುನರ್‌ವ್ಯಾಖ್ಯಾನಿಸುವ ಅಧ್ಯಯನಗಳು ಮುಂದಿನ ದಿನಗಳಲ್ಲಿ ನಡೆಯಬೇಕಾಗಿದೆ.

ಭಾರತೀಯ ಭಾಷೆಗಳಿಂದ ಸಾಹಿತ್ಯೇತರ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಮೂಲಕ ಭಾಷಿಕ ನೆಲೆಯಲ್ಲಿ ಭಾರತೀಯ ಭಾಷೆಗಳನ್ನು ಇಂಗ್ಲಿಷ್‌ಗೆ ಸಮನಾಗಿ ರೂಪಿಸುವ, ನೋಡುವ ಪ್ರಯತ್ನ ನಡೆದಿರುವುದು ಉಲ್ಲೇಖಾರ್ಹ. ಅಲ್ಲದೆ ಸಾಹಿತ್ಯೇತರ ಜ್ಞಾನಶಿಸ್ತುಗಳು ಕೇವಲ ಪಶ್ಚಿಮದ ಅಥವಾ ಕೆಲವೇ ಭಾಷೆಗಳ ಸ್ವತ್ತಲ್ಲ. ನಮ್ಮ ಪರಂಪರೆಯಲ್ಲಿ ಈ ಮೊದಲೆ ಇತ್ತು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವ ಯತ್ನವಾಗಿ ಅವುಗಳನ್ನು ದೇಶೀಯ ಭಾಷೆಯಲ್ಲಿ ರೂಪಿಸುವ ಹಾಗೂ ಭಾರತೀಯ ಭಾಷೆಗಳಲ್ಲಿರುವ ಜ್ಞಾನವನ್ನು ಕ್ರೂಢೀಕರಿಸುವ ಪ್ರಯತ್ನಗಳು ನಡೆದಿವೆ. ಈ ಪ್ರಯತ್ನ ಅಥವಾ ಪ್ರಕ್ರಿಯೆ ಆಧುನಿಕತೆಯನ್ನು ದೇಶಿ ಜ್ಞಾನದ ಹಿನ್ನೆಲೆಯಲ್ಲಿ ದೇಶೀಯ ಭಾಷೆಗಳು ಕಟ್ಟಿಕೊಳ್ಳುವ ಮತ್ತು ಅರ್ಥೈಸಿಕೊಳ್ಳುವ ಭಾಗವೂ ಆಗಿದೆ; ಆಗಿತ್ತು.

ಹೀಗೆ ಪಶ್ಚಿಮದ ಭಾಷೆಗಳ ಮೂಲಕ ಮತ್ತು ಭಾರತೀಯ ಭಾಷೆಗಳಿಂದ ವಿಭಿನ್ನ ಆಯಾಮಗಳಲ್ಲಿ ಸಾಹಿತ್ಯೇತರ ಕೃತಿಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಈ ಪ್ರಯತ್ನದ ಉದ್ದೇಶ ಕನ್ನಡದ ಓದಿಗಾಗಿ ಸಾಹಿತ್ಯೇತರ ಕೃತಿಗಳನ್ನು ಸಿದ್ಧಗೊಳಿಸುವುದೇ ಆಗಿದೆ. ಇದರಿಂದಾಗಿ ಪಶ್ಚಿಮದ ಕೃತಿಗಳನ್ನು ನೇರವಾಗಿ ಕನ್ನಡಕ್ಕೆ ತಂದುಕೊಂಡಿರುವಂತೆ ಭಾರತೀಯ ಭಾಷೆಗಳಲ್ಲಿರುವ ಕೃತಿಗಳನ್ನು ಸಹ ಕನ್ನಡಕ್ಕೆ ಭಾಷಾಂತರಿಸಿಕೊಂಡಿದ್ದಾರೆ. ಈ ಎರಡೂ ಆಯಾಮಗಳ ಮೂಲಕ ವಸಾಹತುಶಾಹಿಯನ್ನು ಕನ್ನಡದ ಸಂದರ್ಭದಲ್ಲಿ ಅರ್ಥೈಸುವ ಹಾಗೂ ಅದರೊಂದಿಗೆ ಅನುಸಂಧಾನ ಕೈಗೊಳ್ಳುವ ಪ್ರಯತ್ನಗಳು ನಡೆದವು.

## ೭.೩. ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ.

ಕನ್ನಡ ಭಾಷಾಂತರ ಚರಿತ್ರೆಯಲ್ಲಿ ಸಾಹಿತ್ಯೇತರ ಕೃತಿಗಳ ಭಾಷಾಂತರ ಇಂದು ನಿನ್ನೆಯದಲ್ಲ. ಆದುನಿಕಪೂರ್ವ ಕಾಲದಿಂದಲೂ ಭಾರತೀಯ ಭಾಷೆಗಳಿಂದ ಸಾಹಿತ್ಯೇತರ ಕೃತಿಗಳನ್ನು ಕನ್ನಡದ್ದಾಗಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಉದಾಹರಣೆಗೆ ಬೇರೆ ಬೇರೆ ಭಾಷೆಗಳಿಂದ ಕನ್ನಡ ಬಂದ ಕೃತಿಗಳಾದ 'ಗಜಶಾಸ್ತ್ರ', 'ಸೂಪಶಾಸ್ತ್ರ', 'ಹಸ್ತಮುದ್ರಿಕ', 'ತಾರಾಲೋಕ', 'ಖಗೋಳ' ಇತ್ಯಾದಿಗಳು. ಆದರೆ ಪ್ರಸ್ತುತ ಪ್ರಬಂಧದ ವ್ಯಾಪ್ತಿಯು ೧೮೫೦ರಿಂದ ೧೯೨೦ರ ವರೆಗೆ ಇರುವುದರಿಂದ ಈ ಅವಧಿಯಲ್ಲಿ ಬಂದಿರುವ ಸಾಹಿತ್ಯೇತರ ಕೃತಿಗಳನ್ನು ಹೆಚ್ಚಾಗಿ ಗಮನಿಸಲಾಗಿದೆ. ಈ ಅವಧಿಯಲ್ಲಿನ ಭಾಷಾಂತರ ಕೃತಿಗಳನ್ನು ಗಮನಿಸಿ ಈ ಭಾಷಾಂತರ ಪ್ರಕ್ರಿಯೆಯನ್ನು ಎರಡು ಮಾದರಿಯಲ್ಲಿ ಗುರುತಿಸಿಕೊಳ್ಳಲಾಗಿದೆ. ಅವುಗಳಲ್ಲಿ ಒಂದು, ಪಠ್ಯಗಳ ಏಕಮೂಲ ಭಾಷಾಂತರ ಪ್ರಕ್ರಿಯೆಯಾದರೆ ಎರಡು, ಬಹುಮೂಲಗಳನ್ನಾಧರಿಸಿದ ಭಾಷಾಂತರ.

### ೭.೩.೧. ಪಠ್ಯಗಳ ಏಕಮೂಲ ಭಾಷಾಂತರ ಪ್ರಕ್ರಿಯೆ

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ ಭಾಷಾಂತರಗೊಂಡಿರುವ ವಿವಿಧ ಕೃತಿಗಳಲ್ಲಿ ಸುಮಾರು ೩೪% ರಷ್ಟು ಏಕಮೂಲದ ಪಠ್ಯಗಳ ಭಾಷಾಂತರವಾಗಿವೆ. ಈ ಪಠ್ಯಗಳಲ್ಲಿ ಹೆಚ್ಚಿನವು ಇಂಗ್ಲಿಷಿನಿಂದಲೂ ಕೆಲವು ಸಂಸ್ಕೃತ, ಮರಾಠಿ ಇತ್ಯಾದಿ ಭಾರತೀಯ ಭಾಷೆಗಳಿಂದ ನೇರ ಭಾಷಾಂತರಗೊಂಡಿವೆ. ಪಠ್ಯಗಳ ಏಕಮೂಲ ಭಾಷಾಂತರದ ಮೂಲಕ ರೂಪುಗೊಂಡ ಕೃತಿಗಳೆಂದರೆ

**೧. ಇಂಗ್ಲಿಷ್‌ನ ಪಠ್ಯಗಳ ಏಕಮೂಲ ಭಾಷಾಂತರ ಕೃತಿಗಳು**

i. ವ್ಯವಸಾಯ ಕ್ರಮಬೋಧಿನಿ (೧೮೭೯)

ii. ಕೃತ್ಯ ಭೂಮಿತಿ (೧೮೯೧)

iii. ಗೋಖಲೆ ಕೃತ ಅಂಕಗಣಿತ (೧೯೦೬)

iv. ಯುಕ್ಲೀಡ್‌ನ ಸಿದ್ಧಾಂತಗಳು (೧೮೮೭)

v. ನೀನು ವಿಜ್ಞಾನಿಯಾಗು (೧೮೫೫) ಇತ್ಯಾದಿಗಳು

**೨. ಸಂಸ್ಕೃತದ ಪಠ್ಯಗಳ ಏಕಮೂಲಭಾಷಾಂತರ ಕೃತಿಗಳು**

i. ಚಿಕಿತ್ಸಾಸಾರ (೧೮೯೨)

ii. ಆಯುರ್ವೇದಸಾರ (೧೯೨೦)

iii. ಲೀಲಾವತಿ ಮತ್ತು ಶ್ರೀನಿವಾಸ ರಾಮಾನುಜನ್ ಗಣಿತ (೧೯೦೬) ಮುಂತಾದವುಗಳು

**೩. ಮರಾಠಿಯ ಪಠ್ಯಗಳ ಏಕಮೂಲ ಭಾಷಾಂತರ ಪಠ್ಯಗಳು**

i. ಬಾಯಿಲೆಕ್ಕದ ಮೊದಲ ಪುಸ್ತಕ (೧೮೬೯)

ii. ಬೀಜಗಣಿತದ ಮೂಲ ತತ್ವಗಳು (೧೮೯೭)

೪. ತಮಿಳಿನ ಪಠ್ಯಗಳು ಏಕಮೂಲ ಭಾಷಾಂತರ ಪಠ್ಯಗಳು

i. ಮಕ್ಕಳ ಪೋಷಣೆ (೧೮೬೯)

ii. ಔಷಧಿ ಶಾಸ್ತ್ರ (೧೯೧೪) ಇತ್ಯಾದಿಗಳು

(ಪಠ್ಯಗಳ ಸಮಗ್ರ ಯಾದಿ ಅನುಬಂಧ ೧ರಲ್ಲಿದೆ.)

ಈ ಮೇಲಿನ ಕೃತಿಗಳು ೧೮೫೦ ರಿಂದ ೧೯೨೦ ರ ಅವಧಿಯಲ್ಲಿ ಕನ್ನಡಕ್ಕೆ ನೇರ ಭಾಷಾಂತರವಾದವುಗಳಾಗಿವೆ. ಸಾಹಿತ್ಯೇತರ ಕೃತಿಗಳನ್ನು ಪ್ರಮುಖವಾಗಿ ಇಂಗ್ಲಿಷ್‌ನಿಂದಲೂ ಹಾಗೂ ಕೆಲವನ್ನು ಭಾರತೀಯ ಭಾಷೆಗಳಿಂದಲೂ ಕನ್ನಡದ ಸಂದರ್ಭಕ್ಕೆ ಪೂರಕವಾಗಿ ರೂಪಿಸಿಕೊಳ್ಳಲಾಗಿದೆ. ಸಾಹಿತ್ಯೇತರ ಜ್ಞಾನ ಅಥವಾ ಮಾಹಿತಿ, ವಿಚಾರಗಳ ಭಾಷಾಂತರದ ಸಂದರ್ಭದಲ್ಲಿ ಸಾಹಿತ್ಯದಲ್ಲಿ ಬಳಸುವ ಇಲ್ಲವೆ ಚಾಲ್ತಿಯಲ್ಲಿದ್ದ ಭಾಷಾಂತರ ಮಾದರಿಗಳಾದ 'ರೂಪಾಂತರ', 'ಭಾವಾನುವಾದ'ಗಳಿಗೆ ಅವಕಾಶವಿಲ್ಲ; ಈ ಪ್ರಯೋಗವು ಸಮಂಜಸವು ಆಗಲಾರದು. ಯಾಕೆಂದರೆ, ಸಾಹಿತ್ಯದಂತೆ ಇತರ ಜ್ಞಾನಶಿಸ್ತುಗಳಲ್ಲಿ ಕಲಾತ್ಮಕತೆಯ ಪ್ರಶ್ನೆ ಮುಖ್ಯವಾದುದಲ್ಲ. ಬದಲಿಗೆ ಮೂಲ ಪಠ್ಯದಲ್ಲಿನ ಜ್ಞಾನ, ಮಾಹಿತಿಗಳು ಎಷ್ಟು ನಿಖರವಾಗಿ ಅಥವಾ ಖಚಿತವಾಗಿ ಉದ್ದಿಷ್ಟ ಭಾಷೆಗೆ ಭಾಷಾಂತರಿಸಲಾಗುತ್ತದೆ ಎಂಬುದು ಮುಖ್ಯವಾಗಿರುತ್ತದೆ. ಈ ಅವಕಾಶವು 'ನೇರ ಭಾಷಾಂತರ' ಮಾದರಿಯಲ್ಲಿರುವುದರಿಂದ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸಾಹಿತ್ಯೇತರ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವಾಗ ಪಠ್ಯಗಳನ್ನು ಏಕಮೂಲದಿಂದ ಭಾಷಾಂತರಿಸಿಕೊಳ್ಳುವ ಕ್ರಮವನ್ನು ಅನುಸರಿಸಿದರು.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಪಠ್ಯಗಳ ಏಕಮೂಲ ಭಾಷಾಂತರ ಪ್ರಕ್ರಿಯೆ ಇಂಗ್ಲಿಷ್ ಮತ್ತು ಭಾರತೀಯ ಭಾಷೆಗಳಿಂದ ನಡೆದರೂ ಈ ಎರಡೂ ಭಿನ್ನ ಸ್ವರೂಪದ ಪ್ರಕ್ರಿಯೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. ಯಾಕೆಂದರೆ, ಇಂಗ್ಲಿಷ್ ವಸಾಹತುಶಾಹಿ ಮತ್ತು ಆಧುನಿಕತೆಗೆ ಪರ್ಯಾಯವಾದ ಸ್ಥಾನದಲ್ಲಿದ್ದರೆ ಭಾರತೀಯ ಭಾಷೆಗಳು ಅವುಗಳನ್ನು ತಮ್ಮ ಪರಂಪರೆಯ ಸಂದರ್ಭದಲ್ಲಿ ಅರ್ಥೈಸಿಕೊಳ್ಳುವ ರೂಪಿಸಿಕೊಳ್ಳುವ ಒತ್ತಡದಲ್ಲಿತ್ತು. ಶಿಕ್ಷಣದ ಭಾಗವಾಗಿ ಬಂದ ಪಠ್ಯಪುಸ್ತಕಗಳು ಇಂಗ್ಲಿಷಿನಿಂದ ಭಾಷಾಂತರಗೊಳ್ಳುವಾಗ ಅದರೊಂದಿಗೆ ಹಲವಾರು ಸಾಹಿತ್ಯೇತರ ಜ್ಞಾನಶಿಸ್ತುಗಳ ಪಠ್ಯಗಳು ಕನ್ನಡಕ್ಕೆ ಬಂದಿವೆ. ಪಶ್ಚಿಮದ ಪಾದ್ರಿಗಳು ಹಾಗೂ ಅಧಿಕಾರಿಗಳು ಇಲ್ಲಿನ ಸಾಂಪ್ರದಾಯಿಕ ಜೀವನ ಪದ್ಧತಿಯನ್ನು, ಆಲೋಚನೆಯನ್ನು ಕಂಡು, ಹೊಸ ಬಗೆಯ ಆಲೋಚನೆಗೆ ಪೂರಕವಾದ ಭೂಮಿಕೆಯನ್ನು ಸಿದ್ಧಗೊಳಿಸಲು ಸಜ್ಜಾಗಿದ್ದರು. (ಈ ಪ್ರಯತ್ನ ಕೂಡ ಆಧುನಿಕ ಶಿಕ್ಷಣದ ಜಾರಿಗೆ ಕಾರಣವಾಗಿತ್ತು.) ಇದರ ಮುಂದುವರಿದ ಭಾಗವಾಗಿ ಪಶ್ಚಿಮದ ಜ್ಞಾನವನ್ನು ಪ್ರಾಂತೀಯ ಭಾಷೆಗಳಲ್ಲಿ ರೂಪಿಸುವ ಪ್ರಯತ್ನಗಳು ನಡೆದವು. ಹೀಗಾಗಿ ಆಧುನಿಕತೆಯ ಜೊತೆ ಜೊತೆಗೆ ಇತರ ಜ್ಞಾನಶಿಸ್ತುಗಳ ಪರಿಚಯ ಇಂಗ್ಲಿಷಿನಿಂದ ಉಂಟಾಯಿತು. ಪ್ರತಿಯೊಂದು ಸಾಹಿತ್ಯೇತರ ಜ್ಞಾನಧಾರೆಯು ಮಾಹಿತಿ ಸಿದ್ಧಾಂತ ಇತ್ಯಾದಿಗಳನ್ನು ವಸಾಹತು ಸಂದರ್ಭದಲ್ಲಿ ಇಂಗ್ಲಿಷಿನಿಂದ ನೇರವಾಗಿ ಭಾಷಾಂತರಿಸುವ ಮೂಲಕ ಈ ಭಾಷೆಯಲ್ಲಿ ಎಲ್ಲವೂ (ಸಾಹಿತ್ಯ ಹಾಗೂ ಸಾಹಿತ್ಯೇತರ

ಮಾಹಿತಿ) ಇವೆ, ಇದರಿಂದಲೇ ಬೇರೆ ಬೇರೆ ಭಾಷೆಗಳು ಪಡೆದುಕೊಳ್ಳುತ್ತವೆ, ಕೊಡುವ ಸಾಮರ್ಥ್ಯ ಈ ಭಾಷೆಗೆ ಇದೆ ಎನ್ನುವ ಅಘೋಷಿತ ನಿಲುವು ಚಾಲ್ತಿಗೆ ಬಂತು. ಇದರಿಂದಾಗಿ ಹಲವಾರು ಕೃತಿಗಳು ವಿಭಿನ್ನ ಉದ್ದೇಶಗಳಿಂದ ಕನ್ನಡದ ಸಾಹಿತ್ಯೇತರ ಜ್ಞಾನಶಿಸ್ತುಗಳ ಗುಂಪಿಗೆ ಸೇರ್ಪಡೆಯಾದವು; ಸ್ವೀಕರಣಗೊಂಡವು. ಆದರೆ ಭಾರತೀಯ ಭಾಷೆಗಳಲ್ಲಿನ ಸಾಹಿತ್ಯೇತರ ಕೃತಿಗಳ ಭಾಷಾಂತರ ಇದಕ್ಕಿಂತ ಭಿನ್ನವಾದ ಮಾದರಿಯಲ್ಲಿ, ನಿಲುವಿನಲ್ಲಿ ನಡೆದಿದೆ.

ಸಾಹಿತ್ಯೇತರ ಜ್ಞಾನಕ್ಕೆ ಇಂಗ್ಲಿಷ್ ಭಾಷೆಯೇ ಮೂಲ, ಅಂತಿಮವೆಂಬ ಅನೌಪಚಾರಿಕ ನಿಲುವುಗಳ ನಡುವೆ ಭಾರತೀಯ ಮೂಲದ ಸಾಹಿತ್ಯೇತರ ಜ್ಞಾನಶಿಸ್ತುಗಳ ಕುರಿತು ಕುತೂಹಲ ಆರಂಭವಾಯಿತು. ವಸಾಹತುಶಾಹಿಯ ಪ್ರತಿನಿಧಿಯಂತಿದ್ದ ಇಂಗ್ಲಿಷ್ ಭಾಷೆ ಮತ್ತು ಅದರ ಮೂಲಕವೇ ಪರಿಚಯಗೊಳ್ಳುತ್ತಿದ್ದ ಸಾಹಿತ್ಯೇತರ ಜ್ಞಾನ ಧಾರೆಗೆ ಸಮನಾಗಿ ಭಾರತೀಯ ಮೂಲದಿಂದ ಈ ಜ್ಞಾನವನ್ನು ರೂಪಿಸಿಕೊಳ್ಳಬೇಕೆಂಬ ಹಂಬಲ ಮುಂಚೂಣಿಗೆ ಬಂತು. ಇದರಿಂದಾಗಿ ಕೆಲವು ಭಾಷಾಂತರಕಾರರು ಅಂದು ಭಾರತದ ಪ್ರಧಾನ ಭಾಷೆಯೆನಿಸಿಕೊಂಡ ಸಂಸ್ಕೃತದಲ್ಲಿನ ಸಾಹಿತ್ಯೇತರ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಮೂಲಕ ಈ ದೇಶದಲ್ಲಿಯೂ ಸಾಹಿತ್ಯೇತರ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ಜ್ಞಾನವಿದೆ ಎಂಬುದನ್ನು ಅಧಿಕೃತಗೊಳಿಸಿದರು. ಹೀಗಾಗಿಯೇ ಭಾರತೀಯ ಭಾಷೆಗಳಿಂದ ಸಾಹಿತ್ಯೇತರ ವಿಚಾರಕ್ಕೆ ಸಂಬಂಧಿಸಿದ ಕೃತಿಗಳ ಭಾಷಾಂತರ ಪ್ರಕ್ರಿಯೆ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಚುರುಕುಗೊಳ್ಳುವಂತಾಯಿತು.

ಈ ರೀತಿಯಲ್ಲಿ ಇಂಗ್ಲಿಷಿನ ಕೃತಿಗಳು ಕನ್ನಡಕ್ಕೆ ಬರುವಾಗ ಜ್ಞಾನ ಮತ್ತು ಮಾಹಿತಿಯನ್ನು ಉದ್ದೇಶವಾಗಿರಿಸಿಕೊಂಡರೆ, ಭಾರತೀಯ ಭಾಷೆಗಳಲ್ಲಿನ ಸಾಹಿತ್ಯೇತರ ಜ್ಞಾನಧಾರೆಯು ಇಂಗ್ಲಿಷ್‌ಗೆ ಸಮವಾಗಿ ಈ ದೇಶದಲ್ಲಿಯೂ ಭಾಷೆಯಲ್ಲಿಯೂ ಇದೆ ಎಂಬುದನ್ನು ಸಾಬೀತುಪಡಿಸುವುದರ ಭಾಗವಾಗಿ ಭಾಷಾಂತರಗಳು ನಡೆದವು. ಈ ಎರಡು ಸಂದರ್ಭಗಳಲ್ಲಿಯೂ ಪಠ್ಯಗಳು ಏಕಮೂಲ ಭಾಷಾಂತರದ ಮಾದರಿಯಲ್ಲಿಯೇ ಕನ್ನಡಕ್ಕೆ ಬಂದಿವೆ.

**೭.೩.೨. ಬಹುಮೂಲಗಳನ್ನಾಧರಿಸಿ ಪಠ್ಯಗಳನ್ನು ರೂಪಿಸುವಿಕೆ.**

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆಯಲ್ಲಿ ಏಕಮೂಲದಿಂದ ಪಠ್ಯವೊಂದನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವುದರೊಂದಿಗೆ ಬಹುಮೂಲಗಳನ್ನು ಆಧರಿಸಿ ಏಕ ಪಠ್ಯವನ್ನು ರೂಪಿಸಿಕೊಳ್ಳುವ ಕ್ರಮವನ್ನು ಕಾಣಬಹುದಾಗಿದೆ. ಬಹುಮೂಲಗಳನ್ನು ಆಧರಿಸಿ ಎಂದರೆ, ಸಾಹಿತ್ಯೇತರ ಜ್ಞಾನಶಿಸ್ತುಗಳಾದ ವಿಜ್ಞಾನ, ಕೃಷಿ ಮತ್ತು ವೈದ್ಯಕೀಯ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಕೃತಿಯೊಂದನ್ನು ರೂಪಿಸಿಕೊಳ್ಳುವಾಗ ಅಗತ್ಯ ವಿಚಾರಗಳನ್ನು ಬೇರೆ ಬೇರೆ ಭಾಷೆಗಳ ವಿಭಿನ್ನ ಕೃತಿಗಳ ಮೂಲಕ ಪಡೆದು ಅವುಗಳ ಹಿನ್ನೆಲೆಯಲ್ಲಿ ಒಂದು ಪಠ್ಯವನ್ನು ರೂಪಿಸಿಕೊಳ್ಳುವುದಾಗಿದೆ. ಸಾಹಿತ್ಯೇತರ ಭಾಷಾಂತರ ಪ್ರಕ್ರಿಯೆಯಲ್ಲಿ ಈ ಮಾದರಿ ಹೆಚ್ಚು ಬಳಕೆಗೊಂಡಿದೆ. ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡಕ್ಕೆ ಬಂದಿರುವ ಸಾಹಿತ್ಯೇತರ ವಿಷಯಗಳ ಒಟ್ಟು ಕೃತಿಗಳಲ್ಲಿ ೬೬% ಕೃತಿಗಳು ಬಹುಮೂಲಗಳನ್ನು ಆಧರಿಸಿ ರೂಪುಗೊಂಡಿರುವುದು ಗಮನಾರ್ಹ ಸಂಗತಿ. ಸಾಹಿತ್ಯಕ ಭಾಷಾಂತರ ಪರಂಪರೆಯಲ್ಲಿ ಈ ಮಾದರಿಯ ಬಳಕೆ ಕಡಿಮೆಯೆಂದೇ ಹೇಳಬೇಕು.

ಹೀಗೆ ಬಹುಮೂಲಗಳನ್ನಾಧರಿಸಿ ಕನ್ನಡದಲ್ಲಿ ರೂಪುಗೊಂಡ ಕೃತಿಗಳೆಂದರೆ 'ವ್ಯವಸಾಯ ಬೋಧಿನಿ' (೧೯೧೭), 'ಕೋಷ್ಟಕಗಳು' (೧೮೮೮), 'ಗಣಿತಾಮೃತ' (೧೯೦೪), 'ಭೌತಿಕ ವಿಜ್ಞಾನ' (೧೯೧೮), 'ಆರೋಗ್ಯ ಸೂತ್ರ' (೧೮೮೩), ಇತ್ಯಾದಿಗಳು. ಈ ಎಲ್ಲಾ ಕೃತಿಗಳು ವಸಾಹತು ಸಂದರ್ಭದ ಅಗತ್ಯ ಅನಿವಾರ್ಯತೆಯ ನಡುವೆ ರೂಪುಗೊಂಡವುಗಳಾಗಿವೆ.

ಕನ್ನಡದ ಅಗತ್ಯಕ್ಕಾಗಿ ಅಥವಾ ಇತರ ಭಾಷೆಗೆ ಸಮನಾಗಿ ಸಾಹಿತ್ಯೇತರ ಕೃತಿಗಳನ್ನು ರೂಪಿಸಿಕೊಂಡಿರುವ ಕುರಿತು ಭಾಷಾಂತರಕಾರರ ನಿಲುವೇನೆಂದರೆ, ''ಈ ಪುಸ್ತಕದ ಮುಖ್ಯೋದ್ದೇಶವು ದೇಶೀಯರಲ್ಲಿ ಕೈಗಾರಿಕೆಗಳನ್ನು ವೃದ್ಧಿಗೆ ತರಬೇಕೆಂಬುದೇ, ಇದರಲ್ಲಿನ ವಿಧವಿಧವಾದ ಅನೇಕ ವಿಷಯಗಳನ್ನು ಇಂಗ್ಲಿಷ್ ಮೊದಲಾದ ಅನ್ಯ ಭಾಷಾಗ್ರಂಥಗಳಿಂದ ಸಂಗ್ರಹಿಸಿ, ವ್ಯಾಪಾರ ಮರ್ಮಗಳೂ ವಿಶೇಷವಾಗಿ ಹೆಂಗಸರು ಮಕ್ಕಳು ಸಹ ಅತ್ಯಲ್ಪವಾದ ಮೂಲಧನದಿಂದಲೇ ಹೇಗೆ ವೃದ್ಧಿ ಹೊಂದಬಹುದೆಂಬ ಸುಲಭೋಪಾಯಗಳೇ ಮೊದಲಾದ ಅನೇಕ ಇತರ ವಿಷಯಗಳನ್ನು ಸಂಗ್ರಹಿಸಿರುವೆ'' (ಗೋವಿಂದರಾಜಲು, ೧೯೦೯, ಪೀಠಿಕೆ) ಎಂಬುದಾಗಿದೆ. ಗೋವಿಂದರಾಜಲು ಅವರು ಕನ್ನಡದ ಅಗತ್ಯಕ್ಕಾಗಿ ಜನರ ಆರ್ಥಿಕ ಅಭಿವೃದ್ಧಿಯ ಹಿನ್ನೆಲೆಯನ್ನು ಗಮನದಲ್ಲಿರಿಸಿಕೊಂಡು 'ಕಲಾತರಂಗ'ವನ್ನು ರೂಪಿಸುವಾಗ ಅಗತ್ಯ ಮಾಹಿತಿಯನ್ನು ಇಂಗ್ಲಿಷ್ ಹಾಗೂ ಇತರ ಭಾಷೆಗಳಿಂದ ಸಂಗ್ರಹಿಸಿ ಅದನ್ನು ಕನ್ನಡದ ಸಂದರ್ಭದಲ್ಲಿ ಸಿದ್ಧಗೊಳಿಸಿದ್ದಾರೆ. ಈ ಕ್ರಮ ಬಹುಮೂಲಗಳನ್ನು ಆಧರಿಸಿ ಒಂದು ಪಠ್ಯವನ್ನು ರೂಪಿಸಿಕೊಳ್ಳುವುದೇ ಆಗಿದೆ. ಪಠ್ಯಗಳ ನೇರ ಭಾಷಾಂತರವೇನೊ ಸರಿ. ಆದರೆ ಬಹುಮೂಲಗಳನ್ನು ಆಧರಿಸಿ ಯಾಕಾಗಿ ಸಾಹಿತ್ಯೇತರ ಕೃತಿಗಳನ್ನು ಕನ್ನಡದಲ್ಲಿ ಭಾಷಾಂತರಿಸಿಕೊಳ್ಳಲಾಯಿತು ಎಂಬ ಪ್ರಶ್ನೆ ಸಹಜ. ಹೀಗಾಗಿ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡಕ್ಕೆ ಬಂದಿರುವ ಸಾಹಿತ್ಯೇತರ ಕೃತಿಗಳನ್ನು ಗಮನದಲ್ಲಿರಿಸಿಕೊಂಡು ಇದರ ಸಾಧ್ಯತೆಯನ್ನು ಗುರುತಿಸುವುದಾದರೆ,

೧. ಕನ್ನಡದ ಸಂದರ್ಭಕ್ಕೆ ಅಗತ್ಯವಿದ್ದ ಸಾಹಿತ್ಯೇತರ ಜ್ಞಾನಧಾರೆಯ ಸಮಗ್ರ ವಿಷಯ ಮೂಲ ಭಾಷೆಯ ಒಂದೇ ಪಠ್ಯದಲ್ಲಿ ಇಲ್ಲದೇ ಇರುವುದು.

೨. ಬಹುಮೂಲಗಳನ್ನು ಆಧರಿಸಿ ಸಾಹಿತ್ಯೇತರ ಪಠ್ಯಗಳನ್ನು ರೂಪಿಸಿಕೊಂಡರೆ ಮಾಹಿತಿ ಅಥವಾ ಜ್ಞಾನದ ದೃಷ್ಟಿಯಿಂದ ಸಮರ್ಪಕವೆಂದು ಭಾವಿಸಿರಬಹುದು.

೩. ಸಾಹಿತ್ಯೇತರ ವಿಚಾರದ ಕೆಲವು ಕೃತಿಗಳು ಶಾಲಾಪಠ್ಯಗಳಾಗಿದ್ದರಿಂದ ಶಾಲಾಪಠ್ಯಕ್ರಮದ ನಿಯಮಾನುಸಾರ ಪಠ್ಯಪುಸ್ತಕವನ್ನು ರೂಪಿಸಿಕೊಳ್ಳುವ ಉದ್ದೇಶದಿಂದ ಬಹುಮೂಲಗಳಿಗೆ ಮೊರೆ ಹೋಗಿರುವ ಸಾಧ್ಯತೆಯಿದೆ.

೪. ಸಾಹಿತ್ಯೇತರ ಪಠ್ಯಗಳಲ್ಲಿನ ಕೆಲವೊಂದು ನಿರ್ದಿಷ್ಟ ವಿಷಯಗಳು ಬೇರೆ ಬೇರೆ ಪಠ್ಯಗಳಲ್ಲಿ ವಿಭಿನ್ನ ಆಯಾಮಗಳಿಂದ ರಚನೆಯಾಗಿರುವುದನ್ನು ಕಂಡು ಅವುಗಳನ್ನೆಲ್ಲ ಬಳಸಿಕೊಂಡು ಏಕಪಠ್ಯವನ್ನು ರಚಿಸಿಕೊಂಡಿರಬಹುದು.

೫. ವಸಾಹತು ಸಂದರ್ಭ ಮತ್ತು ಆಧುನಿಕತೆಯ ಸಂಕೀರ್ಣ ವ್ಯವಸ್ಥೆ ಸಹ ಬಹುಮೂಲಗಳನ್ನಾಧರಿಸಿ ಏಕಪಠ್ಯವನ್ನು ರೂಪಿಸಿಕೊಳ್ಳಲು ಪೂರಕವಾಗಿರಬಹುದು. ಯಾಕೆಂದರೆ ಭಾರತೀಯ ಸಂದರ್ಭದಲ್ಲಿ

ಆಧುನಿಕತೆಯೆಂಬುದು ವಸಾಹತುಶಾಹಿಯ ಭಾಗವಾಗಿಯೇ ಬಂದಿರುವುದು. ಆದರೆ ಒಂದೇ ಮೂಲದಿಂದ ಅವು ಈ ನೆಲದಲ್ಲಿ ನೆಲೆಯೂರದೆ ಆಡಳಿತ, ಶಿಕ್ಷಣ, ಜೀವನ ವಿಧಾನ, ಸಾಹಿತ್ಯ ಇತ್ಯಾದಿ ಬಹುದಾರಿಗಳಿಂದ ಹರಿದು ಬಂದವು. ಇವುಗಳು ಒಟ್ಟಾಗಿ ಆಧುನಿಕತೆಯ ಬದುಕು ಕನ್ನಡವೂ ಸೇರಿದಂತೆ ಭಾರತೀಯ ಇತರ ಭಾಷೆಗಳ ಸಂದರ್ಭದಲ್ಲಿ ರೂಪತಾಳಿತು. ಈ ಪ್ರಕ್ರಿಯೆಯ ಪ್ರಭಾವದಿಂದಾಗಿ ಸಾಹಿತ್ಯೇತರ ಜ್ಞಾನಧಾರೆಗಳು ಬಹುಮೂಲಗಳಿಂದ ಕನ್ನಡದಲ್ಲಿ ರೂಪುಗೊಳ್ಳುವಂತಾಗಿವೆ.

ಹೀಗೆ 'ಇಂಗ್ಲಿಷ್ ಗೀತಗಳು' ಪೂರ್ವದ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ ಏಕಮೂಲದಿಂದ ಪಠ್ಯಗಳ ಭಾಷಾಂತರ ಹಾಗೂ ಬಹುಮೂಲಗಳನ್ನು ಆಧರಿಸಿ ಏಕಪಠ್ಯವನ್ನು ರೂಪಿಸಿಕೊಳ್ಳುವ ಎರಡು ದಾರಿಗಳನ್ನು ಕಂಡುಕೊಂಡಿವೆ. ಅಲ್ಲದೆ ಈ ಎರಡೂ ಪ್ರಕ್ರಿಯೆಯೂ ಇಂಗ್ಲಿಷ್ ಮತ್ತು ಭಾರತೀಯ ಭಾಷೆಗಳ ಮೂಲಕ ರೂಪುಗೊಂಡಿರುವುದು ಗಮನಾರ್ಹವಾಗಿದೆ. ಸಾಹಿತ್ಯಿಕ ಜ್ಞಾನದಂತೆಯೇ ಸಾಹಿತ್ಯೇತರ ಜ್ಞಾನವನ್ನು ಕೂಡ ಕನ್ನಡದ ಸಂದರ್ಭದಲ್ಲಿ ಕಟ್ಟಿಕೊಳ್ಳುವಲ್ಲಿ ಈ ಪ್ರಕ್ರಿಯೆ ಪಾಲ್ಗೊಂಡಿದ್ದು ಗಮನಿಸಬೇಕಾದ ಸಂಗತಿ.

ಸಾಹಿತ್ಯೇತರ ಕೃತಿಗಳ ಭಾಷಾಂತರದಿಂದ ಕನ್ನಡದ ಭಾಷಾಂತರ ಪ್ರಕ್ರಿಯೆ ಹೊಸ ಆಯಾಮವನ್ನು ಪಡೆದುಕೊಂಡಿತು ಎನ್ನಬೇಕು. ಯಾಕೆಂದರೆ, ಭಾಷೆಯಿಂದ ಭಾಷೆಗೆ ಭಾಷಾಂತರ ಸ್ವರೂಪ ಭಿನ್ನವಾಗಿರುವಂತೆ ಸಾಹಿತ್ಯ ಹಾಗೂ ಸಾಹಿತ್ಯೇತರ ಭಾಷಾಂತರ ಸಹ ಭಿನ್ನ ತಾತ್ವಿಕತೆಯಿಂದ ಕೂಡಿರುತ್ತದೆ. ಒಂದು ಭಾಷೆಯ ಕೃತಿಯು ಸಾಹಿತ್ಯದ ಸಂದರ್ಭದಲ್ಲಿ ರೂಪುಗೊಳ್ಳುವುದಕ್ಕೂ ಸಾಹಿತ್ಯೇತರ ಜ್ಞಾನಶಿಸ್ತುಗಳ ಸಂದರ್ಭದಲ್ಲಿ ರೂಪುಗೊಳ್ಳುವಿಕೆಗೂ ವ್ಯತ್ಯಾಸವಿದೆ. ಇಂಗ್ಲಿಷಿನಲ್ಲಿ ಸಾಹಿತ್ಯೇತರ ವಿವರಗಳಿರುವಂತೆ ಪ್ರಾಂತೀಯ ಭಾಷೆಗಳಲ್ಲಿಯೂ ಈ ಮಾಹಿತಿಯನ್ನು ಕೊಡುವ, ಅಭಿವೃದ್ಧಿಪಡಿಸುವ ಭಾಗವಾಗಿ ಸಾಹಿತ್ಯೇತರ ಜ್ಞಾನಧಾರೆಗಳು ಕನ್ನಡದಂತಹ ದೇಶೀಯ ಭಾಷೆಗಳಿಗೆ ಭಾಷಾಂತರಗೊಂಡವು. ಭಾಷಾಂತರದ ಮೂಲಕ ಸಾಹಿತ್ಯೇತರ ಮಾಹಿತಿಯನ್ನು ತಮ್ಮದಾಗಿಸಿಕೊಳ್ಳುವುದರೊಂದಿಗೆ ಇಂಗ್ಲಿಷ್‌ನ್ನು ಅರ್ಥೈಸಿಕೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಹೀಗೆ ಅರ್ಥೈಸಿಕೊಳ್ಳುವ ಉದ್ದೇಶದಿಂದ ಪ್ರಾಂತೀಯ ಭಾಷೆಗಳನ್ನು ಸದೃಢಗೊಳಿಸುವ ಪ್ರಯತ್ನಗಳೂ ನಡೆದವು. ಇಂಗ್ಲಿಷ್ ಮತ್ತು ಕನ್ನಡದ ಸಂಬಂಧ ಆರಂಭದಲ್ಲಿ ಶಿಕ್ಷಣ ಸಂಬಂಧಿಯಾದರೂ ದೇಶದ ಆಡಳಿತ ಇಂಗ್ಲಿಷ್‌ರ ಹಿಡಿತಕ್ಕೆ ಸಿಕ್ಕಾಗ ಅದು ಯಜಮಾನಿಕೆಯಾಗಿ ಪಲ್ಲಟಗೊಂಡಿರುವುದು ವಿಸ್ಮಯವಾಗಿದೆ. ಇದರಿಂದಾಗಿ ಬ್ರಿಟೀಷ್ ಆಡಳಿತ ಪ್ರಾಂತೀಯ ಭಾಷೆಗಳಲ್ಲಿ ಶಿಕ್ಷಣ ಕ್ರಮವನ್ನು ಜಾರಿಗೊಳಿಸಿದರೂ ಅದು ಇಂಗ್ಲಿಷ್ ಮಾದರಿಯನ್ನೇ ಅನುಸರಿಸಿದ, ಅನುಕರಿಸಿದ, 'ರೂಪಾಂತರಿಸಿ'ದ ಪದ್ಧತಿಯಾಗಿದೆ. ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯರು ದೇಶೀಯ ಜ್ಞಾನವನ್ನು ಪಶ್ಚಿಮದ ಮಾದರಿಯಲ್ಲಿ ಪುನರ್‌ರೂಪಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾದರು. ಹೀಗಾಗಿ ಸಂಸ್ಕೃತ ಹಾಗೂ ಭಾರತೀಯ ಇತರ ಭಾಷೆಗಳಲ್ಲಿರುವ ಸಾಹಿತ್ಯೇತರ ಜ್ಞಾನ 'ಹೊಸ ಬರವಣಿಗೆ'ಯಲ್ಲಿ ರೂಪುಗೊಂಡವು. ಈ ಕ್ರಮ ದೇಶೀಯ ಜ್ಞಾನವನ್ನು ಉಳಿಸಿಕೊಳ್ಳುವುದರೊಂದಿಗೆ ಪಶ್ಚಿಮದ ಜ್ಞಾನಕ್ಕೆ ಸಮಾನಾಂತರವಾಗಿ ನಿರೂಪಿಸುವುದೂ ಆಗಿರುವುದು ಗಮನಾರ್ಹ. ಹೀಗೆ ಪರಂಪರೆಯನ್ನು ಪುನರ್‌ಪರಿಶೀಲಿಸುವ, 'ಮುರಿದು ಕಟ್ಟುವ' ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದು

ಚರಿತ್ರೆಯೆನಿಸಿದರೂ, ಇದನ್ನು ವಸಾಹತುಶಾಹಿಗೆ, ಇಂಗ್ಲಿಷಿನ ಯಜಮಾನಿಕೆಗೆ ದೇಶ ಭಾಷೆಗಳು ನೀಡಿದ ಪ್ರತಿಕ್ರಿಯೆಯೆಂದೇ ಪರಿಗಣಿಸಬೇಕಾಗಿದೆ.

ಯಾವುದೇ ಒಂದು ಸಾಹಿತ್ಯಿಕ ಪಠ್ಯ ಭಿನ್ನ ಸಂದರ್ಭದ ಹಕ್ಕೊತ್ತಾಯದಿಂದಲೋ ಅಥವಾ ಕಾರಣಾಂತರಗಳಿಂದ ಮತ್ತೆ ಮತ್ತೆ ಭಾಷಾಂತರವಾಗುವುದುಂಟು. ಇದನ್ನು ಗಮನಿಸಿದ ಅಧ್ಯಯನಕಾರರು 'ಪ್ರತಿಯೊಂದು ಯುಗವು ತನ್ನದೇ ಆದ ಭಾಷಾಂತರವನ್ನು ಹೊಂದಿರುತ್ತದೆ' ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಈ ಮಾತು ಸಾಹಿತ್ಯೇತರ ಕೃತಿಗಳ ಭಾಷಾಂತರ ಚಟುವಟಿಕೆಗೆ ಅನ್ವಯಿಸಲಾರದು. ಯಾಕೆಂದರೆ, ಸಾಹಿತ್ಯೇತರ ಪಠ್ಯಗಳು ಬಹುತೇಕವಾಗಿ ಒಂದೇ ಸಾರಿ ಭಾಷಾಂತರಗೊಂಡಿವೆ; ಭಾಷಾಂತರವಾಗುವುದು.[೬] 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಸುಮಾರು ೨೦ ವರ್ಷಗಳಲ್ಲಿ ೧೬೦ಕ್ಕಿಂತ ಅಧಿಕ ಕೃತಿಗಳು ಸಾಹಿತ್ಯೇತರ ಜ್ಞಾನಧಾರೆಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಭಾಷಾಂತರಗೊಂಡಿವೆ. ಇದರಲ್ಲಿ ಯಾವೊಂದು ಪಠ್ಯವು ಒಂದಕ್ಕಿಂತ ಹೆಚ್ಚು ಭಾಷಾಂತರ ಕಂಡಿಲ್ಲ. ಹಾಗಂತ ಒಂದೇ ಪಠ್ಯ ಎರಡು ಮೂರು ಮುದ್ರಣಗಳನ್ನು ಕಂಡ ಉದಾಹರಣೆಗಳಿವೆ. ಈ ವಿಚಾರ ಸಾಹಿತ್ಯ ಹಾಗೂ ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಪ್ರಕ್ರಿಯೆಯ ತಾತ್ವಿಕತೆಯಲ್ಲಿನ ವಿಭಿನ್ನ ಸ್ವರೂಪವನ್ನು, ವೈಶಿಷ್ಟ್ಯವನ್ನು ಸ್ಪಷ್ಟಪಡಿಸುತ್ತದೆ.

ಈ ಕಾಲಘಟ್ಟದಲ್ಲಿನ ಸಾಹಿತ್ಯೇತರ ಭಾಷಾಂತರ ಪ್ರಕ್ರಿಯೆ ಅನಂತರದಲ್ಲಿಯೂ ಚಾಲ್ತಿಯಲ್ಲಿರುವುದನ್ನು ನಾವು ಕಾಣಬಹುದು. ಕನ್ನಡದಲ್ಲಿ ಪ್ರಕಟವಾಗುವ ಶಾಲಾಪಠ್ಯಗಳು ಹಾಗೂ ಇತರ ಜ್ಞಾನಶಿಸ್ತುಗಳ ಕೃತಿಗಳನ್ನು ವಿಭಿನ್ನ ಉದ್ದೇಶಗಳ ಹಿನ್ನೆಲೆಯಲ್ಲಿ ಈಗಲೂ ಬೇರೆ ಬೇರೆ ಕೃತಿಗಳಿಂದ ನೇರ ಭಾಷಾಂತರ ಮಾಡಿಕೊಳ್ಳಲಾಗುತ್ತದೆ. ಈ ಭಾಷಾಂತರ ಪ್ರಕ್ರಿಯೆಯ ತಾತ್ವಿಕತೆ 'ಇಂಗ್ಲಿಷ್ ಗೀತಗಳು' ಪೂರ್ವದ ಕೃತಿಗಳ ಭಾಷಾಂತರದ ತಾತ್ವಿಕತೆಗಿಂತ ಭಿನ್ನ. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಸಾಹಿತ್ಯೇತರ ಜ್ಞಾನ ಆಗ ತಾನೆ ಪ್ರವೇಶಗೊಳ್ಳುತ್ತಿತ್ತು ಮತ್ತು ಅಪರಿಚಿತವೆಂಬ ಭಾವನೆ ಎಲ್ಲರಲ್ಲಿತ್ತು. ಆದರೆ ಇಂದು ಆ ರೀತಿಯಿಲ್ಲ ಭಾಷಾಂತರಕಾರರು ಅಂದು ಸಾಹಿತ್ಯೇತರ ಜ್ಞಾನಧಾರೆಯನ್ನು ಕನ್ನಡದಲ್ಲಿ ರೂಪಿಸಬೇಕೆಂಬ ಸಾಹಸದಿಂದ ಭಾಷಾಂತರದಲ್ಲಿ ತೊಡಗಿಕೊಂಡರೆ, ಇಂದು ಶೈಕ್ಷಣಿಕ ನಿಯಮಗಳಿಗೆ ಅನುಸಾರ ಪಠ್ಯಗಳನ್ನು ರೂಪಿಸಲು ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿದ್ದಾರೆ. ಆದರೂ ಈ ಹಿಂದಿನ ಪ್ರಕ್ರಿಯೆಯ ಪ್ರೇರಣೆ ಈಗಲೂ ಇದೆ ಎಂದೇ ಹೇಳಬೇಕು.

ಹೀಗೆ ಒಟ್ಟಾರೆಯಾಗಿ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಡೆದಿರುವ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆಯಿಂದ ಈ ಕೆಳಗಿನ ಅಂಶಗಳನ್ನು ಗುರುತಿಸಿಕೊಳ್ಳಬಹುದು.

೧. ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡದಲ್ಲಿ ನಡೆದಿರುವ ಸಾಹಿತ್ಯೇತರ ಕೃತಿಗಳ ಭಾಷಾಂತರ ಪ್ರಕ್ರಿಯೆ ಶೈಕ್ಷಣಿಕ ಹಾಗೂ ಸಾಮಾನ್ಯ ಓದು ಈ ಎರಡನ್ನು ಗಮನದಲ್ಲಿಟ್ಟುಕೊಂಡು ನಡೆದಿದೆ. ಈ ವಿಚಾರ ಭಾರತದ ಇತರ ಭಾಷೆಗಳ ಸಂದರ್ಭಕ್ಕೂ ಅನ್ವಯಿಸುತ್ತದೆ.

೨. ಸಾಹಿತ್ಯೇತರ ಜ್ಞಾನಶಿಸ್ತುಗಳ ಕೃತಿಗಳನ್ನು ಸಾಹಿತ್ಯ ಕೃತಿಗಳಂತೆಯೆ ಪಶ್ಚಿಮದ ಹಾಗೂ ಭಾರತೀಯ ಬೇರೆ ಬೇರೆ ಭಾಷೆಗಳಿಂದ ಭಾಷಾಂತರಿಸಿಕೊಂಡಿರುವುದನ್ನು ಕಾಣಬಹುದು.

೩. ಈ ಪಠ್ಯಗಳು ವಯಸ್ಸು ಮತ್ತು ತರಗತಿಗಳ ಹಿನ್ನೆಲೆಯಲ್ಲಿ ಹಾಗೂ ಲಿಂಗಗಳನ್ನು ಗಮನದಲ್ಲಿರಿಸಿಕೊಂಡು ರೂಪುಗೊಂಡಿರುವುದು ಗಮನಾರ್ಹವಾಗಿದೆ.

೪. ಭಾರತೀಯ ಭಾಷೆಗಳಿಂದ ಸಹ ಸಾಹಿತ್ಯೇತರ ಜ್ಞಾನಧಾರೆಗಳನ್ನು ರೂಪಿಸಿಕೊಳ್ಳುವ ಮೂಲಕ ವಸಾಹತು ಸಂದರ್ಭದಲ್ಲಿ ಇಂಗ್ಲಿಷಿನಲ್ಲಿರುವಂತೆ ದೇಶ ಭಾಷೆಗಳಲ್ಲಿಯೂ ಸಾಹಿತ್ಯೇತರ ಮಾಹಿತಿಯಿದೆ ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ.

೫. ಸಾಹಿತ್ಯೇತರ ಜ್ಞಾನಶಿಸ್ತುಗಳ ಕೃತಿಗಳ ಪ್ರಮಾಣವು ಕಾಲದ ಅಗತ್ಯ ಮತ್ತು ತುರ್ತನ್ನು ಪ್ರತಿನಿಧಿಸುವಂತಿವೆ. ಆಗತಾನೆ ಇತರ ಜ್ಞಾನಶಿಸ್ತುಗಳು ಇಂಗ್ಲಿಷಿನಿಂದ ಪರಿಚಿತಗೊಳ್ಳುತ್ತಿದ್ದರಿಂದ ಹಾಗೂ ಅವು ದೇಶೀಯ ಭಾಷೆಗಳಲ್ಲಿ ಲಭ್ಯವಿರದ ಕಾರಣ ಸಾಹಿತ್ಯೇತರ ಜ್ಞಾನಸಿಸ್ತುಗಳ ಭಾಷಾಂತರ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಅಗತ್ಯವೆನಿಸಿತ್ತು.

೬. ಭಾಷಾಂತರ ಪ್ರಕ್ರಿಯೆಯೊಂದಿಗೆ ಜೊತೆಯಾಗಿ ನಡೆದ 'ಪದಕೋಶ' ಹಾಗೂ 'ಪಾರಿಭಾಷಿಕ ಪದಕೋಶ'ಗಳ ರಚನೆ ಗಮನಾರ್ಹವಾದುದು.

೭. ಸಾಹಿತ್ಯೇತರ ಜ್ಞಾನಶಿಸ್ತುಗಳ ಭಾಷಾಂತರ ಚಟುವಟಿಕೆಯು ಕನ್ನಡದಲ್ಲಿರದ ಸಾಹಿತ್ಯೇತರ ಮಾಹಿತಿಯನ್ನು ಕನ್ನಡದಲ್ಲಿ ಸಿದ್ಧಗೊಳಿಸುವ, ಸಂಗ್ರಹಿಸುವ ಭಾಗವಾಗಿ ನಡೆದಿವೆ.

೮. ಸಾಮಾನ್ಯ ಜನತೆಯ ತಿಳುವಳಿಕೆಯನ್ನು ತಿದ್ದುವ, ವಿಸ್ತರಿಸುವ ಮಹತ್ವದ ಹಂಬಲವನ್ನು ಕುರಿತಂತೆ ಇಲ್ಲಿನ ಹಲವು ಭಾಷಾಂತರಗಳು ಪ್ರಸ್ತಾಪ ಮಾಡುತ್ತವೆ.

೯. ಕನ್ನಡದ ಸಂದರ್ಭದಲ್ಲಿ ಪಶ್ಚಿಮದ ಜ್ಞಾನವನ್ನು ಪುನರ್‌ರೂಪಿಸಿಕೊಳ್ಳುವ ಹಾಗೂ ಭಾರತೀಯ ಪಾರಂಪರಿಕ ಜ್ಞಾನವನ್ನು ಆಧುನಿಕ ಸಂದರ್ಭಕ್ಕೆ ಸಜ್ಜುಗೊಳಿಸುವ ಪ್ರಯತ್ನವು ಸಾಹಿತ್ಯೇತರ ಕೃತಿಗಳ ಭಾಷಾಂತರದ ಮೂಲಕವೂ ನಡೆದಿದೆ.

೧೦. ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡವನ್ನು ಜ್ಞಾನ ಉತ್ಪಾದನೆಯ, ಪ್ರಸರಣದ ಭಾಷೆಯಾಗಿ ಸಜ್ಜುಗೊಳಿಸುವ ದಿಕ್ಕಿನಲ್ಲಿ ಈ ಭಾಷಾಂತರ ಪ್ರಯತ್ನ ಗಮನಾರ್ಹವಾದುದು.

೧೧. ಕನ್ನಡವನ್ನು ಶೈಕ್ಷಣಿಕ ಭಾಷೆಯಾಗಿ ರೂಪಿಸುವ, ಅಭಿವೃದ್ಧಿಪಡಿಸುವ ದಿಕ್ಕಿನಲ್ಲಿ ಈ ಭಾಷಾಂತರದ ಸ್ಥಾನ ಪ್ರಮುಖವಾದುದು.

೧೨. ಮಾಹಿತಿಗಾಗಿ ಮತ್ತು ಹೊಸದಾಗಿ ರೂಪುಗೊಳ್ಳುತ್ತಿದ್ದ ಶಿಕ್ಷಿತ ಸಮುದಾಯದ ಓದಿನ ಅಗತ್ಯವನ್ನು ಪೂರೈಸುವ ಭಾಗವಾಗಿಯೂ ಈ ಪ್ರಕ್ರಿಯೆ ನಡೆದಿದೆ.

(ಅನುಬಂಧ ೪ರಲ್ಲಿ ನೀಡಿರುವ ಎಲ್ಲಾ ಪಠ್ಯಗಳು ಅಧ್ಯಯನಕ್ಕೆ ದೊರೆಯಲಿಲ್ಲ. ಒಂದು ವೇಳೆ ಅವು ದೊರೆತರೆ ಈ ಚರ್ಚೆ ಇನ್ನೂ ಸಮಗ್ರವಾಗುವ ಸಾಧ್ಯತೆಯಿತ್ತು).

**ಟಿಪ್ಪಣಿ**

೧. ಈ ಅವಧಿಯಲ್ಲಿ ಅನೇಕ ಪತ್ರಿಕೆಗಳು ಕೃಷಿ ಸಂಬಂಧಿತ ಮಾಹಿತಿಗಳನ್ನು ಒದಗಿಸುವ ಉದ್ದೇಶದಿಂದ ಪ್ರಕಟಗೊಳ್ಳುತ್ತಿದ್ದವು. ಜೊತೆಗೆ ಕೃಷಿಯೇತರ ಪತ್ರಿಕೆಗಳಲ್ಲಿ ಆಧುನಿಕ ಕೃಷಿ ಪದ್ಧತಿಗಳ ಕುರಿತಾದ ಜಾಹೀರಾತುಗಳು ಸಹ ಪ್ರಕಟಗೊಳ್ಳುತ್ತಿದ್ದವು.

೨. ಇವುಗಳೆಲ್ಲವು ಮೂಲತಃ ಈ ಭಾಷೆಗಳಲ್ಲಿಯೇ ರೂಪುಗೊಂಡವು ಎನ್ನುವಂತಿಲ್ಲ. ಇಂಗ್ಲಿಷ್‌ನಿಂದ ಈಗಾಗಲೇ ಈ ಭಾಷೆಗೆ ಬಂದಿರುವುದರಿಂದ ಮತ್ತು ಭಾಷಾಂತರಕಾರರಿಗೆ ಇಂಗ್ಲಿಷ್ ಬಾರದೇ ಇರುವುದರಿಂದಲೂ ಭಾರತೀಯ ಇತರ ಭಾಷೆಗಳಿಂದ ಭಾಷಾಂತರಿಸಿಕೊಂಡಿರಬಹುದು. ಅಲ್ಲದೆ ದೇಶೀಯ ಭಾಷೆಗಳಿಂದ ಭಾಷಾಂತರಿಸಿಕೊಳ್ಳುವುದು ಸುಲಭವೂ ಆಗಿತ್ತು.

೩. ಸಾಹಿತ್ಯೇತರ ಪಠ್ಯವು ಸಹ ಮತ್ತೆ ಮತ್ತೆ ಭಾಷಾಂತರಗೊಳ್ಳುವ ಸಾಧ್ಯತೆಯಿದೆ. ಶಾಲಾಪಠ್ಯಗಳ ಸಂದರ್ಭದಲ್ಲಿ ಒಂದೇ ಪಠ್ಯವನ್ನು ಅನೇಕರು ಭಾಷಾಂತರ ಮಾಡಿರುವುದನ್ನು ಕಾಣಬಹುದು. ಪ್ರತಿಯೊಬ್ಬನು ತಾನು ಹಿಂದಿನ ಕೃತಿಗಿಂತ ಚೆನ್ನಾಗಿ ಭಾಷಾಂತರಿಸ ಬಲ್ಲೆ ಎಂದೇ ಭಾಷಾಂತರಿಸುತ್ತಾನೆ. ಆದರೆ ಈ ಪ್ರಕ್ರಿಯೆಯ ಹಿಂದಿನ ಒತ್ತಾಯ ಸಾಹಿತ್ಯ ಭಾಷಾಂತರ ಪ್ರಕ್ರಿಯೆಗಿಂತ ಭಿನ್ನವಾದದು.



## ಅಧ್ಯಾಯ-೮

# ಇಂಗ್ಲಿಷ್ ನಾಟಕಗಳ ರೂಪಾಂತರ ಪ್ರಕ್ರಿಯೆ

೮.೧. ರೂಪಾಂತರ ಪಠ್ಯಗಳ ವಿಂಗಡಣೆ

೮.೧.೧. ಸಂಸ್ಥಾನ (ಪ್ರದೇಶ)ಗಳ ಹಿನ್ನೆಲೆಯಲ್ಲಿ ರೂಪಾಂತರ ಪಠ್ಯಗಳು

೮.೧.೨. ರೂಪಾಂತರ ಪಠ್ಯಗಳು ಮತ್ತು ಮೂಲ ಲೇಖಕರು

೮.೧.೩. ರೂಪಾಂತರ ಪಠ್ಯಗಳು ಮತ್ತು ರೂಪಾಂತರಕಾರರು

೮.೧.೪. ರೂಪಾಂತರ ಪಠ್ಯಗಳು ಮತ್ತು ಶೀರ್ಷಿಕೆಗಳು

೮.೨. ಶೀರ್ಷಿಕೆಗಳ ರೂಪಾಂತರ ಪ್ರಕ್ರಿಯೆ

೮.೨.೧. ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ ರೂಪಾಂತರ

೮.೨.೨. ನಾಯಕಿ ಕೇಂದ್ರಿತ ಶೀರ್ಷಿಕೆಗಳು

೮.೨.೩. ಭಾರತೀಕರಣಗೊಂಡ ಶೀರ್ಷಿಕೆಗಳು/ಸ್ಥಳೀಕರಣಗೊಂಡ ಶೀರ್ಷಿಕೆಗಳು

೮.೨.೩.೧. ಜನಪ್ರಿಯ ಶೀರ್ಷಿಕೆಗಳಲ್ಲಿ ರೂಪಾಂತರ

೮.೨.೩.೨. ಸಂಸ್ಕೃತಮಯ ಶೀರ್ಷಿಕೆಗಳಲ್ಲಿ ರೂಪಾಂತರ

೮.೨.೪. ಒಂದೇ ನಾಟಕ ಭಿನ್ನ ಶೀರ್ಷಿಕೆಗಳಲ್ಲಿ ರೂಪಾಂತರ

೮.೩. ಪಾತ್ರಗಳ ಹೆಸರುಗಳ ರೂಪಾಂತರ ಪ್ರಕ್ರಿಯೆ

೮.೩.೧. ಮೂಲ ಪಾತ್ರಗಳ ಹೆಸರುಗಳು ಮತ್ತು ರೂಪಾಂತರ ಪಾತ್ರಗಳ ಹೆಸರುಗಳು

೮.೩.೨. ಕೇವಲ ರೂಪಾಂತರ ಪಾತ್ರಗಳ ಹೆಸರುಗಳು

೮.೩.೩. ಪಾತ್ರಗಳ ಹೆಸರುಗಳ ರೂಪಾಂತರ ಮತ್ತು ರೂಪಾಂತರ ಪಠ್ಯಗಳು

೮.೪. ಸನ್ನಿವೇಶಗಳ ರೂಪಾಂತರ

## ಇಂಗ್ಲಿಷ್ ನಾಟಕಗಳ ರೂಪಾಂತರ ಪ್ರಕ್ರಿಯೆ

ರೂಪಾಂತರ ನಾಟಕಕಾರರಲ್ಲಿ ಬಿ.ಎಂ.ಶ್ರೀಯವರು ಒಬ್ಬರು. ಭಾಷಾಂತರದ ಮಾದರಿಗಳೆನಿಸಿಕೊಂಡ 'ಸ್ಥಳೀಕರಣ', 'ಪುನರ್‌ಲೇಖ' ಮತ್ತು 'ನೇರ ಭಾಷಾಂತರ'ಗಳಿಗೆ ಶ್ರೀಯವರ ಮೂರು ನಾಟಕಗಳು ಮಾದರಿಗಳಾಗಿವೆ. 'ಗದಾಯುದ್ಧನಾಟಕಂ' (೧೯೨೬) ಒಂದು 'ಪುನರ್‌ಲೇಖ' ನಾಟಕ. ಪಾಶ್ಚಿಮಾತ್ಯ ನಾಟಕ ಕೃತಿಯೊಂದರ ಹಿನ್ನೆಲೆಯಲ್ಲಿ ಕನ್ನಡದ್ದಾದ ವಸ್ತು ಸಂಸ್ಕೃತಿಯನ್ನು ಬಳಸಿಕೊಂಡು ಸಮಕಾಲೀನ ಸಂದರ್ಭದಲ್ಲಿ ಮರುರೂಪಿಸುವ ಪ್ರಯತ್ನ ಈ ನಾಟಕದ್ದು. ನಾಟಕದ ವಿಶಿಷ್ಟ ಪರಂಪರೆಯೊಂದಕ್ಕೆ ದಾರಿ ಮಾಡಿಕೊಡುವುದರ ಜೊತೆಗೆ ಪ್ರಾಚೀನ ಸಾಹಿತ್ಯ ಕೃತಿಗಳ ಕುರಿತಿರುವ ಈವರೆಗಿನ ತೀರ್ಮಾನವನ್ನು 'ಮುರಿದು ಕಟ್ಟುವ' ಮತ್ತು ಹೊಸ ಓದಿನ ಸಾಧ್ಯತೆಗೆ ಅವಕಾಶ ನೀಡುವ ಪ್ರಯತ್ನವಿದಾಗಿದೆ. 'ಸಾಪೋಕ್ಲೀಸನ' 'ಏಜಾಕ್ಸ' ನಾಟಕದ ಅನು - ವಾದ 'ಅಶ್ವತ್ಥಾಮನ್' (೧೯೨೯) ಪರಕೀಯ ಸಂಸ್ಕೃತಿಯ ಜೀವನ ದೃಷ್ಟಿಯನ್ನು ನಮ್ಮ ಸಾಂಸ್ಕೃತಿಕ ಜಗತ್ತಿನೊಂದಿಗೆ ರೂಪಿಸಿಕೊಳ್ಳುವ ಮೂಲಕ ಈಗಾಗಲೇ ಇರುವುದನ್ನು ಸಂದರ್ಭಾನುಸಾರ ರೂಪಾಂತರಿಸಿಕೊಂಡು ನೋಡುವ ಕ್ರಮ ಈ ನಾಟಕದ್ದಾಗಿದೆ. ಒಂದು ಬಗೆಯಿಂದ ನಮ್ಮ ಸಾಂಸ್ಕೃತಿಕ ಜಗತ್ತಿಗೆ ಅಳವಡಿಸಿಕೊಳ್ಳುವ ಮಾದರಿಯಾದ 'ಅಶ್ವತ್ಥಾಮನ್' ನಾಟಕವು 'ಸ್ಥಳೀಕರಣ'ವೂ ಆಗಿದೆ. ಹೀಗಾಗಿ ಈವರೆಗೆ ಪುರಾಣೇತಿಹಾಸವಾದ ಅಶ್ವತ್ಥಾಮನ ಕುರಿತಾದ ಭಿನ್ನ ದೃಷ್ಟಿಕೋನ  ಮತ್ತು ಹೊಸ ಓದಿನ ಗ್ರಹಿಕೆ ಈ ನಾಟಕದಿಂದ ಬಯಲಿಗೆ ಬಂದಿತು. ಜೊತೆಗೆ ಓ.ಎಲ್. ನಾಗಭೂಷಣ ಸ್ವಾಮಿಯವರು ಹೇಳುವಂತೆ ಹೇಗೆ ನಮ್ಮ ಪುರಾಣ ಇತಿಹಾಸಗಳನ್ನು ಹೊಸ ಕಲಾಕೃತಿಯ ನಿರ್ಮಾಣಕ್ಕೆ ಮೂಲ ಸಾಮಗ್ರಿಗಳನ್ನಾಗಿ ಪರಿವರ್ತಿಸಿಕೊಳ್ಳಬಹುದೆಂಬ ಹೊಸ ದೃಷ್ಟಿಯನ್ನು ಈ ನಾಟಕ 'ಸ್ಥಳೀಕರಣ'ದ ಮಾದರಿಯಲ್ಲಿ ಪರಿಚಯಿಸಿತು. ಇಲ್ಲಿ ಗ್ರೀಕ್‌ನ ಏಜಾಕ್ಸ ಕನ್ನಡದ ಸಂದರ್ಭ, ಸನ್ನಿವೇಶದಲ್ಲಿ ಅಶ್ವತ್ಥಾಮನ್ ಆಗಿ ಸ್ಥಳೀಕರಣಗೊಂಡಿದೆ.

೧೯೩೫ರಲ್ಲಿ ಪ್ರಕಟಗೊಂಡ 'ಪಾರಸಿಕರು' ಈಸ್ಕಿಲಸನ ಗ್ರೀಕ್ ನಾಟಕದ ನೇರ ಭಾಷಾಂತರ. ಇದರ ವಸ್ತು ಮತ್ತು ಧೋರಣೆಗಳಲ್ಲಿ ಮೂಲ ಕೃತಿಯ ಜಾಯಮಾನವನ್ನು ಉಳಿಸಿಕೊಳ್ಳುವ ಪ್ರಯತ್ನವಿದೆ. ಇದನ್ನು ಗಮನದಲ್ಲಿಟ್ಟುಕೊಂಡು ಓ.ಎಲ್.ನಾಗಭೂಷಣಸ್ವಾಮಿಯವರು ಹೇಳುವುದೇನೆಂದರೆ, ತನ್ನ ಮೂಲ ಪೌರತ್ವವನ್ನು

ಉಳಿಸಿಕೊಂಡರೂ 'ಪಾರಸಿಕರು' ನಾಟಕ 'ಸಾಂಸ್ಕೃತಿಕ ರಾಯಭಾರಿ' ಎಂದು ಅಭಿಪ್ರಾಯಪಟ್ಟಿದ್ದಾರೆ. ''ವಸ್ತುವಿನ ಅಪರಿಚಿತತೆಯಿಂದ ಪಾರಸಿಕರು ಉಳಿದ ನಾಟಕಗಳಂತೆ ಹೆಚ್ಚು ಚರ್ಚೆಗೆ ಒಳಗಾಗದಿದ್ದರೂ ಕನ್ನಡ ಮತ್ತು ಗ್ರೀಕ್ ರಂಗಭೂಮಿಯ ಹಿನ್ನೆಲೆಯಲ್ಲಿ ಮಹತ್ವದ ಪಾತ್ರವನ್ನು ಪಡೆದುಕೊಂಡಿದೆ'' (ಸ್ವಾಮಿ, ೧೯೮೫).

ಹೀಗೆ ಒಂದೆಡೆ 'ಇಂಗ್ಲಿಷ್ ಗೀತಗಳು' ಭಾಷಾಂತರದ ಕೃತಿ ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡು ಶ್ರೀಯವರಿಗೆ ಗೌರವವನ್ನು ತಂದುಕೊಟ್ಟಿದ್ದರೆ, ಇನ್ನೊಂದೆಡೆ ಅವರ ಭಾಷಾಂತರ ನಾಟಕಗಳ ಭಾಷಾಂತರದ ವಿವಿಧ ಮಾದರಿಗಳನ್ನು ಕನ್ನಡದಲ್ಲಿ ಪ್ರಯೋಗಕ್ಕೊಳಪಡಿಸುವ ಮೂಲಕ ಭಾಷಾಂತರ ಹಾಗೂ ಸ್ವತಂತ್ರ ಕೃತಿಗಳ ಎರಡರ ಸಂದರ್ಭದಲ್ಲಿ ಹೊಸ ರೂಪಗಳಿಗೆ ದಾರಿಮಾಡಿತು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಪೂರ್ವದ ಅಂದರೆ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಾಟಕಗಳು ಯಾವ ಸ್ವರೂಪದಲ್ಲಿ 'ರೂಪಾಂತರ'ಗೊಂಡಿವೆ, ಅವುಗಳ ಹಿಂದಿನ ಸಾಂಸ್ಕೃತಿಕ ಅಗತ್ಯವೇನು ಮತ್ತು ಇವುಗಳು ಬಿ.ಎಂ.ಶ್ರೀಯವರ 'ರೂಪಾಂತರ' ಚಟುವಟಿಕೆಯನ್ನು ಪ್ರಭಾವಿಸಿವೆಯೆ ಎನ್ನುವ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

'ಇಂಗ್ಲಿಷ್ ಗೀತಗಳು' ಪೂರ್ವದ ನಾಟಕಗಳ 'ರೂಪಾಂತರ'ವನ್ನು ಚರ್ಚಿಸುವಾಗ ಅವುಗಳನ್ನು ಭಿನ್ನ ನೆಲೆಗಳಲ್ಲಿ ವಿಂಗಡಿಸಿಕೊಂಡು ಹಲವು ಆಯಾಮಗಳಿಂದ 'ರೂಪಾಂತರ' ಪ್ರಕ್ರಿಯೆಯನ್ನು ಗುರುತಿಸುವುದು ಸೂಕ್ತ. ಇದರಿಂದಾಗಿ ಪಠ್ಯಗಳನ್ನು ವಿವಿಧ ಮಾದರಿಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಜೊತೆಗೆ ನಾಟಕಗಳ 'ರೂಪಾಂತರ' ಯಾವ ಯಾವ ಹಂತದಲ್ಲಿ ನಡೆದಿದೆ ಅವುಗಳ ತಾತ್ವಿಕತೆ, ಕಾರಣ ಮತ್ತು ಉದ್ದೇಶಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**೮.೧. ರೂಪಾಂತರ ಪಠ್ಯಗಳ ವಿಂಗಡಣೆ**

ಈ ಮೊದಲು ಪ್ರಸ್ತಾಪಿಸಿದಂತೆ 'ಇಂಗ್ಲಿಷ್ ಗೀತಗಳು' ಪೂರ್ವದ (೧೮೫೦-೧೯೨೦) ಅವಧಿಯಲ್ಲಿ ರೂಪಾಂತಗೊಂಡ ನಾಟಕಗಳ ಹಿನ್ನೆಲೆಯಲ್ಲಿ ಚರ್ಚೆಯನ್ನು ನಡೆಸಲಾಗುವುದು. ಜೊತೆಗೆ ನಾಟಕಗಳನ್ನು ಅಧ್ಯಯನದ ಅನುಕೂಲಕ್ಕಾಗಿ, ಹೊಸಸಾಧ್ಯತೆಗಾಗಿ ವಿಂಗಡಿಸಿಕೊಳ್ಳಲಾಗುವುದು. 'ಇಂಗ್ಲಿಷ್ ಗೀತಗಳು' ಪೂರ್ವದ ಸುಮಾರು ಏಳು ದಶಕಗಳಲ್ಲಿ ೪೯ ನಾಟಕಗಳು ಇಂಗ್ಲಿಷ್‌ನಿಂದ ಕನ್ನಡಕ್ಕೆ 'ರೂಪಾಂತರ'ಗೊಂಡಿವೆ. ಇವುಗಳಲ್ಲಿ ಹೆಚ್ಚಿನವು 'ರಂಗರೂಪಾಂತರ'ಗೊಂಡಿರುವುದು ಗಮನಾರ್ಹವಾಗಿದೆ. ಲಭ್ಯ ಮಾಹಿತಿಗಳ ಪ್ರಕಾರ ಬಸವಲಿಂಗಪ್ಪ ಚೆನ್ನಬಸವಪ್ಪ ಡೆಪ್ಯುಟಿ ಅವರ 'ನಗದವರನ್ನು ನಗಿಸುವ ಕಥೆ' (೧೮೭೧) ಕನ್ನಡದ ಮೊದಲ 'ರೂಪಾಂತರ' ನಾಟಕ; ಶೇಕ್ಸಪಿಯರನ 'ರೂಪಾಂತರ'ಗೊಂಡ ಮೊದಲ ನಾಟಕವು ಇದೆ ಆಗಿದೆ (ರಾಮಚಂದ್ರದೇವ, ೧೯೯೨). ಅಲ್ಲಿಂದ ಇಲ್ಲಿಯವರೆಗೆ ನಾಟಕಗಳ 'ರೂಪಾಂತರ' ಪ್ರಕ್ರಿಯೆ ನಡೆಯುತ್ತಲೇ ಇದೆ.

'ನಗದವರನ್ನು ನಗಿಸುವ ಕಥೆ' ನಾಟಕವೂ ಸೇರಿ ೧೮೭೧ ರಿಂದ ೧೯೦೦ರ ವರೆಗೆ ಇಂಗ್ಲಿಷ್‌ನಿಂದ ಕನ್ನಡಕ್ಕೆ ೨೦ ನಾಟಕಗಳು 'ರೂಪಾಂತರ'ಗೊಂಡರೆ ೧೯೦೦ ರಿಂದ ೧೯೨೧ ರವರೆಗೆ ೨೪ ನಾಟಕ 'ರೂಪಾಂತರ'ಗೊಂಡಿವೆ. ಉಳಿದ ೫ ನಾಟಕಗಳು ಯಾವಾಗ ಪ್ರಕಟಗೊಂಡವು ಎನ್ನುವ ಕುರಿತು ಮಾಹಿತಿಯಿಲ್ಲ. ೧೯ನೇ ಶತಮಾನದ ಕೊನೆಯ ಮೂರು ದಶಕಗಳಲ್ಲಿ ಸುಮಾರು ೨೦ ನಾಟಕಗಳು ಪ್ರಕಟಗೊಂಡರೆ, ೨೦ನೇ ಶತಮಾನದ ಮೊದಲ ಎರಡೇ ದಶಕದಲ್ಲಿ ೨೪ ನಾಟಕಗಳು ಪ್ರಕಟವಾಗಿರುವುದು ಗಮನಾರ್ಹ. ಇದರಿಂದಾಗಿ ಕಾಲದಿಂದ ಕಾಲಕ್ಕೆ

‘ರೂಪಾಂತರ’ ಪ್ರಕ್ರಿಯೆಲ್ಲಿ ಹೆಚ್ಚೆಚ್ಚು ಪಠ್ಯಗಳನ್ನು ರೂಪಿಸಿಕೊಳ್ಳಲಾಯಿತು ಎಂಬುದು ಸ್ಪಷ್ಟವಾಗುತ್ತದೆ. ಕನ್ನಡದ ‘ರೂಪಾಂತರ’ಕಾರರು ಇಂಗ್ಲಿಷ್‌ನ ಕೃತಿಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳಲು ಹೆಚ್ಚು ಆಸಕ್ತಿ ಹೊಂದಿದ್ದರು ಎನ್ನಬಹುದು.

ಹೀಗೆ ‘ರೂಪಾಂತರ’ಗೊಂಡ ನಾಟಕಗಳನ್ನು ಭಿನ್ನ ನೆಲೆಯಲ್ಲಿ ಈ ಕೆಳಗಿನಂತೆ ವಿಂಗಡಿಸಿಕೊಂಡು ಗಮನಿಸಬಹುದು.

### ೮.೧.೧. ಸಂಸ್ಥಾನ (ಪ್ರದೇಶ)ಗಳ ಹಿನ್ನೆಲೆಯಲ್ಲಿ ರೂಪಾಂತರ ಪಠ್ಯಗಳು

ಏಕೀಕರಣದ ಪೂರ್ವದಲ್ಲಿ ಭಾರತವು ಹಲವು ಬಗೆಯ ಆಡಳಿತಗಳನ್ನು ಹೊಂದಿತ್ತು. ಕರ್ನಾಟಕದ ಪ್ರದೇಶಗಳು ಭಿನ್ನ ಮಾದರಿಯ ರಾಜಕೀಯ ಆಡಳಿತಕ್ಕೂ ತುಂಡರಸರ ಹಿಡಿತದಲ್ಲಿಯೂ ಇದ್ದುದರಿಂದ ಅವುಗಳಿಗನುಸಾರವಾಗಿ ಸಾಮಾಜಿಕ, ರಾಜಕೀಯ ಮತ್ತು ಸಾಹಿತ್ಯಿಕ ಚಹರೆಗಳನ್ನು ಪಡೆದುಕೊಂಡವು. ಬ್ರಿಟೀಶ್‌ರ ರಾಜಕೀಯ ತಂತ್ರದಿಂದ ಕರ್ನಾಟಕದ ಕರಾವಳಿ ಮತ್ತು ಧಾರವಾಡದ ಸುತ್ತಮುತ್ತಲಿನ ಪ್ರದೇಶಗಳು ಆಧುನಿಕ ಶಿಕ್ಷಣದೊಂದಿಗೆ ಆಧುನಿಕತೆಗೆ ತೆರೆದುಕೊಂಡಂತೆ, ರಾಜರ ಆಡಳಿತದಲ್ಲಿದ್ದ ಮೈಸೂರು ಸಂಸ್ಥಾನ ಸಹ ಆಧುನಿಕತೆಗೆ ಸ್ಪಂದಿಸಿತ್ತು. ಈ ಭೂ ಪ್ರದೇಶಗಳ ಸಾಮಾಜಿಕ, ರಾಜಕೀಯ ಮತ್ತು ಪಾರಂಪರಿಕ ಚಹರೆಗಳು ‘ರೂಪಾಂತರ’ ಪ್ರಕ್ರಿಯೆಯನ್ನು ಪ್ರಭಾವಿಸಿರುವುದು ಗಮನಾರ್ಹವಾಗಿದೆ. ಸಂಸ್ಥಾನಗಳ ಹಿನ್ನೆಲೆಯಲ್ಲಿ ಪಠ್ಯಗಳನ್ನು ವಿಂಗಡಿಸಿಕೊಳ್ಳುವುದರೊಂದಿಗೆ ಪ್ರದೇಶಗಳ ಹಿನ್ನೆಲೆಯಲ್ಲಿಯೂ ಅದನ್ನು ಸ್ಪಷ್ಟಪಡಿಸಿಕೊಳ್ಳಬಹುದು.

**೧. ಮೈಸೂರು ಸಂಸ್ಥಾನ**

ಅರಸರ ಆಳ್ವಿಕೆಯಲ್ಲಿದ್ದ ಈ ಪ್ರದೇಶದಿಂದ ಪ್ರಕಟಗೊಂಡ ‘ರೂಪಾಂತರ’ ನಾಟಕಗಳು

೧. ಪರಿಕುಲಾಭ್ಯುದಯ (೧೮೯೭)

೨. ಮಹೀಮಂಡನ (೧೯೦೦)

೩. ರಾಮವರ್ಮ ಲೀಲಾವತಿ ಚರಿತ್ರೆ (೧೮೮೯)

೪. ಪ್ರೋಷಿತ ಪ್ರಿಯ ಸಮಾಗಮ (೧೯೧೧)

೫. ಶೂರಸೇನ ಚರಿತ್ರೆ (೧೮೯೫)

೬. ಶೇಕ್ಸ್‌ಪಿಯರ್ ನಾಟಕದ ಕತೆಯ ಸಾರಾಂಶವು (೧೮೯೨)

೭. ಹ್ಯಾಮ್ಲೆಟ್ (೧೯೦೫)

೮. ಚಂಡಿಮದಮರ್ಧನ ನಾಟಕಂ (೧೯೧೦)

೯. ರಾಮವರ್ಮ ಲೀಲಾವತಿ ಚರಿತ್ರೆ (೧೮೮೯)

೧೦. ರಾಮವರ್ಮ ಲೀಲಾವತಿ ( ? )

೧೧. ಭ್ರಾಂತಿ ವಿಲಾಸ (೧೮೭೬)

೧೨. ಮಂಜುವಾಣಿ (೧೯೨೪)

೧೩. ಪ್ರತಾಪರುದ್ರದೇವ (೧೮೯೫)

೧೪. ಪ್ರಮಿಳಾರ್ಜುನೀಯಂ (೧೮೯೬)

೧೫. ಚಂಡಮಾರುತ (೧೮೯೩)

೧೬. ಮಹಾಕವಿ ನಾಟಕದ ಕಥಾನುವಾದ (೧೯೦೯)

ಈ ನಾಟಕಗಳು ನಿರ್ದಿಷ್ಟವಾಗಿ ಮೈಸೂರಿನಿಂದ ಪ್ರಕಟಗೊಂಡರೆ ಕೆಳಗಿನವು ಬೆಂಗಳೂರಿನಿಂದ ಪ್ರಕಟಗೊಂಡಿವೆ.

೧೭. ಚರಿತಾಮೃತ (೧೯೨೧)

೧೮. ಕುಸುಮಾಕರ (೧೮೯೭)

೧೯. ಹ್ಯಾಮ್ಲೇಟ್ (೧೯೦೫)

೨೦. ಪಾಂಚಾಲಿ ಪರಿಣಯ (೧೮೯೦)

೨೧. ಕನಕಾಲುಕ / ಕಮಲಿನೀ ಚರಿತಂ (೧೯೧೧)

೨೨. ಹೇಮಚಂದ್ರರಾಜವಿಲಾಸ (೧೮೯೯)

೨೩. ಜಯಸಿಂಹರಾಜ ಚರಿತ್ರೆ (೧೮೮೧)

೨೪. ಜಯಸಿಂಹರಾಜ ಚರಿತ್ರಂ (೧೯೦೭)

೨೫. ಗಯ್ಯಾಳಿಯನ್ನು ಸಾಧುಮಾಡುವಿಕೆ (೧೮೯೭)

೨೬. ಒಬ್ಬ ಮೈಸೂರು ನಿವಾಸಿ (೧೯೦೭)

೨೭. ನಿರ್ಮಲೆ (ನಂಜನಗೂಡಿಂದ ೧೯೧೮)

೨೮. ಪದ್ಮಿನಿ (ನಂಜನಗೂಡಿಂದ ೧೯೧೧)

**೨. ಮುಂಬಯಿ ಕರ್ನಾಟಕ**

ಧಾರವಾಡದಿಂದ ಪ್ರಕಟಗೊಂಡ ಕೃತಿಗಳು

೧. ಸುಂದರ ನಾಟಕ (೧೮೮೭)

೨. ಮೋಹಿನಿ/ ನಿಂದಕರ ನಡಾವಳಿ (೧೯೧೧)

೩. ತ್ರಾಟಿಕಾ ನಾಟಕ/ ಮೊಂಡ ಗಂಡ ತುಂಟ ಹೆಂಡತಿ (೧೯೨೦)

೪. ನಗದವರನ್ನು ನಗಿಸುವ ಕಥೆ (೧೮೭೧)

೫. ಅಧಿಕಾರದಿಂದ/ ಸಂಸಾರ ಸುಖ (೧೯೧೫)

೬. ರಾಘುವೇಂದ್ರರಾವ್ ನಾಟಕ (೧೮೮೫)

ಬಾಗಲಕೋಟೆಯಿಂದ ಪ್ರಕಟಗೊಂಡ ನಾಟಕಗಳು

೭. ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕವು (೧೯೧೬)

೮. ಸುರತ ನಗರದ ಶ್ರೇಷ್ಠಿಯು (೧೯೧೭)

೯. ರಮೇಶ ಲಲಿತಾ (೧೯೧೭)

**೩. ಮದ್ರಾಸ್ ಕರ್ನಾಟಕ**

೧. ಪ್ರಮಾದಕರಣ ನಾಟಕಂ (ಉಡುಪಿ, ೧೯೧೬)

೨. ಜೂಲಿಯಸ್ ಸೀಸರ್ (ಮಂಗಳೂರು, ೧೯೧೨)

| | | |
|---|---|---|
| ಮೈಸೂರು ಸಂಸ್ಥಾನದಿಂದ | - | ೨೮ |
| ಮುಂಬಯಿ ಕರ್ನಾಟಕದಿಂದ | - | ೦೯ |
| ಮದ್ರಾಸ್ ಕರ್ನಾಟಕದಿಂದ | - | ೦೨ |
| ( ? ) | | ೧೦ |
| ಒಟ್ಟು 'ರೂಪಾಂತರ' ನಾಟಕ ಪಠ್ಯಗಳು | - | ೪೯ |

ಈ ವಿಂಗಡಣೆಯನ್ನು ಗಮನಿಸಿ ಹಲವು ಅಂಶಗಳನ್ನು ಗುರುತಿಸಿಕೊಳ್ಳಬಹುದು. ಅವುಗಳೆಂದರೆ, ಬೆಂಗಳೂರು ಸೇರಿದಂತೆ ಮೈಸೂರು ಸಂಸ್ಥಾನದಿಂದ ಅತಿಹೆಚ್ಚು ಅಂದರೆ ೨೮ ನಾಟಕ ಪ್ರಕಟಗೊಂಡರೆ ಮುಂಬಯಿ ಕರ್ನಾಟಕದಿಂದ ೦೯ ಹಾಗೂ ಮದ್ರಾಸ್ ಕರ್ನಾಟಕದಿಂದ ಕೇವಲ ೦೨ ನಾಟಕ ಪ್ರಕಟಗೊಂಡಿರುವುದು ಕಂಡುಬರುತ್ತದೆ. ಉಳಿದಂತೆ ಸುಮಾರು ೧೦ ನಾಟಕಗಳು ಯಾವ ಯಾವ ಪ್ರದೇಶಗಳಿಂದ ಪ್ರಕಟಗೊಂಡಿವೆ ಎನ್ನುವ ಕುರಿತು ಮಾಹಿತಿ ಇಲ್ಲ. ಈ ಪ್ರಾಂತ್ಯ ಅಥವಾ ಸಂಸ್ಥಾನಗಳನ್ನಲ್ಲದೆ ಪ್ರದೇಶವಾರು ಗಮನಿಸಿದರೆ ಇನ್ನೂ ಕೆಲವು ಅಂಶಗಳು ಬೆಳಕಿಗೆ ಬರುತ್ತವೆ. ರಾಜರ ಆಡಳಿತಕ್ಕೆ ಒಳಪಟ್ಟ ರಾಜಧಾನಿ ಎನಿಸಿಕೊಂಡ ಮೈಸೂರಿನಿಂದ ೧೬ ನಾಟಕಗಳು, ಬೆಂಗಳೂರಿನಿಂದ ೧೨ ನಾಟಕಗಳು ಹಾಗೂ ನಂಜನಗೂಡಿಂದ ಕೇವಲ ೦೨ ನಾಟಕಗಳು ಪ್ರಕಟಗೊಂಡಿವೆ. ಅಂತೆಯೇ ಧಾರವಾಡದಿಂದ ೦೬, ಬಾಗಲಕೋಟೆಯಿಂದ ೦೩ ಉಳಿದಂತೆ ಉಡುಪಿ, ಮಂಗಳೂರಿನಿಂದ ತಲಾ ಒಂದೊಂದು ನಾಟಕ ಪ್ರಕಟವಾಗಿದೆ.

ಮೈಸೂರು ರಾಜರ ಆಡಳಿತಕ್ಕೆ ಒಳಪಟ್ಟಿದ್ದು ಸಾಹಿತ್ಯಿಕ ಚಟುವಟಿಕೆಗೆ ಪೂರಕ ವಾತಾವರಣವಿತ್ತು. ಸ್ವತಃ ರಾಜರುಗಳೇ ಕವಿಗಳು, ವಿದ್ವಾಂಸರು ಆಗಿದ್ದರು. ಮನರಂಜನೆಯ ಉದ್ದೇಶದಿಂದ ನಾಟಕಗಳ ರಚನೆಯೊಂದಿಗೆ ಪ್ರದರ್ಶನಕ್ಕೂ ಅವಕಾಶಗಳಿದ್ದವು. ಹೀಗಾಗಿ ಮೈಸೂರಿನಿಂದ ಹೆಚ್ಚು ನಾಟಕಗಳು 'ರೂಪಾಂತರ'ಗೊಂಡವು. ರಾಜಧಾನಿಯಾಗಿದ್ದರಿಂದ ಹಲವು ಭಾಷೆಗಳ ಪರಿಚಯ ಜನರಿಗಾಗುತ್ತಿತ್ತು. ಅಲ್ಲದೆ ಆಧುನಿಕ ಶಿಕ್ಷಣ ಆಗಲೇ

ಎಲ್ಲಾಕಡೆ ಪ್ರವೇಶ ಪಡೆದಿತ್ತು. ಇದರಿಂದಾಗಿ ಇಂಗ್ಲಿಷ್ ಬಲ್ಲ ಮೈಸೂರಿನ ಲೇಖಕರು/'ರೂಪಾಂತರ'ಕಾರರು ಇಂಗ್ಲಿಷ್ ನಾಟಕಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವ ಪ್ರಯತ್ನ ಮಾಡಿದರು. ಇದೇ ರೀತಿ ಬೆಂಗಳೂರಿನಲ್ಲಿ ಮಿಶನರಿಗಳ ಚಟುವಟಿಕೆಗಳು ನಡೆಯುತ್ತಿದ್ದುದು ಹಾಗೂ ರಾಜಧಾನಿಗೆ ಹತ್ತಿರವಾಗಿದ್ದರಿಂದ ಇಲ್ಲಿ ಹೆಚ್ಚು ನಾಟಕಗಳು 'ರೂಪಾಂತರ'ಗೊಂಡಿರುವ ಸಾಧ್ಯತೆಯಿದೆ.

ಉತ್ತರ ಕರ್ನಾಟಕದ ಧಾರವಾಡದಂತಹ ಪ್ರದೇಶಗಳಿಗೆ ಮರಾಠಿ ಪ್ರಭಾವವಿತ್ತು. ಜೊತೆಗೆ ಮಿಶನರಿಗಳು ತಮ್ಮ ಕಾರ್ಯ ಚಟುವಟಿಕೆಗಳಿಗೆ ಧಾರವಾಡನ್ನು ಕೇಂದ್ರವಾಗಿರಿಸಿಕೊಂಡಿದ್ದರು. ಮರಾಠಿ ರಂಗಭೂಮಿಯ ಪರಿಚಯದೊಂದಿಗೆ ಆ ಭಾಷೆಯ ಪರಿಚಯವು ಇಲ್ಲಿಯ ಜನರಿಗಿತ್ತು. ಹೀಗಾಗಿ ರಂಗಭೂಮಿಗಾಗಿ ಮತ್ತು ಭಾಷೆಯ ದೃಷ್ಟಿಯಿಂದ ಕನ್ನಡಿನ ನಾಟಕಗಳು ಅಗತ್ಯ ಎನಿಸಿರಬೇಕು. ಹೀಗಾಗಿ ಕೆಲವರು ಮರಾಠಿ ಮೂಲದಿಂದ ಇಂಗ್ಲಿಷ್ ನಾಟಕಗಳನ್ನು ಕನ್ನಡದಲ್ಲಿ 'ರೂಪಾಂತರಿ'ಸಿಕೊಂಡರೆ ಇನ್ನೂ ಕೆಲವರು ಇಂಗ್ಲಿಷ್‌ನಿಂದ ನೇರವಾಗಿ ರೂಪಾಂತರಿಸಿಕೊಂಡರು. ''ಈ ಸಾಮಾಜಿಕ ನಾಟಕಗಳನ್ನು ಇನ್ನೂವರೆಗೆ ಮಹಾರಾಷ್ಟ್ರ ಭಾಷೆಯಲ್ಲಿ ಯಾರು ಬರೆದಿಲ್ಲ. ಆದುದರಿಂದ ಈ ನಾಟಕವು ಮಹಾರಾಷ್ಟ್ರ ಬಂಧುಗಳಿಗಿಂತ ಮುಂಚಿತವಾಗಿಯೇ ಕನ್ನಡ ಭಾಷೆಯಲ್ಲಿ ಬರೆಯು ಸುದೈವವು ನನಗೆ ಅಕಸ್ಮಾತಾಗಿ ಒದಗಿದ್ದರಿಂದ ನಾನು ತುಂಬಾ ಸಂತೋಷಪಟ್ಟು ಈ ನನ್ನ ಅಲ್ಪಕೃತಿಯನ್ನು ಕನ್ನಡ ವಾಚಕರಿಗೆ ಪ್ರೇಮಪೂರ್ವಕವಾಗಿ ಅರ್ಪಿಸುತ್ತೇನೆ'' (ಗದಗೆಯ್ಯ ಹೊನ್ನಾಪುರ ಮಠ, ೧೯೧೧, ಪ್ರಸ್ತಾವನೆ). ಇಲ್ಲಿನ ನಾಟಕಗಳು ರೂಪಾಂತರದ ಹಿಂದೆ ಮರಾಠಿ ಪ್ರಭಾವವೂ ಇದೆ; ಪೈಪೋಟಿಯೂ ಇದೆ. ಕನ್ನಡದ ಸಂದರ್ಭದಲ್ಲಿ ಆಧುನಿಕ ನಾಟಕಗಳನ್ನು ರೂಪಿಸಿಕೊಳ್ಳುವಾಗ ಮರಾಠಿ ರಂಗಭೂಮಿಯಿಂದ ಕನ್ನಡ ರಂಗಭೂಮಿ ಪ್ರಭಾವಿತಗೊಂಡಿದೆ. ಅಲ್ಲದೆ ಭಾಷೆ ಮತ್ತು ಪ್ರದೇಶಗಳ ಅಸ್ಮಿತೆಯ ಪ್ರಶ್ನೆ ಬಂದಾಗ ಮರಾಠಿ ಭಾಷೆಯು ಕನ್ನಡಿಗರಿಗೆ ಪೈಪೋಟಿ ಭಾಷೆಯೂ ಆಗಿತ್ತು ಎಂಬುದು 'ರೂಪಾಂತರ'ಕಾರರ ಅಭಿಪ್ರಾಯದಿಂದ ತಿಳಿಯುತ್ತದೆ. ಧಾರವಾಡದ ಸಾಂಸ್ಕೃತಿಕ ಪರಿಸರ ಈ 'ರೂಪಾಂತರ' ಚಟುವಟಿಕೆಗೆ ಪೂರಕವಾಗಿತ್ತು.

ಬಾಗಲಕೋಟೆಯಿಂದ ಬಂದ ಮೂರು ನಾಟಕಗಳು ಕೆರೂರರು 'ರೂಪಾಂತರಿಸಿ'ದ್ದೇ ಆಗಿದೆ. ಅವರು ಅಲ್ಲಿಯೇ ಬೆಳೆದಿದ್ದರಿಂದ ಹಾಗೂ ಧಾರವಾಡ ಪ್ರದೇಶದ ಸಂಪರ್ಕವನ್ನು ಹೊಂದಿದ್ದರು. ಅಲ್ಲಿದೆ ಮರಾಠಿ ಭಾಷೆ ಮತ್ತು ರಂಗಭೂಮಿಯ ಪ್ರಭಾವ ಈ ಪ್ರದೇಶದ ಮೇಲೆ ಆಗಿತ್ತು. ಹೀಗಾಗಿ ಇಲ್ಲಿಂದಲೇ 'ರೂಪಾಂತರ' ನಾಟಕಗಳು ಪ್ರಕಟಗೊಂಡಿವೆ.

ಆದರೆ ಕನ್ನಡ ಸಾಹಿತ್ಯಕ್ಕೆ ಮೊದಲ ಕಾದಂಬರಿ ನೀಡಿದ ಹಾಗೂ ಮೊದಲ ಭಾಷಾಂತರ ಕವನಗಳನ್ನು ಒದಗಿಸಿದ ಮಂಗಳೂರಿಂದ ಕೇವಲ ಒಂದೆರಡು 'ರೂಪಾಂತರ' ಕೃತಿಗಳು ಪ್ರಕಟಗೊಂಡಿರುವುದು ಕುತೂಹಲಕಾರಿಯಾಗಿದೆ. ಮೊದಲ ಮುದ್ರಣ ಯಂತ್ರ ಮತ್ತು ಮೊದಲ ಪತ್ರಿಕೆ ಸಹ ಇಲ್ಲಿಂದಲೇ ಪ್ರಕಟವಾಗಿದೆ. ಹಾಗೇ ಮೊದಲ ಸ್ವಾತಂತ್ರ ನಾಟಕ ನೀಡಿದ ಉತ್ತರ ಕನ್ನಡ/ಕಾರವಾರದಿಂದ ಯಾವೊಂದು ನಾಟಕವು 'ರೂಪಾಂತರ'ಗೊಂಡಿಲ್ಲ ಯಾಕೆ?. ನಾಟಕ ರಂಗಭೂಮಿಗೆ ಸಂಬಂಧಿಸಿದ ಪ್ರಕಾರವಾಗಿರುವುದು ಜೊತೆಗೆ ಕರಾವಳಿಯಲ್ಲಿ 'ಯಕ್ಷಗಾನ' ರಂಗಭೂಮಿ ಪರಂಪರೆ ಆಗಲೇ ಪ್ರಸಿದ್ಧಿ ಪಡೆದಿತ್ತು. ಶೇಕ್ಸ್‌ಪಿಯರ್‌ನ ನಾಟಕವನ್ನು ಯಕ್ಷಗಾನ ಪ್ರಸಂಗವಾಗಿಸಿ ಪ್ರದರ್ಶಿಸಿದ ಮಾಹಿತಿಗಳು

ದೊರೆಯುತ್ತವೆ.[೮] ಹೀಗಾಗಿ ಯಕ್ಷಗಾನದ ಪರಂಪರೆಯ ಎದುರಿಗೆ ನಾಟಕ ರಂಗಭೂಮಿ ಮತ್ತು ಕೃತಿಗಳ 'ರೂಪಾಂತರ' ಮುಖ್ಯವೆನಿಸದೆ ಇರಬಹುದು. ಹೀಗಾಗಿ ಕರಾವಳಿಯಿಂದ ಗಮನಾರ್ಹ ರೀತಿಯಲ್ಲಿ 'ರೂಪಾಂತರ'ಗಳು ನಡೆಯಲಿಲ್ಲ. ಅಲ್ಲದೆ ಜಾಗತೀಕರಣದ ಇಂದಿನ ಸಂದರ್ಭದಲ್ಲಿಯೂ ಯಕ್ಷಗಾನವು ಕೆಲವೊಂದು ಮಾರ್ಪಾಡುಗಳೊಂದಿಗೆ ಈಗಲೂ ಜನಮನ್ನಣೆಯನ್ನುಗಳಿಸುತ್ತಿದೆ. ಇವೆಲ್ಲವುಗಳಿಂದಾಗಿ ೧೯ನೇ ಶತಮಾನದ ಕೊನೆಯ ಮತ್ತು ೨೦ನೇ ಶತಮಾನದ ಮೊದಲ ದಶಕಗಳಲ್ಲಿ ನಾಟಕಗಳ 'ರೂಪಾಂತರ' ಅಗತ್ಯವೆನಿಸದೆ ಇರಬಹುದು. ಕರಾವಳಿಯಲ್ಲಿ ನಾಟಕಕ್ಕೆ ಪರ್ಯಾಯವಾಗಿ ಯಕ್ಷಗಾನ ರಂಗ ಪರಂಪರೆಯಿದ್ದುದರಿಂದ ನಾಟಕಗಳ 'ರೂಪಾಂತರ' ಅತಿ ಕಡಿಮೆ ಪ್ರಮಾಣದಲ್ಲಿ ನಡೆದಿದೆ.

ಹೀಗೆ ಕರ್ನಾಟಕದಲ್ಲಿನ ಬೇರೆ ಬೇರೆ ಪ್ರದೇಶಗಳ ಸಾಂಸ್ಕೃತಿಕ ಚಹರೆಗಳು, ಭಾಷೆ ಮತ್ತು ಪರ್ಯಾಯ ರಂಗಭೂಮಿಗಳ ಪ್ರಭಾವ, ರಾಜಕೀಯ ಆಡಳಿತ, ಮಿಶನರಿಗಳ ಚಟುವಟಿಕೆ ಮತ್ತು ಆಧುನಿಕ ಶಿಕ್ಷಣ ಇತ್ಯಾದಿಗಳ ಹಿನ್ನೆಲೆಯಿಂದಾಗಿ ಕೆಲವೊಂದು ಪ್ರದೇಶಗಳಲ್ಲಿ ಹೆಚ್ಚು ನಾಟಕಗಳು 'ರೂಪಾಂತರ'ಗೊಂಡರೆ ಇನ್ನೂ ಕೆಲವು ಪ್ರದೇಶಗಳಲ್ಲಿ ಕಡಿಮೆ ಪ್ರಮಾಣದಲ್ಲಿ ನಾಟಕಗಳು 'ರೂಪಾಂತರ'ಗೊಳ್ಳುವಂತಾಯಿತು.

### ೮.೧.೨. ರೂಪಾಂತರ ಪಠ್ಯಗಳು ಮತ್ತು ಮೂಲ ಲೇಖಕರು

ಆಧುನಿಕ ಶಿಕ್ಷಣದಿಂದ ಪರಿಚಯಗೊಂಡ ಇಂಗ್ಲಿಷ್‌ನ ಪ್ರಮುಖ ನಾಟಕಕಾರರ ನಾಟಕಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಮುಖ್ಯವಾಗಿ ಶೇಕ್ಸ್‌ಪಿಯರ್, ಗೋಲ್ಡ್‌ಸ್ಮಿತ್ ಮತ್ತು ಶೆರಿಡಿನ್ ಮುಂತಾದವರ ನಾಟಕಗಳ 'ರೂಪಾಂತರ'ಗಳು ಹೆಚ್ಚಾಗಿ ನಡೆದಿವೆ. ಮೂಲ ಲೇಖಕರ ನಾಟಕಕಾರ ಹಿನ್ನೆಲೆಯಲ್ಲಿ ಈ ಕೆಳಗಿನಂತೆ 'ರೂಪಾಂತರ' ಪಠ್ಯಗಳನ್ನು ವಿಂಗಡಿಸಿಕೊಳ್ಳಬಹುದು.

| ಕ್ರ.ಸಂ. | ಮೂಲ ಲೇಖಕರು | ರೂಪಾಂತರಗೊಂಡ ನಾಟಕಗಳ ಪ್ರಮಾಣ |
|---|---|---|
| ೧. | ಶೇಕ್ಸ್‌ಪಿಯರ್ | ೪೨ ರೂಪಾಂತರ (೧೭ ನಾಟಕ) |
| ೨. | ಗೋಲ್ಡ್‌ಸ್ಮಿತ್ ಅಲಿವರ್ | ೦೨ |
| ೩. | ಫಿಲ್ಡಿಂಗ್ ಹೆನ್ರಿ | ೦೧ |
| ೪. | ಟೆನಿಸನ್ ಅಲ್ಬರ್ಡ್ | ೦೧ |
| ೫. | ಶೆರಿಡನ್ ರಿಚರ್ಡ್ಸ್ ಬ್ರನಸ್ಲೇ | ೦೧ |
| ೬. | ಜಾನ್‌ಲುಬಾಕ್ | ೦೧ |

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಗೋಲ್ಡ್‌ಸ್ಮಿತ್‌ನ ಎರಡು ನಾಟಕಗಳು ಹಾಗೂ ಶೆರಿಡನ್, ಟೆನಿಸನ್, ಹೆನ್ರಿ ಮತ್ತು ಜಾನ್‌ಲುಬಾಕ್‌ರ ತಲಾ ಒಂದೊಂದು ನಾಟಕಗಳು ಕನ್ನಡಕ್ಕೆ ಬಂದರೆ, ಶೇಕ್ಸ್‌ಪಿಯರ್‌ನ ೧೭ ನಾಟಕಗಳು ೪೨ 'ರೂಪಾಂತರ' ಕಂಡಿರುವುದು ಗಮನಾರ್ಹವಾಗಿದೆ. ಇಂಗ್ಲಿಷ್ ನಾಟಕ ಸಾಮ್ರಾಜ್ಯದ ಅನಭಿಶಕ್ತ ದೊರೆಯೆನಿಸಿಕೊಂಡ ಈತ ಕನ್ನಡ 'ರೂಪಾಂತರ' ನಾಟಕಗಳ ಸಂದರ್ಭದಲ್ಲಿಯೂ ಗಮನೀಯ ಎನಿಸಿಕೊಂಡಿದ್ದಾನೆ.

ಕನ್ನಡದಲ್ಲಿ 'ರೂಪಾಂತರ'ಗೊಂಡ ಮೊದಲ ನಾಟಕ ಸಹ ಶೇಕ್ಸ್‌ಪಿಯರ್‌ನದೇ ಆಗಿದೆ. ೧೮೭೧ ರಿಂದ ಪ್ರಸ್ತುತ ಸಂದರ್ಭದಲ್ಲಿಯೂ ಶೇಕ್ಸ್‌ಪಿಯರ್‌ನ ನಾಟಕಗಳು ಮತ್ತೆ ಮತ್ತೆ ಕನ್ನಡಕ್ಕೆ ಬರುತ್ತಿವೆ. ಗಮನಿಸಬೇಕಾದ ಸಂಗತಿಯೆಂದರೆ, 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ಒಟ್ಟು 'ರೂಪಾಂತರ' ನಾಟಕಗಳಲ್ಲಿ ೯೮% ನಾಟಕಗಳ ಮೂಲ ಲೇಖಕ ಶೇಕ್ಸ್‌ಪಿಯರ್‌ನೇ ಆಗಿದ್ದಾನೆ!

ಕನ್ನಡದ ಸಂದರ್ಭದಲ್ಲಿ ಶೇಕ್ಸ್‌ಪಿಯರ್‌ನ ನಾಟಕಗಳು 'ರೂಪಾಂತರ'ಗೊಂಡಂತೆ ಇತರ ನಾಟಕಕಾರರ ನಾಟಕಗಳು ಏಕೆ 'ರೂಪಾಂತರ'ಗೊಳ್ಳಲಿಲ್ಲ ಎಂಬ ಪ್ರಶ್ನೆ ಸಹಜವಾದುದು. ಶೇಕ್ಸ್‌ಪಿಯರ್‌ನ ನಾಟಕಗಳು ಕನ್ನಡದಲ್ಲಿ ಹೆಚ್ಚಾಗಿ ಬರಲು ಕಾರಣವೆಂದರೆ, ಮೊದಲನೆಯದಾಗಿ ಕನ್ನಡದ (ಭಾರತೀಯ) ಓದುಗನಿಗೆ/ವಿದ್ಯಾವಂತ ಸಮುದಾಯಕ್ಕೆ ಶೇಕ್ಸ್‌ಪಿಯರ್‌ನ ನಾಟಕಗಳು ದೊರೆಯುತ್ತಿದ್ದವು. ''ಇಂಗ್ಲಿಷ್ ನಾಟಕಗಳ ಅನುವಾದವು ನಾಡಿನ ಉತ್ತರ, ದಕ್ಷಿಣಗಳಲ್ಲಿ ಏಕಕಾಲಕ್ಕೆ ಆರಂಭವಾಯಿತು. ಕಾಲೇಜು ಮಟ್ಟದಲ್ಲಿ ಇಂಗ್ಲಿಷ್ ಕಾವ್ಯ, ನಾಟಕಗಳ ಅಭ್ಯಾಸಕ್ಕೆ ವಿಶೇಷ ಅವಕಾಶವಿದ್ದುದು ಈ ನಾಟಕಾನುವಾದದ ಹಿನ್ನೆಲೆಯಾಗಿದೆ'' (ಹಾವನೂರ, ೨೦೦೦, ಪು ೪೧೪).

ಇದರಿಂದಾಗಿ ಶೇಕ್ಸ್‌ಪಿಯರ್‌ನ ಸಾಹಿತ್ಯ ಸ್ವರೂಪದಿಂದಾಗಿ, ನಾಟಕಗಳ ಕುರಿತು ಕುತೂಹಲ ಆಸಕ್ತಿಗಳು ಸಹಜವಾಗಿ ಬೆಳೆಯುವಂತಾಯಿತು. ಹೀಗೆ ಶಿಕ್ಷಣದ ಭಾಗವಾಗಿ ಪರಿಚಯಗೊಂಡ ಬಹುತೇಕ ನಾಟಕಗಳನ್ನು 'ರಂಗಪಠ್ಯ'ಗಳಾಗಿ 'ರೂಪಾಂತರಿಸಿ'ಕೊಳ್ಳುವ ಪ್ರಯತ್ನಗಳು ನಡೆದವು. ಜೊತೆಗೆ ''ಶೇಕ್ಸ್‌ಪಿಯರ್ ಕೃತಿಗಳು ಇಂಗ್ಲೆಂಡಿನಲ್ಲಿ ಪಠ್ಯವಾಗುವುದಕ್ಕಿಂತ ಮುಂಚೆ ಭಾರತೀಯ ಶಾಲಾ ಕಾಲೇಜುಗಳಲ್ಲಿ ಪಠ್ಯಗಳಾದದ್ದು ಚಾರಿತ್ರಿಕ ಸತ್ಯ'' (ಬೀಚನಹಳ್ಳಿ, ೨೦೦೦, ಪ್ರಸ್ತಾವನೆ). ಇವೆಲ್ಲವುಕ್ಕಿಂತ ಮುಖ್ಯವಾಗಿ ಶೇಕ್ಸ್‌ಪಿಯರ್‌ನ ನಾಟಕಗಳಲ್ಲಿನ ಸಾಮಾಜಿಕ, ಸಾಂಸ್ಕೃತಿಕ ಗುಣ ವಿಶೇಷ ಸಹ ಭಾರತೀಯ ಸಂದರ್ಭಕ್ಕೆ ಆಪ್ತವಾದುದರಿಂದ ಹಾಗೂ ಆ ಮೂಲಕ ದೇಶೀಯ ಅಲೋಚನೆಗಳನ್ನು ರೂಪಿಸಿಕೊಳ್ಳಲು ಪೂರಕವೆನಿಸಿದ್ದರಿಂದ ಶೇಕ್ಸ್‌ಪಿಯರ್‌ನ ನಾಟಕಗಳು ಭಾರತೀಯ ಭಾಷೆಗಳಲ್ಲಿ ಹೆಚ್ಚೆಚ್ಚು 'ರೂಪಾಂತರ'ಗೊಂಡಿರುವ ಸಾಧ್ಯತೆಯಿದೆ.

ಹೀಗೆ ಮೂಲ ಲೇಖಕರ ಹಿನ್ನೆಲೆಯಲ್ಲಿ 'ರೂಪಾಂತರ' ನಾಟಕಗಳನ್ನು ಗಮನಿಸಿದಾಗ ಹಲವು ಅಂಶಗಳು ಬೆಳಕಿಗೆ ಬರುತ್ತದೆ. ಶೇಕ್ಸ್‌ಪಿಯರ್‌ನ ನಾಟಕಗಳು ಕನ್ನಡಕ್ಕೆ ಬಂದಂತೆ ಇತರ ನಾಟಕಕಾರರ ನಾಟಕಗಳು ಕನ್ನಡಕ್ಕೆ ಬರದಿರಲು ಕಾರಣವೆನೆಂದರೆ, ''ಪ್ರತಿ ಜನಾಂಗ, ಬದಲಾದ ಆಸಕ್ತಿ, ಸಂವೇದನೆಗಳ ಹಿನ್ನೆಲೆಯಲ್ಲಿ ಹೊಸದಾಗಿ ಅರ್ಥೈಸಿಕೊಳ್ಳುವಷ್ಟು ಅವನ ಕೃತಿಗಳು ಶ್ರೀಮಂತವಾಗಿವೆ. ಪುರಾಣ ಲೋಕ ಸೃಷ್ಟಿಸಿರುವ ಅವನ ನಾಟಕಗಳ ಬರವಣಿಗೆ ಸಂಸ್ಕೃತ ಮತ್ತು ಭಾರತೀಯ ಭಾಷೆಗಳ ಬರವಣಿಗೆ ಕ್ರಮಕ್ಕೆ ಹತ್ತಿರವಾದದ್ದು ಅವನ ಬಗೆಗಿನ ನಮ್ಮ ವಿಶೇಷ ಆಕರ್ಷಣೆಗೆ ಕಾರಣವಾಗಿರಬಹುದು'' (ರಾಮಚಂದ್ರದೇವ, ೧೯೯೩, ಪು. ೨). ಜೊತೆಗೆ ಶಿಕ್ಷಣದ ಭಾಗವಾಗಿ ಶೇಕ್ಸ್‌ಪಿಯರ್‌ನ ನಾಟಕಗಳು ಹೆಚ್ಚಾಗಿ ಲಭ್ಯವಿರುವುದರಿಂದ ನಾಟಕಗಳ ಹೆಚ್ಚು 'ರೂಪಾಂತರ'ಗೊಳ್ಳುವಂತಾಯಿತು. ಈ ರೀತಿಯಲ್ಲಿ ಶೇಕ್ಸ್‌ಪಿಯರ್‌ನ ಸಾಹಿತ್ಯದ ಸ್ವರೂಪ, ಪಠ್ಯದ ಲಭ್ಯವಾಗುವಿಕೆ, ಭಾರತೀಯ ಸಂದರ್ಭ ಮತ್ತು 'ರೂಪಾಂತರ'ಕಾರರ ಆಸಕ್ತಿ ಇತ್ಯಾದಿಗಳ ಹಿನ್ನೆಲೆಯಿಂದಾಗಿ ಈತನ ನಾಟಕಗಳು ಇತರ ನಾಟಕಕಾರರ ನಾಟಕಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ 'ರೂಪಾಂತರ'ಗೊಂಡವು/ರೂಪಾಂತರಿಸಿಕೊಳ್ಳಲಾಯಿತು.

### ೮.೧.೩. ರೂಪಾಂತರ ಪಠ್ಯಗಳು ಮತ್ತು ರೂಪಾಂತರಕಾರರು

೧೮೫೦ ರಿಂದ ೧೯೨೦ರ ಏಳುದಶಕಗಳ ಅವಧಿಯಲ್ಲಿ ಕನ್ನಡದ ಹಲವು ಲೇಖಕರು ಹಲವಾರು ನಾಟಕಗಳನ್ನು ಕನ್ನಡಕ್ಕೆ 'ರೂಪಾಂತರಿಸಿ'ಕೊಂಡಿದ್ದಾರೆ. ಮೂಲ ನಾಟಕಕಾರರ ಹಿನ್ನೆಲೆಯಲ್ಲಿ ನಾಟಕಗಳನ್ನು ವಿಂಗಡಿಸಿಕೊಂಡಂತೆ 'ರೂಪಾಂತರ'ಕಾರರ ಹಿನ್ನೆಲೆಯಲ್ಲಿಯೂ ನಾಟಕಗಳನ್ನು ವಿಂಗಡಿಸಿ ಚರ್ಚಿಸಬಹುದು. 'ರೂಪಾಂತರ'ಕಾರರ ಇನ್ನಿತರ ಚಟುವಟಿಕೆಗಳೊಂದಿಗೆ ರೂಪಾಂತರ ಪ್ರಕ್ರಿಯೆಯನ್ನು ಗಮನಿಸುವುದು ಸೂಕ್ತವಾಗಿದೆ.

| ಕ್ರ.ಸಂ. | ರೂಪಾಂತರಕಾರರು | ರೂಪಾಂತರ ಪಠ್ಯಗಳ ಸಂಖ್ಯೆ |
|---|---|---|
| ೧. | ಅಣ್ಣಾಜಿರಾವ್ ಎಂ.ಆರ್ | ೦೪ |
| ೨. | ವಾಸುದೇವಚಾರ್ಯ ಕೆರೂರು | ೦೩ |
| ೩. | ಗದಗೆಯ್ಯ ಹೊನ್ನಾಪುರ ಮಠ | ೦೨ |
| ೪. | ಶ್ರೀಕಂಠಶಾಸ್ತ್ರಿ ನಂಜನಗೂಡು | ೦೨ |
| ೫. | ಪುಟ್ಟಣ್ಣ ಎಂ.ಎಸ್. | ೦೨ |
| ೬. | ಶ್ರೀಕಂಠೇಶಗೌಡ | ೦೨ |
| ೭. | ಬಾಪು ಸುಬ್ಬರಾವ್ | ೦೨ |
| ೮. | ಆನಂದರಾವ್ ಎ. | ೦೨ |
| ೯. | ಸೋಮನಾಥಯ್ಯ ಬೆಲ್ಲವ | ೦೨ |
| ೧೦ | ಗುಂಡಪ್ಪ ಡಿ.ವಿ. | ೦೧ |
| ೧೧. | ಬಸಪ್ಪಶಾಸ್ತ್ರಿ | ೦೧ |
| ೧೨. | ಕೃಷ್ಣರಾವ್ ಹನುಮಂತ | ೦೧ |
| ೧೩. | ಗುಂಡೋ ಕೃಷ್ಣ ಚುರಮುರಿ | ೦೧ |
| ೧೪. | ಚನ್ನಬಸಪ್ಪ ಬಸವಲಿಂಗಪ್ಪ ಡೆಪ್ಯೂಟಿ | ೦೧ |
| ೧೫. | ತಿರುಮಲೆ ತಾತಾಚಾರ್ಯ | ೦೧ |
| ೧೬. | ನರಸಿಂಹಾಚಾರ್ ಎಸ್.ಜಿ. | ೦೧ |
| ೧೭. | ನರಹರಯ್ಯ ಎಸ್.ಎನ್. | ೦೧ |
| ೧೮. | ನರಹರಿ ಜಯರಾಯಾಚಾರ್ಯ | ೦೧ |
| ೧೯. | ಭೀಮರಾವ್ ವೆಂಕಟೇಶ | ೦೧ |

೨೦. ಮಲ್ಲಪ್ಪ ನಂಜಪ್ಪ ೦೧

೨೧. ರಾವ್ ಎಂ.ಎ. ೦೧

೨೨. ಲಕ್ಷ್ಮಣರಾವ್ ಕೆ. ೦೧

೨೩. ವೇದಮಿತ್ರ ಪಿ. ೦೧

೨೪. ವೆಂಕಟರಾಜ ಬಿಡಂಗನವಿಲೆ ೦೧

೨೫. ರಂಗಾಚಾರ್ಯ ಮುದಗಲ್ ೦೧

೨೬. ವೆಂಕಟಾಚಾರ್ಯ ಬಿ. ೦೧

೨೭. ಶ್ರೀರಾಮ್ ೦೧

೨೮. ಹನುಮಂತರಾವ್ ಗೋವಿಂದರಾವ್ ದೇಶಪಾಂಡೆ ೦೧

೨೯. ವರದಾಚಾರ್ ಎ.ವಿ. ೦೧

೩೦. ಅನಾಮಿಕ ರೂಪಾಂತರಕಾರರಿಂದ ೦೬

'ಇಂಗ್ಲಿಷ್ ಗೀತಗಳು' ಪೂರ್ವದ ಬಹುತೇಕ 'ರೂಪಾಂತರ'ಕಾರರು ಒಂದೊಂದೆ ನಾಟಕಗಳನ್ನು 'ರೂಪಾಂತರಿಸಿ'ದರೆ ಕೆಲವೇ 'ರೂಪಾಂತರ'ಕಾರರು ೨,೩ ನಾಟಕಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ಹೆಚ್ಚು ಅಂದರೆ ನಾಲ್ಕು ಕೃತಿಗಳನ್ನು ರೂಪಾಂತರಿಸಿದವರು ಅಣ್ಣಾಜಿರಾವ್ ಒಬ್ಬರೆ. ಉಳಿದಂತೆ ಕೆರೂರರು ಮೂರು ನಾಟಕಗಳನ್ನು ಹಾಗೂ ಪುಟ್ಟಣ್ಣ ಎ.ಎಸ್, ಶ್ರೀಕಂಠೇಶಗೌಡ, ಶ್ರೀಕಂಠಶಾಸ್ತ್ರಿ ನಂಜನಗೂಡು, ಹೊನ್ನಾಪುರ ಮಠ, ಬಾಪು ಸುಬ್ಬರಾವ್ ಮತ್ತು ಆನಂದರಾವ್ ಮುಂತಾದವರು ತಲಾ ಎರಡೆರಡು ನಾಟಕಗಳನ್ನು ಕನ್ನಡದಲ್ಲಿ ರೂಪಿಸಿಕೊಂಡಿದ್ದಾರೆ. ಹಾಗೆಯೇ ಸುಮಾರು ೬ ನಾಟಕಗಳ 'ರೂಪಾಂತರ'ಕಾರರು ಯಾರು ಎನ್ನುವ ಕುರಿತು ಮಾಹಿತಿ ಇಲ್ಲ. 'ರೂಪಾಂತರ' ನಾಟಕಗಳ ಸಮಗ್ರ ಪಟ್ಟಿಯನ್ನು ಅನುಬಂಧ ೭ರಲ್ಲಿ ಗಮನಿಸಬಹುದು.

ತಾವು ಯಾಕಾಗಿ ನಾಟಕಗಳನ್ನು ಕನ್ನಡಿಸಿದೆವು ಎಂಬುದರ ಕುರಿತು ಹಲವು 'ರೂಪಾಂತರ'ಕಾರರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಡಿ.ವಿ.ಜಿ., ಶ್ರೀಕಂಠಶಾಸ್ತ್ರಿ ನಂಜನಗೂಡು ಮುಂತಾದವರಿಗೆ ಇಂಗ್ಲಿಷ್ ನಾಟಕಗಳಲ್ಲಿನ ನೈತಿಕತೆ, ನೀತಿ ಇತ್ಯಾದಿಗಳನ್ನು ಕನ್ನಡದ ಓದುಗನಿಗೆ ಮತ್ತು ನೋಡುಗನಿಗೆ ತಿಳಿಸಬೇಕೆಂಬ ಉದ್ದೇಶವಿದೆ. ಈ ಕಾರಣದಿಂದಲೇ ತಾವು 'ರೂಪಾಂತರಿಸಿ'ದೆವು ಎಂದು ಮುನ್ನುಡಿಗಳಲ್ಲಿ ಹೇಳಿಕೊಂಡಿದ್ದಾರೆ. ಆದರೆ ಅಣ್ಣಾಜಿರಾವ್ ಅವರ 'ರೂಪಾಂತರ' ಚಟುವಟಿಕೆಯ ಹಿಂದಿನ ಉದ್ದೇಶವೆ ಬೇರೆ. ''ಭರತ ಖಂಡದಲ್ಲಿ ಪಾಶ್ಚಿಮಾತ್ಯರ ರಾಜಾಡಳಿತದ ನಿಬಂಧನೆಗಳು ನೆಲೆಗೊಂಡಹಾಗೆಲ್ಲ ಧನ ಮಾನ ಪ್ರಾಣಗಳಿಗೆ ಕ್ಷೇಮವು ಪ್ರಜಾಹಿತೈಕ ಸಾಂಕುಶಪ್ರಭುತ್ವವು ಸ್ಥಿರಪಟ್ಟಂತೆ ಅವರ ವಿದ್ಯೆಯನ್ನು ನಮ್ಮ ದೇಶ ಭಾಷೆಗಳೊಂದಿಗೆ ಅಭ್ಯಾಸ ಮಾಡುವಲ್ಲಿ ಆ ಅಪರಧಿಕ ದೇಶದ ಕವಿಗಳ ಅಭಿಪ್ರಾಯಗಳನ್ನು ನಮ್ಮ ದೇಶ ಭಾಷೆಯಲ್ಲಿ ಅಸ್ಮದ್ದೇಶಿಯರ ತಿಳುವಳಿಕೆಯ ಬಗ್ಗೆ ಭಾಷಾಂತರಿಸಬೇಕೆಂಬ ಅಭಿಲಾಷೆ ಹುಟ್ಟಿತು'' (ಅಣ್ಣಾಜಿರಾವ್, ೧೯೦೦, ಉಪೋದ್ಘಾತ ಪು.೨). ಅಂದರೆ,

ಪಶ್ಚಿಮದವರ ಆಡಳಿತದಿಂದ ದೇಶ ಸುಭಿಕ್ಷವಾಗಿದೆ. ಅವರ ವಿದ್ಯೆಯನ್ನು ಸ್ಥಳೀಯರು ಪಡೆಯಬೇಕು. ಹೀಗಾಗಿ ಅಲ್ಲಿನ ಕವಿಗಳ ಅಭಿಪ್ರಾಯವನ್ನು ಕನ್ನಡಿಗರಿಗೆ ತಿಳಿಸಲು ಭಾಷಾಂತರ ಮಾಡಿದೆ ಎಂದಿದ್ದಾರೆ.

ಇದೇ ರೀತಿಯಲ್ಲಿ ತಿಳುವಳಿಕೆ ನೀಡಬೇಕು ಅಥವಾ ಇಂಗ್ಲಿಷ್ ಜನರ ವ್ಯವಹಾರಗಳು ಕನ್ನಡಿಗರಿಗೆ ಗೊತ್ತಾಗಬೇಕು ಎಂಬ ಉದ್ದೇಶದಿಂದ ಭಾಷಾಂತರ ಮಾಡಿರುವ ಕುರಿತು ಬಸವಪ್ಪಶಾಸ್ತ್ರಿಗಳು ತಮ್ಮ 'ಶೂರಸೇನ ಚರಿತ್ರೆ' (೧೮೮೫)ಯ ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ಅಂತೆಯೇ ಎಂ.ಎಸ್. ಪುಟ್ಟಣ್ಣನವರು ತಾವು ಯಾಕಾಗಿ ಇಂಗ್ಲಿಷಿನ ಕೃತಿಯನ್ನು ಕನ್ನಡಿಸಿದೆ ಎಂದರೆ, ''ಈ ನಾಟಕದಲ್ಲಿ ತೋರಿಸುವ ಜಗದ್ವಿಲಕ್ಷಣವಾದ ಬುದ್ಧಿಯನ್ನು ಕೌಶಲ್ಯವನ್ನು ನಮ್ಮ ಕನ್ನಡಿಗರು ತಿಳಿದುಕೊಳ್ಳಲೂ ಸ್ವಲ್ಪ ಮಟ್ಟಿಗಾದರೂ ಅನುಕೂಲಪಡಿಸಿಕೊಡಬೇಕೆಂದು ನನಗೆ ಆಶೆ ಹುಟ್ಟಿತು'' (ಪುಟ್ಟಣ್ಣ, ೧೮೮೯, ಪೀಠಿಕೆ ೧). ಹೀಗಾಗಿಯೆ ಕನ್ನಡಿಸಿದೆ ಎಂದಿದ್ದಾರೆ.

ಇನ್ನೂ ಕೆಲವು 'ರೂಪಾಂತರ'ಕಾರರು ರಂಗಭೂಮಿ ಮತ್ತು ಮನರಂಜನೆಯ ದೃಷ್ಟಿಯಿಂದ 'ರೂಪಾಂತರ' ಮಾಡಿದ್ದಾರೆ. ಉದಾಹರಣೆಗೆ 'ತ್ರಾಟಿಕಾನಾಟಕ' (೧೯೨೦)ವನ್ನು ರೂಪಾಂತರಿಸಿದ ಹೊನ್ನಾಪುರ ಮಠ ಅವರು ''ಮೂಲ ನಾಟಕದ ಆಧಾರದಿಂದ ಕನ್ನಡಿಗರಿಗೂ ಕನ್ನಡ ರಂಗಭೂಮಿಗೂ ಸರಿಯಾಗುವಂತೆ ರೂಪಾಂತರವನ್ನು ಮಾಡಿರುತ್ತೇನೆ'' (ಹೊನ್ನೂರುಮಠ, ೧೯೨೦, ಪ್ರಸ್ತಾವನೆ) ಎಂದಿದ್ದಾರೆ.

ಹಾಗೆಯೇ ಆನಂದರಾವ್ ಅವರು ಶೇಕ್ಸ್‌ಪಿಯರ್‌ನಂಥ ಪ್ರಖ್ಯಾತ ನಾಟಕಕಾರನ ಕೆಲವೊಂದು ನಾಟಕಗಳನ್ನು 'ಕರ್ಣಾಟ ಭಾಷಾಂತರ' ಮಾಡಿ ಆಡುವುದಕ್ಕೆ ಉಪಯೋಗಿಸಿದರೆ ಜನರಿಗೆ ಆನಂದ, ಮನರಂಜನೆ ದೊರೆಯಬಹುದೆಂದು 'ರೂಪಾಂತರ'ವನ್ನು ಕೈಗೊಂಡಿದ್ದರು.

ಹೀಗೆ ಪಶ್ಚಿಮದ ನಾಟಕಗಳನ್ನು ಕನ್ನಡದ ಸನ್ನಿವೇಶದಲ್ಲಿ ಪರಿಚಯಿಸುವ, ರಂಗಭೂಮಿಗಾಗಿ ಸಿದ್ಧಗೊಳಿಸುವ, ವಿದ್ಯಾರ್ಥಿಗಳಿಗೆ ಒದಗಿಸುವ, ಕೊರತೆಯನ್ನು ತುಂಬುವ ಹಾಗೂ ನೀತಿಯನ್ನು ಹೇಳುವುದರೊಂದಿಗೆ ಇಂಗ್ಲಿಷ್ ನಾಟಕಗಳನ್ನು ಕನ್ನಡದಲ್ಲಿ ನೋಡಲು ಮತ್ತು ಓದಲು ದೊರೆಯಲಿ ಎಂಬ ಹಲವಾರು ಉದ್ದೇಶಗಳಿಂದ 'ರೂಪಾಂತರ'ಗಳು ನಡೆದಿವೆ.

ಇಲ್ಲಿನ ಬಹುತೇಕ 'ರೂಪಾಂತರ'ಕಾರರು ಬೇರೆ ಸಾಹಿತ್ಯಕ ಗುರುತುಗಳನ್ನು ಹೊಂದಿದ್ದಾರೆ. ಅಲ್ಲದೆ 'ಇಂಗ್ಲಿಷ್ ಗೀತಗಳು' ನಂತರದ ಕಾಲದಲ್ಲಿಯೂ ತಮ್ಮ 'ರೂಪಾಂತರ'/ಭಾಷಾಂತರ ಚಟುವಟಿಕೆಯನ್ನು ಮುಂದುವರಿಸಿದ್ದಾರೆ. ಉದಾಹರಣೆಗೆ ಆ ನಂತರದಲ್ಲಿ ಕೆರೂರರು 'ಪತಿವಶೀಕರಣ'ವೆಂಬ 'ರೂಪಾಂತರ' ನಾಟಕವನ್ನು ಹಾಗೂ ಡಿ.ವಿ.ಜಿ.ಯವರು 'ಮ್ಯಾಕಬೆತ್'ನ್ನು ಭಾಷಾಂತರಿಸಿಕೊಂಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕೆರೂರು, ಡಿ.ವಿ.ಜಿ, ಚರುಮುರಿ, ಪುಟ್ಟಣ್ಣ ಮುಂತಾದವರು ಸ್ವತಂತ್ರ ರಚನೆಗಳನ್ನು ಮಾಡಿದ್ದಾರೆ. ಕೆರೂರರು ಕಥಾ ಸಾಹಿತ್ಯದಲ್ಲಿಯೂ ಕೃಷಿ ಮಾಡಿದ್ದಾರೆ. ಕನ್ನಡದ ಆರಂಭಿಕ ಕತೆಗಾರರಲ್ಲಿ ಇವರು ಪ್ರಮುಖರು, ಇವರ 'ಮಲ್ಲೇಶಿಯರ ನಲ್ಲೆಯರು', 'ತೊಳೆದ ಮುತ್ತು' ಗಮನಾರ್ಹವಾದವು. ಡಿ.ವಿ.ಜಿ.ಯನರು ಸ್ವತಂತ್ರ ನಾಟಕ ಹಾಗೂ ಕಾವ್ಯ ಮತ್ತು ಸಾಹಿತ್ಯಕ ಲೇಖನಗಳೊಂದಿಗೆ ಮಂಕುತಿಮ್ಮನ ಕಗ್ಗದ ಮೂಲಕ ಗುರುತುಗೊಂಡವರಾಗಿದ್ದಾರೆ.

ಇನ್ನೂ ಚುರಮುರಿಯವರು ಸ್ವತಂತ್ರ ನಾಟಕಗಳನ್ನು ಹಾಗೂ ಭಾರತೀಯ ಭಾಷೆಗಳ ಕೃತಿಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಮಾಡಿದರೆ. ಎಂ.ಎಸ್. ಪುಟ್ಟಣ್ಣನವರು ಕಾದಂಬರಿ ಸಾಹಿತ್ಯದ ಮೂಲಕ ಹೆಚ್ಚು ಚರ್ಚೆಗೆ ಒಳಗಾಗಿದ್ದಾರೆ.

ನಂಜನಗೂಡಿನ ಶ್ರೀಕಂಠಶಾಸ್ತ್ರಿ ಮತ್ತು ಬಸವಪ್ಪಶಾಸ್ತ್ರಿ, ತಿರುಮಲೆ ತಾತಾಚಾರ್ಯರು ಭಾರತೀಯ ಇತರ ಭಾಷೆಗಳ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವುದರೊಂದಿಗೆ ಸ್ವತಂತ್ರ ನಾಟಕಗಳನ್ನು ರಚಿಸಿದ್ದಾರೆ. ಶ್ರೀಕಂಠಶಾಸ್ತ್ರಿ ನಂಜನಗೂಡ ಅವರು ತೆಲುಗಿನ ಅನೇಕ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿರುವುದರ ಜೊತೆಗೆ ಹಲವಾರು ಸ್ವತಂತ್ರ ನಾಟಕಗಳನ್ನು ರಚಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಶಾಲಾ ಪಠ್ಯಪುಸ್ತಕವನ್ನು ರಚಿಸಿರುವುದಲ್ಲದೆ ಸಂಸ್ಕೃತ 'ಶಾಕುಂತಲ'ದ ಭಾಷಾಂತರದಿಂದ ಜನ ಮನ್ನಣೆ ಪಡೆದವರು, ತಾತಾಚಾರ್ಯರು ಸಹ ಕೆಲವು ಸ್ವತಂತ್ರ ನಾಟಕಗಳನ್ನು ರಚಿಸಿರುವರು.

ಈ ಕಾಲಾವಧಿಯಲ್ಲಿ ಇಂಗ್ಲಿಷ್‌ನ ನಾಟಕಗಳನ್ನು ಕನ್ನಡಕ್ಕೆ 'ರೂಪಾಂತರಿಸಿ'ಕೊಂಡ ಅನೇಕರು ಸ್ವಂತಂತ್ರ ನಾಟಕಕಾರರ ಚಹರೆಯನ್ನು ಹೊಂದಿದವರಾಗಿದ್ದಾರೆ. ಅವರೆಂದರೆ ಬಾಪು ಸುಬ್ಬರಾವ್, ಸೋಮನಾಥಯ್ಯ ಬೆಲ್ಲವ, ನರಹರಯ್ಯ ಎಸ್.ಎನ್, ವೇದಮಿತ್ರ ಪಿ, ಮಲ್ಲಪ್ಪ ನಂಜಪ್ಪ, ವೆಂಕಟರಾಜ ಬಿಡಂಗನವಿಲೆ ಮತ್ತು ಹನುಮಂತರಾವ್ ಗೋವಿಂದರಾಜ್ ದೇಶಪಾಂಡೆ ಮುಂತಾದವರು. ನರಹರಯ್ಯ ಎಸ್.ಎನ್, 'ಚಂದ್ರಿಕಾ ವಿಜಯಂ' (೧೯೧೫), ಲಕ್ಷ್ಮಣರಾವ್ ಅವರ 'ಪ್ರಿಯಭಾರ್ಯೆ' (೧೯೧೫) ಮತ್ತು ಹೊನ್ನಾಪುರ ಮಠ ಅವರ 'ವೀರವಿಧುಲಾ' (೧೯೧೫) ಹೀಗೆ ಹಲವರು ಸ್ವತಂತ್ರ ನಾಟಕಗಳನ್ನು ರಚಿಸಿದ್ದಾರೆ. ಬಿ.ವಿ. ವೆಂಕಟಾಚಾರ್ಯ ಅವರು ಕೇವಲ 'ರೂಪಾಂತರ'ಕಾರರಾಗಿರದೆ ಬಂಗಾಳಿಯ ಹಲವು ಕಾದಂಬರಿಗಳನ್ನು ಕನ್ನಡದಲ್ಲಿ ರೂಪಿಸಿಕೊಂಡಿರುವರು.

ವರದಾಚಾರ್ ಬಿ, ರಂಗಾಚಾರ್ಯ ಮುದಗಲ್, ನರಹರಿ ಜಯರಾಮಾಚಾರ್ಯ, ಕೃಷ್ಣರಾವ್ ಹನುಮಂತ ಮುಂತಾದವರು ಅಂದಿನ ರಂಗಭೂಮಿ ಚಟುವಟಿಕೆಯಲ್ಲಿ ತೊಡಗಿಕೊಂಡ ಪ್ರಮುಖರಾಗಿದ್ದಾರೆ. ತಮ್ಮ ರಂಗಭೂಮಿ ಚಟುವಟಿಕೆಯ ಭಾಗವಾಗಿ ಈ 'ರೂಪಾಂತರ' ಕೆಲಸವನ್ನು ನಿರ್ವಹಿಸಿದ್ದಾರೆ. ರಂಗಭೂಮಿ ಆಗತಾನೆ ರೂಪುಗೊಳ್ಳುತ್ತಿದ್ದರಿಂದ ನಾಟಕಗಳು ಅಗತ್ಯವಾಗಿತ್ತು. ಈ ಅಗತ್ಯಕೂಡ 'ರೂಪಾಂತರ' ಪ್ರಕ್ರಿಯೆಗೆ ಪ್ರೇರಣೆಯಾಗಿದೆ.

ಹೀಗೆ ಬಿ.ಎಂ.ಶ್ರೀಯವರ ರೂಪಾಂತರಕಾರರಿಗೆ ಆ ಗುರುತಿನೊಂದಿಗೆ ಇನ್ನಿತರ ಸಾಹಿತ್ಯಿಕ, ರಂಗಭೂಮಿಯ ಚಹರೆಗಳಿರುವುದು ಗಮನಾರ್ಹವಾಗಿದೆ. ೧೯೨೦ರ ನಂತರದಲ್ಲಿಯೂ ಕೆಲವರು ತಮ್ಮ 'ರೂಪಾಂತರ' ಚಟುವಟಿಕೆಯನ್ನು ಮುಂದುವರಿಸಿದರೆ, ಹಲವರು ಇನ್ನಿತರ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಇದರಿಂದ ಕಂಡುಕೊಳ್ಳಬಹುದಾದ ಸಂಗತಿಯೆಂದರೆ, 'ರೂಪಾಂತರ'ಕಾರರು ಇನ್ನಿತರ ಚಹರೆ ಗುರುತನ್ನು ಸಹ ಹೊಂದಿದ್ದರು ಎಂಬುದು.

**೮.೧.೪ ರೂಪಾಂತರ ಪಠ್ಯಗಳು ಮತ್ತು ಶೀರ್ಷಿಕೆಗಳು.**

'ರೂಪಾಂತರ' ನಾಟಕಗಳನ್ನು 'ರೂಪಾಂತರ'ಕಾರರ ಮತ್ತು ಮೂಲ ಲೇಖಕರ ಹಿನ್ನಲೆಯಲ್ಲಿ ವಿಂಗಡಿಸಿಕೊಂಡಿರುವಂತೆ ಶೀರ್ಷಿಕೆಗಳ ಹಿನ್ನೆಲೆಯಲ್ಲಿಯೂ ವಿಂಗಡಿಸಿಕೊಳ್ಳಬಹುದು.

**ಅ. ನಾಯಕ ಕೇಂದ್ರಿತ ಶೀಷಿಕೆಗಳು** (ಮೂಲ ಶೀರ್ಷಿಕೆಗಳು)

| | |
|---|---|
| ೧. ರಾಘುವೇಂದ್ರರಾವ್ ನಾಟಕ | Othello |
| ೨. ಕುಸುಮಾಕರ | The Two Gentlmen of verona |
| ೩. ಶೂರಸೇನ ಚರಿತ್ರೆ | Othello |
| ೪. ಜಯಸಿಂಹರಾಜ ಚರಿತೆ | Cymbeline |
| ೫. ಪ್ರತಾಪರುದ್ರದೇವ | Macbeth |

ಈ ಎಲ್ಲಾ ನಾಟಕಗಳು ಮೂಲದಲ್ಲಿ ನಾಯಕ ಕೇಂದ್ರಿತ ಶೀರ್ಷಿಕೆಯನ್ನೇ ಹೊಂದಿರುವವು. ಆದರೆ ಕನ್ನಡಕ್ಕೆ ಬರುವಾಗ ಶೀರ್ಷಿಕೆಗಳ ನೇರ ಭಾಷಾಂತರ ನಡೆಯದೆ, ಕನ್ನಡದ, ಭಾರತದ ಸಂದರ್ಭದಲ್ಲಿ ಪರಿಚಿತವಾದ ವ್ಯಕ್ತಿಗಳ ಹೆಸರುಗಳ ಹಿನ್ನೆಲೆಯೇ 'ರೂಪಾಂತರ' ನಡೆದಿದೆ. ಇದು ನಾಟಕಗಳನ್ನು ಕನ್ನಡದ ಸಂದರ್ಭಕ್ಕೆ ಹೊಂದಿಸುವ ಪ್ರಯತ್ನವೂ ಆಗಿದೆ.

**ಆ. ಮೋಜಿನ/ನಾಟಕೀಯ ಶೀರ್ಷಿಕೆಗಳು.**

| | |
|---|---|
| ೧. ಮೊಂಡ ಗಂಡ ತುಂಟ ಹೆಂಡತಿ, | Taming of the Shrew |
| ೨. ಮುದಕ ಗಂಡ ಚಿಕ್ಕ ಹೆಂಡತಿ | The School for Scandal |
| ೩. ಪ್ರೇಪಿತ ಪ್ರಿಯ ಸಮಾಗಮ | The Hermit |
| ೪. ಚಂಡಿಮದಮರ್ಧನ ನಾಟಕ | Taming of the Shrew |
| ೫. ಗಯ್ಯಾಳಿಯನ್ನು ಸಾಧುಮಾಡುವಿಕೆ | Taming of the Shrew |

ಈ ಮೇಲಿನ ನಾಟಕಗಳು ಮೋಜಿನ ಶೀರ್ಷಿಕೆಗಳ ಮೂಲಕ ಕನ್ನಡದಲ್ಲಿ 'ರೂಪಾಂತರ'ಗೊಂಡಿವೆ. ಇಂಗ್ಲಿಷ್ ಗೀತಗಳು ಪೂರ್ವದ ನಾಟಕಗಳ 'ರೂಪಾಂತರ' ರಂಗಭೂಮಿಯ ಅಗತ್ಯಕ್ಕಾಗಿಯೂ ನಡೆಯುತ್ತಿದ್ದರಿಂದ 'ರಂಗ ರೂಪಾಂತರ'ಗಳೂ ನಡೆದವು. ಹೀಗಾಗಿ ಪ್ರೇಕ್ಷಕರನ್ನು ಆಕರ್ಷಿಸುವ ದೃಷ್ಟಿಯಿಂದ ಈ ಬಗೆಯಲ್ಲಿ ಶೀರ್ಷಿಕೆಗಳ 'ರೂಪಾಂತರ'ಗಳು ನಡೆದಿರುವ ಸಾಧ್ಯತೆಯಿದೆ.

ಹೀಗೆ 'ರೂಪಾಂತರ' ನಾಟಕಗಳನ್ನು ಹಲವು ದೃಷ್ಟಿಕೋನಗಳಲ್ಲಿ ವಿಂಗಡಿಸಿಕೊಂಡು ನೋಡಬಹುದು. ಪ್ರತಿಯೊಂದು ವಿಂಗಡಣೆಯು ತನ್ನದೇ ಆದ ಕಾರಣ, ಉದ್ದೇಶಗಳಿಂದ 'ರೂಪಾಂತರ' ನಡೆದಿರುವುದನ್ನು ಸ್ಪಷ್ಟಪಡಿಸುತ್ತದೆ. ಕನ್ನಡದ ಸಂದರ್ಭ, ಮೂಲ ಲೇಖಕನ ಸಾಹಿತ್ಯಿಕ ಸ್ವರೂಪ ಮತ್ತು ಜನಪ್ರಿಯತೆ, ರಂಗಭೂಮಿಯ ಅಗತ್ಯ ಮತ್ತು ಇನ್ನಿತರ ಸಂಗತಿಗಳು 'ರೂಪಾಂತರ' ಚಟುವಟಿಕೆಯನ್ನು ಪ್ರೇರೇಪಿಸಿವೆ.

## ೮.೨. ಶೀರ್ಷಿಕೆಗಳ ರೂಪಾಂತರ ಪ್ರಕ್ರಿಯೆ

ಸಾಮಾನ್ಯವಾಗಿ ಹೆಸರಿರದ ಯಾವುದೇ ವಸ್ತು ಅಥವಾ ವ್ಯಕ್ತಿ ಇರುವುದು ಅಸಾಧ್ಯ; ಅಸಹಜವೂ ಹೌದು. ಪ್ರತಿಯೊಂದನ್ನು ಗುರುತಿಸಬೇಕಾದರು ಹೆಸರು ಅತ್ಯಗತ್ಯವಾಗಿರುತ್ತದೆ. ಹೆಸರಿರದೆ ಏನನ್ನಾಗಲಿ ಅಥವಾ ಯಾವುದನ್ನಾಗಲಿ ಗ್ರಹಿಸಿಕೊಳ್ಳಲು ಬರುವುದಿಲ್ಲ. ಪರಿಚಯ ಮತ್ತು ವೈಲಕ್ಷಣಗಳ ವಿಂಗಡಣೆ ಕೂಡ ಹೆಸರುಗಳ ಮೂಲಕವೆ ನಿರ್ಧಾರವಾಗುವಂತವು. ಈ ಹೆಸರನ್ನೇ ಬರಹ ಅಥವಾ ಸಾಹಿತ್ಯ ಪಠ್ಯಗಳ ಸಂದರ್ಭದಲ್ಲಿ 'ಶೀರ್ಷಿಕೆ' ಎಂದು ಕರೆಯಲಾಗುತ್ತದೆ. ಜಗತ್ತಿನಲ್ಲಿ ಯಾವುದೇ ಸಾಹಿತ್ಯ/ಸಾಹಿತ್ಯೇತರ ಕೃತಿಯು ಶೀರ್ಷಿಕೆಯಿರದೆ ಈವರೆಗೆ ಪ್ರಕಟಗೊಂಡಿಲ್ಲ ಮುಂದು ಪ್ರಕಟಗೊಳ್ಳುವುದಿಲ್ಲ. ಈ ಸಂಗತಿ ಪಠ್ಯಕ್ಕೆ ಶೀರ್ಷಿಕೆ ಎಷ್ಟು ಅಗತ್ಯ ಮತ್ತು ಅವಿನಾಭಾವಿಯಾದುದು ಎಂಬುದನ್ನು ಸಾದರಪಡಿಸುತ್ತದೆ. ಆದರೆ 'ಸಾಹಿತ್ಯ ಪಠ್ಯ'ದ ಶೀರ್ಷಿಕೆಯನ್ನು ಅರ್ಥೈಸಿಕೊಳ್ಳುವುದಕ್ಕೂ 'ಭಾಷಾಂತರ/ರೂಪಾಂತರ ಪಠ್ಯ'ದ ಶೀರ್ಷಿಕೆಯನ್ನು ಗ್ರಹಿಸಿಕೊಳ್ಳುವುದಕ್ಕೂ ವ್ಯತ್ಯಾಸವಿದೆ. ಈ ಎರಡೂ ಶೀರ್ಷಿಕೆಗಳು ಭಿನ್ನ ತಾತ್ವಿಕತೆಯಿಂದ, ಸೈದ್ಧಾಂತಿಕ ನೆಲೆಯಿಂದ ರೂಪುಗೊಳ್ಳುವವು.

ಲೇಖಕನೊಬ್ಬ ತಾನು ರಚಿಸಿದ ಕೃತಿಯೊಂದಕ್ಕೆ ತನಗೆ ಸರಿಯೆನಿಸಿದ ಶೀರ್ಷಿಕೆಯನ್ನಿಡುವ ಸ್ವಾತಂತ್ರವನ್ನು ಹೊಂದಿರುತ್ತಾನೆ. ಅದು ಅವನದೇ ಕೃತಿ, ಅವನಿಂದಲೇ ರೂಪುಗೊಂಡಿರುವುದು. ಹೀಗಾಗಿ ಹೆಸರಿಡುವ/ಶೀರ್ಷಿಕೆ ಕೊಡುವಲ್ಲಿಯೂ ಆತ ಸ್ವತಂತ್ರನಾಗಿರುತ್ತಾನೆ. ಆದರೆ ಭಾಷಾಂತರ/'ರೂಪಾಂತರ' ಕೃತಿಯೊಂದಕ್ಕೆ ಶೀರ್ಷಿಕ ಕೊಡುವಾಗ ಹಾಗೇ ಆಗುವುದಿಲ್ಲ. ಯಾಕೆಂದರೆ 'ರೂಪಾಂತರ'ಕಾರ 'ಮೂಲ ಪಠ್ಯ'ದ ಮೊದಲ ಓದುಗ ನಾಗಿರುತ್ತಾನೆ. ತನ್ನ 'ರೂಪಾಂತರ'/ಭಾಷಾಂತರ ಕೃತಿಗೆ 'ನಾಮಕರಣ' ಮಾಡಬೇಕಾದರೆ ಮೂಲ ಪಠ್ಯವನ್ನು ಗಮನಿಸಬೇಕಾದುದು ಅತ್ಯಗತ್ಯ. ಯಾವ ನೆಲೆಯಲ್ಲಿ/ಹಿನ್ನೆಲೆಯಲ್ಲಿ ಪಠ್ಯರೂಪುಗೊಂಡಿದೆ ಮತ್ತು ಯಾವ ಶೀರ್ಷಿಕೆ ಸರಿಯೆಂಬುದನ್ನು ರೂಪಾಂತರಕಾರ ನಿರ್ಧರಿಸುತ್ತಾನೆ. ಪಠ್ಯ ಪ್ರಕಟಗೊಳ್ಳುವ ಸಂದರ್ಭ ಸಹ 'ರೂಪಾಂತರ' ಪಠ್ಯದ ಶೀರ್ಷಿಕೆಯನ್ನು ಪ್ರಭಾವಿಸಬಲ್ಲ ಸಾಧ್ಯತೆಯಿದೆ. ಅಲ್ಲದೆ ಈ ಹೆಸರು/ಶೀರ್ಷಿಕೆಗಳು ಒಂದೊಂದು 'ಟ್ರೆಂಡ್'ಗೆ ಅನುಸಾರವಾಗಿಯೂ ರೂಪುಗೊಳ್ಳಬಲ್ಲದು. ಈ ಹಿನ್ನೆಲೆಯಲ್ಲಿ 'ರೂಪಾಂತರ' ನಾಟಕಗಳ ಶೀರ್ಷಿಕೆಯನ್ನು ಗಮನಿಸಬಹುದು.

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಕನ್ನಡಕ್ಕೆ 'ರೂಪಾಂತರ' ಗೊಂಡಿರುವ ನಾಟಕಗಳ ಶೀರ್ಷಿಕೆ ಕೆಲವು ಕುತೂಹಲಕಾರಿ ಅಂಶಗಳನ್ನು ಬೆಳಕಿಗೆ ತರುತ್ತವೆ. ಪ್ರತಿಯೊಬ್ಬ ರೂಪಾಂತರಕಾರನು ಪ್ರತಿಯೊಂದು ಕೃತಿಯ ಶೀರ್ಷಿಕೆಯನ್ನು ತನ್ನದೇ ಆದ ನೆಲೆಯಲ್ಲಿ 'ರೂಪಾಂತರಿಸಿ'ಕೊಳ್ಳಲು ಪ್ರಯತ್ನಿಸಿದ್ದಾನೆ. ಈ ಶೀರ್ಷಿಕೆಗಳು ಹೇಗೆ 'ರೂಪಾಂತರ'ಗೊಂಡಿವೆ. ಅವುಗಳ ವೈವಿಧ್ಯತೆ ಮತ್ತು ತಾತ್ವಿಕತೆಯೊಂದಿಗೆ ವಿವಿಧ ಆಯಾಮಗಳಲ್ಲಿ ಅವುಗಳನ್ನು ವಿಂಗಡಿಸಿಕೊಂಡು ಚರ್ಚಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶ.

ಭಾಷಾಂತರ/'ರೂಪಾಂತರ' ಪ್ರಕ್ರಿಯೆ ಎಂದು ಆರಂಭಗೊಂಡಿತೊ ಅಂದಿನಿಂದಲೇ ಕೃತಿಗಳ ಶೀರ್ಷಿಕೆಗಳ ಭಾಷಾಂತರ/'ರೂಪಾಂತರ'ವೂ ಆರಂಭಗೊಂಡಿದೆ. ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಬಂದಿರುವ 'ರೂಪಾಂತರ' ಪಠ್ಯಗಳ ಶೀರ್ಷಿಕೆಗಳ ಹಿನ್ನೆಲೆಯಲ್ಲಿ ಮುಂದಿನ ಚರ್ಚೆಯನ್ನು ಕೈಗೊಳ್ಳಲಾಗಿದೆ. 'ರೂಪಾಂತರ' ಪಠ್ಯಗಳ ಇತರ

ವಿವರವನ್ನು ಅನುಬಂಧ ೭ರಲ್ಲಿ ಕೊಡಲಾಗಿದೆ. ಪಠ್ಯಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳುವ ಮೂಲಕ ಕೃತಿಗಳ ಶೀರ್ಷಿಕೆಯ 'ರೂಪಾಂತರ' ಪ್ರಕ್ರಿಯೆಯನ್ನು ಗುರುತಿಸಲು ಪ್ರಯತ್ನಿಸಲಾಗುವುದು.

**೮.೨.೧. ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ ರೂಪಾಂತರ**

ಮೂಲದಲ್ಲಿ ಒಂದೇ ಶೀರ್ಷಿಕೆಯನ್ನು ಹೊಂದಿರುವ ಹಲವು ನಾಟಕಗಳು 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ 'ರೂಪಾಂತರ'ಗೊಂಡಿರುವವು.

*** ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ ರೂಪಾಂತರಗೊಂಡ ನಾಟಕಗಳ ಪಟ್ಟಿ**

| ಕ್ರ.ಸಂ | ಮೂಲ ನಾಟಕಗಳ ಶೀರ್ಷಿಕೆಗಳು | ರೂಪಾಂತರಗೊಂಡ ಶೀಷಿಕೆಗಳು |
|---|---|---|
| ೧. | The School For Scandal | ಮೋಹಿನಿ/ನಿಂದಾ ಪ್ರಭಾವ ನಾಟಕ/ ಮುದುಕ ಗಂಡ ಚಿಕ್ಕ ಹೆಂಡತಿ |
| ೨. | Taming of The Shrew | ತ್ರಾಟಿಕಾ ನಾಟಕ/ಮೊಂಡ ಗಂಡ ತುಂಟ ಹೆಂಡತಿ |
| ೩. | The Cup | ಕನಕಾಲುಕ/ಕಮಲಿನೀ ಚರಿತಂ |
| ೪. | The Plyers of Life | ಅಧಿಕಾರದಿಂದ/ಸಂಸಾರ ಸುಖ |

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪಠ್ಯವೊಂದು ಬೇರೆ ಬೇರೆ ಅಥವಾ ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳನ್ನು ಹೊಂದಿರುವುದು ಹೊಸದೇನಲ್ಲ. ಆದರೆ 'ರೂಪಾಂತರ' ಕೃತಿಗಳ ಶೀರ್ಷಿಕೆ ಈ ಮಾದರಿಯಲ್ಲಿರುವುದು ಕುತೂಹಲಕಾರಿಯಾದುದು. 'ಇಂಗ್ಲಿಷ್ ಗೀತಗಳು' ಪೂರ್ವದ ಕೆಲವು ಕಾದಂಬರಿ, ನಾಟಕಗಳು ಒಂದಕ್ಕಿಂತ ಹೆಚ್ಚು ಶೀರ್ಷಿಕೆಯನ್ನು ಹೊಂದಿವೆ. ಉದಾಹರಣೆಗೆ, ಕನ್ನಡದ ಮೊದಲ 'ಸ್ವತಂತ್ರ ನಾಟಕ'ವೆಂದು ಗುರುತಿಸಲ್ಪಟ್ಟ, ಸೂರಿ ವೆಂಕಟರಮಣ ಶಾಸ್ತ್ರಿಯವರ 'ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ ಅಥವಾ ಕನ್ಯಾವಿಕ್ರಯದ ಪರಿಣಾಮವು' (೧೮೮೭) ಎಂಬ ಎರಡು ಶೀರ್ಷಿಕೆಯನ್ನು ಹೊಂದಿದೆ. ಅಲ್ಲದೆ ಆಧುನಿಕ ರಂಗಭೂಮಿಯಲ್ಲಿ ಸಂಚಲನವನ್ನುಂಟು ಮಾಡಿದ ಟಿ.ಪಿ. ಕೈಲಾಸಂ ಅವರ ಕೆಲವು ನಾಟಕಗಳು ಸಹ ಎರಡೆರಡು ಶೀರ್ಷಿಕೆಗಳನ್ನು ಪಡೆದುಕೊಂಡಿವೆ. ಇನ್ನೂ ಕಾದಂಬರಿಗಳು ಕೂಡ ಈ ಅವಧಿಯಲ್ಲಿ ಎರಡೆರಡು ಶೀರ್ಷಿಕೆಗಳಲ್ಲಿ ಪ್ರಕಟಗೊಂಡಿವೆ. ಉದಾಹರಣೆ ಗುಲ್ವಾಡಿಯವರ 'ಇಂದಿರಾಬಾಯಿ ಅರ್ಥಾತ ಸದ್ಧರ್ಮ ವಿಜಯ' (೧೮೯೯), 'ಭಾಗೀರಥಿ ಅರ್ಥಾತ ಮೂರ್ಖತ್ವದ ಯಾತನೆಗಳು' (೧೯೦೦)ಇತ್ಯಾದಿ. ಇತ್ತೀಚಿನ ದಿನಗಳಲ್ಲಿಯೂ ಅನೇಕ ಕೃತಿಗಳು ಒಂದಕ್ಕಿಂತ ಅಧಿಕ ಶೀರ್ಷಿಕೆಗಳಲ್ಲಿ ಪ್ರಕಟವಾಗುತ್ತಿವೆ. ಅದರಲ್ಲೂ ಸಾಮಾಜಿಕ ನಾಟಕಗಳು ಬಹುತೇಕವಾಗಿ ಎರಡೆರಡು ಶೀರ್ಷಿಕೆಗಳನ್ನು ಹೊಂದಿರುವುದು ಗಮನಾರ್ಹ. ಉದಾಹರಣೆಗೆ ಮಾರುತಿ ಲಾಡ್ಕರ್‌ರ 'ಗುಲಾಮ ಗಂಡ ಅರ್ಥಾತ ಧರ್ಮಾತ್ಮ' (೧೯೩೩). ಈ ನಾಟಕಗಳು ಮುಖ್ಯವಾಗಿ ರಂಗಭೂಮಿಗಾಗಿ ರೂಪುಗೊಳ್ಳುತ್ತಿದ್ದರಿಂದ ಆ ಹಿನ್ನೆಲೆಯಲ್ಲಿ ಎರಡೆರಡು ಶೀರ್ಷಿಕೆಗಳನ್ನು ನೀಡಿರಲೂಬಹುದು.

ಭಾಷಾಂತರಕಾರ/ರೂಪಾಂತರಕಾರರು ತಮ್ಮ ಕೃತಿಗೆ ಶೀರ್ಷಿಕೆಯನ್ನು ಕೊಡುವಾಗ 'ಮೂಲಪಠ್ಯ'ವನ್ನು ಗಮನಿಸಬೇಕಾಗುತ್ತದೆ. ಒಂದೇ 'ರೂಪಾಂತರ ಪಠ್ಯ' ಒಂದಕ್ಕಿಂತ ಹೆಚ್ಚು ಶೀರ್ಷಿಕೆಯನ್ನು ಹೊಂದಿದೆಯೆಂದರೆ ಆ ಶೀರ್ಷಿಕೆಗಳು ಆ ಒಂದು ಪಠ್ಯದ ಸಾಧ್ಯತೆಯೂ ಆಗಿರುತ್ತದೆ. ಯಾವೆಲ್ಲ ದೃಷ್ಟಿಕೋನ/ಹಿನ್ನೆಲೆಯಲ್ಲಿ ಪಠ್ಯದ ಕೇಂದ್ರವನ್ನು ಗುರುತಿಸಬಹುದು, ಇಲ್ಲವೆ ಶೀರ್ಷಿಕೆಯನ್ನು ಕೊಡಬಹುದು ಎಂಬುದು 'ರೂಪಾಂತರ'ನಿಗೆ ಬಿಟ್ಟ ವಿಷಯ. ರೂಪಾಂತರಕಾರ ಮೂಲ ಪಠ್ಯದ ಮೂಲ/ಮೊದಲ ಓದುಗನಾಗಿರುವುದರೊಂದಿಗೆ ಸಾಮಾನ್ಯ ಓದುಗನಿಗಿಂತ ಭಿನ್ನನಾಗಿರುತ್ತಾನೆ. ಸಾರ್ವಜನಿಕ ಅಥವಾ ಸಾಮಾನ್ಯ ಓದುಗ ಪಠ್ಯವನ್ನು ತನಗಾಗಿ ಓದುವವನಾಗಿದ್ದರೆ ಭಾಷಾಂತರಕಾರ ಮೂಲಪಠ್ಯವನ್ನು ಓದಿದ ನಂತರ ಇದನ್ನು ಯಾವ ರೀತಿಯಲ್ಲಿ ರೂಪಾಂತರಿಸಲಿ, ಹೀಗೆ ಭಾಷಾಂತರಿಸಲಿ ಎಂಬಿತ್ಯಾದಿ ಹಲವು ಪ್ರಶ್ನೆಗಳಿಗೆ ಭಾಷಾಂತರ ಚಟುವಟಿಕೆಯ ಮೂಲಕ ಉತ್ತರ ಕಂಡುಕೊಳ್ಳಲು ಪ್ರಯತ್ನಿಸುತ್ತಾನೆ. ಹಾಗಾಗಿ ರೂಪಾಂತರಕಾರ ಸಾಮಾನ್ಯ ಓದುಗನಿಗಿಂತ ಭಿನ್ನವಾದ, ವಿಶೇಷವಾದ ಓದುಗನಾಗಿರುತ್ತಾನೆ. ರೂಪಾಂತರಕಾರ ಮೂಲಪಠ್ಯದ ವಿವಿಧ ಸಾಧ್ಯತೆಗಳನ್ನು ಗುರುತಿಸಿಕೊಂಡು ಆ ಎಲ್ಲವುಗಳ ಮೂಲಕ ಪಠ್ಯವನ್ನು ಗ್ರಹಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಹೀಗಾದಾಗ ಒಂದೇ ಪಠ್ಯ ಒಂದಕ್ಕಿಂತ ಹೆಚ್ಚು ಶೀರ್ಷಿಕೆಯನ್ನು ಹೊಂದುವುದು ಸಹಜವಾಗಿರಬಹುದು. ಭಾಷಾಂತರಕಾರ ಮೂಲ ಮತ್ತು ಭಾಷಾಂತರ ಪಠ್ಯದ ಮಧ್ಯವರ್ತಿ ತಾನೆಂದು ಭಾವಿಸಿರುವುದರಿಂದ ಸ್ವತಂತ್ರ ಪಠ್ಯಕ್ಕೆ ನೀಡಿದಂತೆ 'ರೂಪಾಂತರ' ಪಠ್ಯಕ್ಕೆ ಅಧಿಕೃತತೆ ನೀಡುವುದಿಲ್ಲ. ಹಾಗಾದಾಗ ಶೀರ್ಷಿಕೆ ಸಹಜವಾಗಿ ಒಂದಕ್ಕಿಂತ ಹೆಚ್ಚಾಗಿ ರೂಪುಗೊಳ್ಳುತ್ತದೆ. ಇದರಿಂದಲೇ 'The Cup' ಕನಕಾಲುಕ ವಾಗುವುದರೊಂದಿಗೆ 'ಕಮಲಿನೀ ಚರಿತಂ' ಸಹ ಆಗಿದೆ.

'ರೂಪಾಂತರ' ಕೃತಿಗಳು ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ 'ರೂಪಾಂತರ'ವಾಗುವುದಕ್ಕೆ ರೂಪಾಂತರಕಾರ ಯಾವ, ಯಾವ ನೆಲೆಯಲ್ಲಿ ಆ ಪಠ್ಯವನ್ನು ಗ್ರಹಿಸಿದ್ದಾನೆ ಎಂಬುದರೊಂದಿಗೆ 'ರೂಪಾಂತರ' ಪಠ್ಯದ ಸಾಧ್ಯತೆ ಸಹ ಕಾರಣವಾಗಿರುತ್ತದೆ. The Taming of the Shrew ನಾಟಕ 'ತ್ರಾಟಿಕಾ ನಾಟಕವು' ಹೌದು 'ಮೊಂಡ ಗಂಡ ತುಂಟ ಹೆಂಡತಿ'ಯೂ ಆಗಿರುತ್ತದೆ. ರೂಪಾಂತರಕಾರ ಕನ್ನಡದ ಸಂದರ್ಭದಲ್ಲಿ ಮೂಲ ಕೃತಿಯಲ್ಲಿ ಈ ಎರಡು ಸಾಧ್ಯತೆಗಳನ್ನು ಕಂಡುಕೊಂಡಿದ್ದಾನೆ. ಆದರಿಂದಾಗಿ ಎರಡು ಶೀರ್ಷಿಕೆಗಳ ಮಧ್ಯೆ 'ಅಥವಾ' ಎಂಬ ಚಿಹ್ನೆಯನ್ನು ಬಳಸಿರುವುದು. ಒಂದಕ್ಕಿಂತ ಹೆಚ್ಚು ಶೀರ್ಷಿಕೆಯನ್ನು ಕೊಟ್ಟಿರುವ ಯಾವೊಬ್ಬ ರೂಪಾಂತರಕಾರರು ಎರಡು ಶೀರ್ಷಿಕೆಗಳ ಮಧ್ಯೆ ಮತ್ತು/ಹಾಗೂ ಎಂಬ ಯಾವುದೆ ಪದಗಳು ಬಳಸದೆ 'ಅಥವಾ' ಮಾತ್ರ ಬಳಸಿರುವುದು ಗಮನಾರ್ಹವಾಗಿದೆ.

ಆರಂಭಕಾಲದ ರೂಪಾಂತರಕಾರರು ಕನ್ನಡದ ಸಂದರ್ಭದಲ್ಲಿ ಪಶ್ಚಿಮದ ಕೃತಿಗಳನ್ನು ರೂಪಿಸಿಕೊಳ್ಳುವಾಗ ಹೇಗೆ ಹೊಂದಿಸಿಕೊಂಡರೆ ಸರಿ/ಸಮಂಜಸ ಎಂಬ ಪ್ರಶ್ನೆಯೊಂದಿಗಿದ್ದರು. ಹೀಗಾದಾಗ ಕೃತಿಗಳಿಗೆ ಒಂದಕ್ಕಿಂತ ಅಧಿಕ ಶೀರ್ಷಿಕೆಗಳನ್ನು ಕೊಡುವ ಮೂಲಕ ಪಠ್ಯದ ಭಿನ್ನ ಸಾಧ್ಯತೆಯನ್ನು ಗುರುತಿಸುವುದರೊಂದಿಗೆ ಆ ಸಾಧ್ಯತೆಗಳಲ್ಲಿ ಕನ್ನಡದಲ್ಲಿ ರೂಪಾಂತರಿಸುವ, ಸ್ಥಳೀಕರಿಸುವ ಪ್ರಯತ್ನ ಮಾಡಿದ್ದಾರೆ. ಈ ನಾಟಕಗಳು 'ರಂಗ ರೂಪಾಂತರ'ವಾಗಿ 'ರೂಪಾಂತರ'ಗೊಂಡಿರುವುದು ಸಹ ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ ಕನ್ನಡೀಕರಣಗೊಳ್ಳುವಂತಾಯಿತು.

ಒಟ್ಟಾರೆಯಾಗಿ 'ರೂಪಾಂತರ'ದ ಸಾಧ್ಯತೆ, ರಂಗಭೂಮಿಯ ಅಗತ್ಯ ಮತ್ತು ರೂಪಾಂತರಕಾರರು ಪಠ್ಯವನ್ನು ಗ್ರಹಿಸಿಕೊಂಡ ಭಿನ್ನ ನೆಲೆಗಳಿಂದ ಇಂಗ್ಲಿಷ್ ಗೀತಗಳು ಪೂರ್ವದ ಕೃತಿಗಳು ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ 'ರೂಪಾಂತರ'ಗೊಂಡಿವೆ.

**೮.೨.೨. ನಾಯಕಿ ಕೇಂದ್ರಿತ ಶೀರ್ಷಿಕೆಗಳು**

೧೮೫೦ ರಿಂದ ೧೯೨೦ರ ಅವಧಿಯಲ್ಲಿ ಕನ್ನಡಕ್ಕೆ ರೂಪಾಂತರಗೊಂಡಿರುವ ಹಲವು ಕೃತಿಗಳ ಶೀರ್ಷಿಕೆಗಳು ನಾಯಕಿ ಕೇಂದ್ರಿತ ಶೀರ್ಷಿಕೆಗಳನ್ನು ಹೊಂದಿವೆ. ಈ ನಾಟಕಗಳು ಮೂಲದಲ್ಲಿ ನಾಯಕ ಅಥವಾ ವಸ್ತು ಕೇಂದ್ರಿತ ಶೀರ್ಷಿಕೆಗಳನ್ನು ಹೊಂದಿದ್ದು ಕನ್ನಡದ ಸಂದರ್ಭದಲ್ಲಿ ರೂಪಾಂತರಗೊಳ್ಳುವಾಗ ನಾಯಕಿ ಕೇಂದ್ರಿತ ಶೀರ್ಷಿಕೆಗಳಾಗಿ ಮಾರ್ಪಾಡುಗೊಂಡಿವೆ.

*** ನಾಯಕಿ ಕೇಂದ್ರಿತ ಶೀರ್ಷಿಕೆಗಳ ಪಟ್ಟಿ**

| ಕ್ರ.ಸಂ. | ಮೂಲ ನಾಟಕದ ಶೀರ್ಷಿಕೆಗಳು | ರೂಪಾಂತರಗೊಂಡ ಶೀರ್ಷಿಕೆಗಳು |
|---|---|---|
| ೧. | The Merchent of Venice | ಪಾಂಚಾಲಿ ಪರಿಣಯ |
| ೨. | The School For Scandal | ಮೋಹಿನಿ |
| ೩. | The Cup | ಕಮಲಿನೀ ಚರಿತಂ |
| ೪. | Hemlet | ಹೇಮಲತಾ |
| ೫. | The Stoops to Conquer | ನಿರ್ಮಲೆ |
| ೬. | Othello | ಪದ್ಮಿನಿ |

ಈ ಪಟ್ಟಿಯಲ್ಲಿರುವ ಯಾವುದೇ ನಾಟಕ ಮೂಲದಲ್ಲಿ ನಾಯಕಿ ಕೇಂದ್ರಿತ ಶೀರ್ಷಿಕೆಗಳನ್ನು ಹೊಂದಿಲ್ಲ. ಆದರೆ ಕನ್ನಡಕ್ಕೆ 'ರೂಪಾಂತರ'ಗೊಳ್ಳುವಾಗ ಅವು ನಾಯಕಿ ಕೇಂದ್ರಿತ ಶೀರ್ಷಿಕೆಗಳಾಗಿ ಪರಿವರ್ತಿತಗೊಂಡಿರುವುದು ಕುತೂಹಲಕಾರಿ. ಶೇಕ್ಸ್‌ಪಿಯರ್‌ನ 'The Merchent of Venice' ನಾಟಕವು ವೆನಿಸ್‌ನಲ್ಲಿ ನಡೆಯುತ್ತಿರುವ ಯಹೂದಿಯರ ಮತ್ತು ಕ್ರಿಶ್ಚಿಯನ್ ವ್ಯಾಪಾರಿಗಳ ನಡುವಿನ ವ್ಯಾಪಾರದ ತಂತ್ರ-ಕುತಂತ್ರವನ್ನು ಪ್ರಕಟಿಸುವುದರೊಂದಿಗೆ ಗೆಳೆತನ, ಪ್ರೀತಿ, ನ್ಯಾಯ ಇತ್ಯಾದಿಗಳನ್ನು ವಿಶಿಷ್ಟ ಆಯಾಮದಲ್ಲಿ ಚರ್ಚಿಸಿರುವುದಾಗಿದೆ. ಆದರೆ ಈ ನಾಟಕವನ್ನು ಆನಂದರಾವ್ ಅವರು 'ಪಾಂಚಾಲಿ ಪರಿಣಯ' ಎಂದು ನಾಯಕಿ ಕೇಂದ್ರಿತ ಶೀಷಿಕೆಯಲ್ಲಿ 'ರೂಪಾಂತರಿಸಿ' ಕೊಂಡಿದ್ದಾರೆ. ಈ ನಾಟಕ ಅಧ್ಯಯನಕ್ಕೆ ಲಭ್ಯವಿರದ ಕಾರಣ ಪಠ್ಯದ ಬಗೆಗಾಗಲಿ, ಶೀರ್ಷಿಕೆಯ ಕುರಿತಾಗಲಿ ಆಲೋಚಿಸುವುದು ಕಷ್ಟಸಾಧ್ಯ. ಹೀಗಿದ್ದರೂ ರೂಪಾಂತರಕಾರರು ಯಾವ ನೆಲೆಯಲ್ಲಿ ಪಠ್ಯವನ್ನು ರೂಪಾಂತರಿಸುತ್ತಾರೆ ಮತ್ತು ಪಠ್ಯದ ಅಧ್ಯಯನ ಸಾಧ್ಯತೆಯಿಂದ ಶೀರ್ಷಿಕೆಗಳು ಬಹುತೇಕವಾಗಿ ನಿರ್ಧಾರವಾಗುತ್ತದೆ. ಹೀಗಾಗಿ ಆನಂದರಾವ್ ಅವರು ತಮ್ಮ ರೂಪಾಂತರ ನಾಟಕದಲ್ಲಿ ಪೋರ್ಷಿಯರ್ (Portiu)ಳನ್ನು ಪಾಂಚಾಲಿ ಎಂದು

ರೂಪಾಂತರಿಸಿದ್ದರಿಂದ ಹಾಗೂ ಅವಳನ್ನು ಬೆಸಾನಿ (Bassania) ವಿವಾಹವಾಗುವುದರಿಂದ 'ಪಾಂಚಾಲಿ ಪರಿಣಯ'ವೆಂದು ಶೀರ್ಷಿಕೆಯನ್ನು ರೂಪಾಂತರಿಸಬಹುದು. ಯಾಕೆಂದರೆ ಭಾರತೀಯ ಸಂದರ್ಭದಲ್ಲಿ ದ್ರೌಪದಿ (ಪಾಂಚಾಲಿ)ಯ ವಿವಾಹ ಕೂಡ ಸ್ವಯಂವರದಿಂದಲೇ ನಿರ್ಧಾರವಾಗಿರುವುದು ಹೀಗಾಗಿ 'ಪಾಂಚಾಲಿ ಪರಿಣಯ'ವೆಂದು ಕರೆದಿರುವ ಸಾಧ್ಯತೆಯಿದೆ.

ಶೆರಿಡನ್‌ನ 'Schooi for Scandul' ನಾಟಕವನ್ನು ಗದಗೆಯ್ಯ ಹೊನ್ನಾಪುರ ಮಠ ಅವರು 'ಮೋಹಿನಿ'ಯೆಂದು 'ರೂಪಾಂತರಿಸಿ'ದ್ದಾರೆ. (ಈ ನಾಟಕಕ್ಕೆ 'ನಿಂದಕರ ನಡಾವಳಿ'ಯೆಂಬ ಇನ್ನೊಂದು ಶೀರ್ಷಿಕೆ ಸಹ ಇದೆ.) ಮೂಲ ನಾಟಕದ ನೇರ ಭಾಷಾಂತರ 'ನಿಂದಕರ ಮಂಡಳಿ'ಯೆಂದಾಗುತ್ತದೆ. Scandal ಗೆ (Mallicious, gassip) ಉಪನಿಂದೆ, ಕಳಂಕ, ಹಗರಣ ಮತ್ತು ಲೋಕೋಪವಾದ ಎಂಬ ಇತ್ಯಾದಿ ಕನ್ನಡದ ಅರ್ಥಗಳಿವೆ. ಆದರೆ ರೂಪಾಂತರಕಾರರು 'ಮೋಹಿನಿ/ನಿಂದಕರ ನಡಾವಳಿ'ಯೆಂದು ರೂಪಾಂತರಿಸಿದ್ದಾರೆ. 'ಮೋಹಿನಿ' ಈ ನಾಟಕದ 'Maria'ದ ಎಂಬ ಪಾತ್ರದ 'ರೂಪಾಂತರ'ದ ಹೆಸರೂ ಆಗಿದೆ. ಇಡೀ ನಾಟಕದಲ್ಲಿ ಆದರ್ಶ ಪಾತ್ರದಂತೆ ಮೋಹಿನಿಯ ಚಿತ್ರಣವಿದೆ. ಇದರಿಂದಾಗಿ ರೂಪಾಂತರಕಾರರು ಆ ಕಾಲದ ಸಾಮಾಜಿಕ ಹಿನ್ನೆಲೆಯಲ್ಲಿನ ಆದರ್ಶದ ಕಾರಣದಿಂದಾಗಿ ಸಾಂಕೇತಿಕವಾಗಿ ಮೋಹಿನಿಯೆಂದು ರೂಪಾಂತರಿಸಬಹುದು. ಅಲ್ಲದೆ 'ಮೋಹಿನಿ' ಪುರಾಣದಲ್ಲಿನ ಒಂದು ಪ್ರಮುಖ ಪಾತ್ರವು ಹೌದು.

ಡಿ.ವಿ.ಜಿ.ಯವರು ೧೯೧೧ರಲ್ಲಿ ರೂಪಾಂತರಿಸಿದ 'ಕಮಲನಿ ಚರಿತಂ' ನಾಟಕದ ಮೂಲ ಶೀರ್ಷಿಕೆ 'The cup' ಅಂದರೆ, ಬಟ್ಟಲು ಎಂದರ್ಥ. ನಾಟಕಗಳ ಶೀರ್ಷಿಕೆ ಮತ್ತು ಪಾತ್ರಗಳ 'ರೂಪಾಂತರ'ದ ಕುರಿತು ಮಾತಾಡಿದವರಲ್ಲಿ ಇವರೂ ಒಬ್ಬರು. 'ಕಮಲಿನೀ ಚರಿತಂ'ಗೆ 'ಕನಕಾಲುಕ'ವೆಂಬ ಇನ್ನೊಂದು ಶೀರ್ಷಿಕೆಯೂ ಇರುವುದರಿಂದ ಡಿ.ವಿ.ಜಿ ಇನ್ನೊಂದು ಶೀರ್ಷಿಕೆಯ ಕುರಿತು ಹೇಳಿದ್ದಾರೆ. ನಾಯಕಿ ಕೇಂದ್ರಿತ ಶೀರ್ಷಿಕೆ 'ಕಮಲಿನೀ ಚರಿತಂ' ಬಗ್ಗೆ ಏನನ್ನು ಹೇಳಿಲ್ಲ. 'ಕಮಲಿನೀ ಚರಿತಂ' ಅಥವಾ 'ಕನಕಾಲುಕ' ನಾಟಕದಲ್ಲಿ ಕಮಲಿನೀ ನಾಯಕಿಯಾಗಿದ್ದಾಳೆ. ಮೂಲ ನಾಟಕದ Cama ಕನ್ನಡದ ಸಂಬದರ್ಭದಲ್ಲಿ ಕಮಲಿನಿಯಾಗಿ ರೂಪುಗೊಂಡಿದ್ದಾಳೆ. ರಾಜ (ಸಾಮಂತ) ವಸುನಾಥನ ಮಡದಿಯಾದ ಇವಳು ತನ್ನ ಗಂಡನನ್ನು ಕೊಂದ ಸುವರ್ಣಾಕ್ಷನು ವಿವಾಹವಾಗಲು ಪ್ರಸ್ತಾಪಿಸಿದಂತೆಲ್ಲಾ ಒಂದೊಂದು ಕಾರಣ ಹೇಳಿ ಮುಂದೂಡಿ ಒಂದು ದಿನ ವಿಷ ನೀಡಿ ಅವನನ್ನು ಸಾಯಿಸಿ, ನಂತರ ತಾನು ಸಾಯುವಳು. ಪತಿವ್ರತೆ ನಿರ್ಮಲಾಳ ದಾಂಪತ್ಯದ ಕುರಿತು ಡಿ.ವಿ.ಜಿ.ಯವರು ''ಈಗ ನಮ್ಮ ಜನರಿಗೆ ನೀತಿಯನ್ನು ತತ್ರಾಪಿ ಸ್ತ್ರೀ ಪುರುಷರು ಪರಸ್ಪರ ಅನುಸರಿಸಬೇಕಾದ ನೀತಿಯನ್ನು ಬೋಧಿಸಬೇಕಾದ ಅವಶ್ಯಕತೆಯಿಲ್ಲವೆಂದು ಯಾರು ಹೇಳಲಾರರು. ವ್ಯಭಿಚಾರದೋಷವನ್ನು ದೂಷಿಸಿ, ನಿರ್ಮಲ ದಾಂಪತ್ಯವನ್ನು ಸೂಚಿಸುವುದೇ ಈ ಸಣ್ಣ ಪುಸ್ತಕದ ಉದ್ದೇಶ'' (ಡಿ.ವಿ.ಜಿ, ೧೯೧೧, ವಿಜ್ಞಾಪನೆ) ಎಂದು ರೂಪಾಂತರ ಪಠ್ಯದಲ್ಲಿ ಹೇಳಿದ್ದಾರೆ. ಇದನ್ನು ಗಮನಿಸಿದಾಗ The cup ನಾಟಕದ cama ವನ್ನು ಡಿ.ವಿ.ಜಿ.ಯವರು 'ಕಮಲಿನೀ'ಯಾಗಿ ರೂಪಾಂತರಿಸುವಾಗ ಅವಳನ್ನು ಪತಿವ್ರತಾ ಸ್ತ್ರೀಯಾಗಿ ಕಂಡಿದ್ದಾರೆ. ಮತ್ತು ಹಾಗೆಯೇ ಸ್ವೀಕರಿಸಿದ್ದಾರೆ. ಇದರಿಂದಾಗಿ ನಾಟಕದ ಶೀರ್ಷಿಕೆ 'ಕಮಲಿನೀ ಚರಿತಂ' ಆಗಿದೆ.

ಶೇಕ್ಸ್‌ಪಿಯರ್‌ನ ಗಂಭೀರ ಅಥವಾ ದುರಂತ ನಾಟಕಗಳಲ್ಲಿ ಮುಖ್ಯವಾದುದು Hemlet. ಇದು ನಾಯಕ ಪ್ರಧಾನ ಶೀರ್ಷಿಕೆಯನ್ನು ಹೊಂದಿರುವಂತದ್ದು. ಇದೇ ನಾಟಕವನ್ನು ಎಂ.ಎಸ್.ಪುಟ್ಟಣ್ಣ ಅವರು 'ಹೇಮಲತಾ' ಎಂದು ರೂಪಾಂತರಿಸಿದ್ದಾರೆ. ನಾಯಕ ಪ್ರಧಾನ ಶೀರ್ಷಿಕೆ ನಾಯಕಿ ಪ್ರಧಾನ ಶೀರ್ಷಿಕೆಯಾಗಿ 'ರೂಪಾಂತರ'ಗೊಂಡಿದೆ. ಆದರೆ ಈ ನಾಟಕ ಅಧ್ಯಯನಕ್ಕೆ ಲಭ್ಯವಿರದ ಕಾರಣ ನಾಯಕಿ ಹೇಮಲತಾ ಯಾರು ಮತ್ತು ಹೇಗೆ ನಾಯಕಿ ಕೇಂದ್ರಿತ ನಾಟಕವಾಗಿ ರೂಪಾಂತರಗೊಂಡಿದೆ ಎನ್ನುವ ಕುರಿತು ಚರ್ಚಿಸಲು ಸಾಧ್ಯವಾಗುತ್ತಿಲ್ಲ. ಆದರೂ ಶೀರ್ಷಿಕೆ ಉಚ್ಚರಣೆಗೆ ಅನುಸಾರವಾಗಿ ಅಥವಾ ಧ್ವನಿಸ್ವಾಮ್ಯತೆಗೆ ಸಮನಾಗಿ ರೂಪುಗೊಂಡಿರುವುದು ಕುತೂಹಲಕಾರಿ.

'The stoops to conquer' ನಾಟಕವನ್ನು ಶ್ರೀರಾಮ ಅವರು 'ನಿರ್ಮಲೆ' ಎಂದು ರೂಪಾಂತರಿಸಿದರೆ 'Othello' ನಾಟಕವನ್ನು ಶ್ರೀಕಂಠಶಾಸ್ತ್ರಿಯವರು 'ಪದ್ಮಿನಿ'ಯೆಂದು ನಾಯಕಿ ಪ್ರಧಾನ ಶೀರ್ಷಿಕೆಯಲ್ಲಿ ರೂಪಾಂತರಿಸಿಕೊಂಡಿದ್ದಾರೆ. ಒಂದು ನಾಟಕ ವಸ್ತುಕೇಂದ್ರಿತ ಶೀರ್ಷಿಕೆಯನ್ನು ಹೊಂದಿದ್ದರೆ ಇನ್ನೊಂದು ನಾಯಕ ಕೇಂದ್ರಿತ ಶೀರ್ಷಿಕೆಯನ್ನು ಹೊಂದಿರುವಂತದ್ದು. ಆದರೆ ಎರಡೂ ನಾಟಕಗಳು 'ರೂಪಾಂತರ'ದ ಸಂದರ್ಭದಲ್ಲಿ ನಾಯಕಿ ಕೇಂದ್ರಿತ ಶೀರ್ಷಿಕೆಯಾಗಿ ಪಲ್ಲಟಗೊಂಡಿವೆ. ಶ್ರೀರಾಮ ಅವರ 'ನಿರ್ಮಲೆ' ನಾಟಕದಲ್ಲಿ ನಿರ್ಮಲೆ ನಾಯಕಿ. ಆಧುನಿಕತೆಯನ್ನು ಹಾಗೂ ಅದರ ಜೀವನ ವಿಧಾನವನ್ನು ಶ್ರದ್ಧೆಯಿಂದ ಪಾಲಿಸುವವಳು. ಹಾಗೆಯೇ ತಾನು ಮದುವೆಯಾಗುವ ಹುಡುಗನನ್ನು ತಾನೇ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರವನ್ನು ಹೊಂದಿದ್ದವಳಾಗಿದ್ದಾಳೆ. ಜೊತೆಗೆ ಅದರಲ್ಲಿ ಸಫಲಳಾಗುತ್ತಾಳೆ. ೨೦ನೇ ಶತಮಾನದಲ್ಲಿ ಈ ಬಗೆಯ ಸ್ವತಂತ್ರ ಸ್ತ್ರೀ ವ್ಯಕ್ತಿತ್ವ ರೂಪುಗೊಂಡಿರುವುದು ಗಮನಾರ್ಹವಾಗಿದೆ. (ಇದೇ ನಾಟಕವನ್ನು ೧೯೨೬ರಲ್ಲಿ ಕೆರೂರರು 'ಪತಿವಶೀಕರಣ'ವೆಂದು ರೂಪಾಂತರಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.) ಇಡೀ ನಾಟಕದ ಕೇಂದ್ರ ಪಾತ್ರವೇ ನಿರ್ಮಲೆಯಾದ್ದರಿಂದ ನಾಟಕದ ಶೀರ್ಷಿಕೆ ಸಹ 'ನಿರ್ಮಲೆ'ಯೆಂದಾಗಿದೆ.

ನಂಜನಗೂಡಿನ ಶ್ರೀಕಂಠಶಾಸ್ತ್ರಿಯವರು 'Othello' ನಾಟಕವನ್ನು 'ಪದ್ಮಿನಿ'ಯೆಂಬ ಶೀರ್ಷಿಕೆಯಲ್ಲಿ ರೂಪಾಂತರಿಸಿದ್ದಾರೆ. ಈ ನಾಟಕ ಇಂಗ್ಲಿಷ್‌ನಿಂದ ನೇರ 'ರೂಪಾಂತರ'ವಾಗಿಲ್ಲ ಬದಲಿಗೆ ತೆಲುಗಿನಲ್ಲಿನ 'ಪದ್ಮಿನಿ ಪ್ರಭಾಕರ' (ರಾವ್‌ಬಹೂದ್ದೂರ ವಿರೇಶಲಿಂಗ ಪಂತಲು) ಕಥಾನುವಾದವನ್ನು ಕನ್ನಡದಲ್ಲಿ 'ಪದ್ಮಿನಿ'ಯಾಗಿ ರೂಪಾಂತರಿಸಿಕೊಳ್ಳಲಾಗಿದೆ. ಕುತೂಹಲದ ಸಂಗತಿಯೆಂದರೆ ಮೂರನೇ ಒಂದು ಭಾಷೆಯಿಂದ ಬಂದು ಪಠ್ಯವನ್ನು ರೂಪಾಂತರಿಸಿಕೊಳ್ಳುವಾಗಲೂ ಸಹ ಶೀರ್ಷಿಕೆಯನ್ನು ಕನ್ನಡದ ಸಂದರ್ಭದಲ್ಲಿಯೆ ಸ್ಥಳೀಕರಿಸಲಾಗಿದೆ.

ಮೂಲ ಇಂಗ್ಲಿಷ್ ನಾಟಕದ Desdemona ಕನ್ನಡದಲ್ಲಿ ಪದ್ಮಿನಿಯಾಗಿ ರೂಪಾಂತರಗೊಂಡಿದ್ದಾಳೆ. ಇದು ಪಾತ್ರಗಳನ್ನು ಭಾರತೀಕರಿಸುವ ವಿಧಾನವೂ ಆಗಿದೆ. ಪದ್ಮಿನಿ ಪ್ರಕಾರಂತರವಾದ 'ರೂಪಾಂತರ' ಪಠ್ಯ ಯಾಕೆಂದರೆ ಪದ್ಮಿನಿ ಸಂಪೂರ್ಣ ಗದ್ಯದ ಮಾದರಿಯಲ್ಲಿದೆ. ಅಂದರೆ ಒಂದು ನೀಳ್ಗತೆಯಂತೆ ರೂಪುಗೊಂಡಿದೆ. ಇಡೀ ಕತೆ ಪದ್ಮಿನಿಯ ಸುತ್ತನಡೆಯುವದರಿಂದ 'ಪದ್ಮಿನಿ' ಎಂಬ ಶೀರ್ಷಿಕೆಯನ್ನು ಕೊಡಲಾಗಿದೆ. ಹೀಗೆ ನಾಯಕಿ ಕೇಂದ್ರಿತ ಶೀರ್ಷಿಕೆಯಲ್ಲಿ 'ರೂಪಾಂತರ'ಗೊಂಡಿರುವುದು.

ಇವುಗಳನ್ನು ಗಮನಿಸಿದಾಗ ಯಾಕಾಗಿ ಈ ಬಗೆಯ ಮಾದರಿಯನ್ನು ಅಥವಾ ಕೃತಿಗಳ ಶೀರ್ಷಿಕೆಗಳ 'ರೂಪಾಂತರ' ವಿಧಾನವನ್ನು 'ಕನ್ನಡ ರೂಪಾಂತರ'ಕಾರರು ಕಂಡುಕೊಂಡರು ಎಂಬ ಪ್ರಶ್ನೆ ಹುಟ್ಟಿಕೊಳ್ಳುವುದು ಸಹಜ. 'ರೂಪಾಂತರ' ನಾಟಕಗಳನ್ನು ವಿಭಿನ್ನ ಆಯಾಮದಲ್ಲಿ ಗ್ರಹಿಸಿಕೊಳ್ಳಬೇಕು, ಕನ್ನಡದ ಸಂದರ್ಭಕ್ಕೆ ಸೇರಿಸಬೇಕು ಎಂಬುವ ಉದ್ದೇಶದಿಂದ ಹೀಗೆ ಮಾಡಿರುವ ಸಾಧ್ಯತೆಯಿದೆ. ಪ್ರತಿಯೊಂದು ಪಠ್ಯಕ್ಕೂ ಕೇಂದ್ರ ಹಾಗೂ ಪರಿಧಿಗಳಿರುತ್ತವೆ. ಸಂದರ್ಭಾನುಸಾರ ಮತ್ತು ಅಧ್ಯಯನದ ಸಾಧ್ಯತೆಯಿಂದಾಗಿ ಅವುಗಳು ಬದಲಾಗುವ, ಪಲ್ಲಟಗೊಳ್ಳುವ ಅವಕಾಶಗಳಿವೆ. ಮೂಲದಲ್ಲಿ ಯಾವುದೋ ಒಂದು ಕೇಂದ್ರ ಇಲ್ಲವೆ ದೃಷ್ಟಿಕೋನದಿಂದ ರೂಪುಗೊಂಡ ಕೃತಿಯನ್ನು ಭಾಷಾಂತರಕಾರ/ರೂಪಾಂತರಕಾರ ತನ್ನ ಕಾಲದ ಸಂದರ್ಭ, ಸನ್ನಿವೇಶಗಳಿಗೆ ಅದನ್ನು ಹೊಂದಿಸಿಕೊಳ್ಳುವಾಗ ತಾನು ಯಾವ ನೆಲೆಯಲ್ಲಿ ಕೃತಿಯನ್ನು ಗ್ರಹಿಸುತ್ತೇನೆ ಎಂಬುದರೊಂದಿಗೆ ಕೃತಿಯ ಸ್ವರೂಪ ಮತ್ತು ಶೀರ್ಷಿಕೆಗಳು ನಿರ್ಧಾರಗೊಳ್ಳುತ್ತವೆ. ಹೀಗಾಗಿ ಭಿನ್ನ ದೃಷ್ಟಿಕೋನದ ಸಾಧ್ಯತೆ, ರೂಪಾಂತರಕಾರನ ನಿರ್ಧಾರ ಮತ್ತು ಬದಲಾಗುವ ಕೇಂದ್ರ-ಪರಿಧಿಗಳಿಂದಾಗಿ ರೂಪಾಂತರಕಾರ ನಾಟಕಗಳಿಗೆ ಶೀರ್ಷಿಕೆಯನ್ನು ಕೊಡುತ್ತಾರೆ. ಇದರಿಂದಲೇ ಮೂಲದಲ್ಲಿ ನಾಯಕ ಅಥವಾ ಇನ್ನಾವುದೋ ಕೇಂದ್ರಿತ ಶೀರ್ಷಿಕೆಗಳು ಕನ್ನಡದ 'ರೂಪಾಂತರ'ದಲ್ಲಿ ನಾಯಕಿ ಕೇಂದ್ರಿತ ಶೀರ್ಷಿಕೆಯಾಗಿ 'ರೂಪಾಂತರ'ಗೊಂಡಿವೆ.

ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ, ಕನ್ನಡವೂ ಸೇರಿದಂತೆ ಭಾರತೀಯ ಇತರ ಭಾಷೆಗಳ ಆರಂಭಿಕ ಕೃತಿಗಳು (ಕಾದಂಬರಿ, ನಾಟಕ) ಬಹುತೇಕವಾಗಿ ನಾಯಕಿ ಕೇಂದ್ರಿತ ಶೀರ್ಷಿಕೆಯಲ್ಲಿಯೇ ಪ್ರಕಟಗೊಂಡಿವೆ. ಕನ್ನಡದ 'ಇಂದಿರಾಬಾಯಿ', ಅಸಾಮಿಯ 'ಭಾನುಮತಿ', ಮಲೆಯಾಳಂನ 'ಇಂದುಲೇಖ' ಮತ್ತು ಮರಾಠಿಯ 'ಯಮುನಾಪರ್ಯಟನ' ಇತ್ಯಾದಿಗಳು, ಇವು ಈ ಭಾಷೆಗಳ ಪ್ರಥಮ ಕಾದಂಬರಿಗಳಾಗಿವೆ. ಇವುಗಳ ಪ್ರಭಾವ ಅಥವಾ ಪ್ರೇರಣೆ ಕನ್ನಡಕ್ಕೆ ರೂಪಾಂತರಗೊಂಡ ನಾಟಕಗಳ ಶೀರ್ಷಿಕೆಗಳಿಗೆ ಆಗಿರಬಹುದು, ಏನಿದ್ದರೂ ಇಂಗ್ಲಿಷ್ ಗೀತಗಳು 'ಪೂರ್ವದ ರೂಪಾಂತರ'ಕಾರರು ನಾಯಕಿ ಕೇಂದ್ರಿತ ಶೀರ್ಷಿಕೆಗಳನ್ನು ರೂಪಾಂತರ ನಾಟಕಗಳಿಗೆ 'ನಾಮಕರಣ' ಮಾಡಿರುವುದು ಗಮನಾರ್ಹವಾಗಿದೆ.

**೮.೨.೩. ಭಾರತೀಕರಣಗೊಂಡ ಶೀರ್ಷಿಕೆಗಳು/ ಸ್ಥಳೀಕರಣಗೊಂಡ ಶೀರ್ಷಿಕೆಗಳು**

ಕನ್ನಡದ ರೂಪಾಂತರಕಾರರು 'ರೂಪಾಂತರ' ಪಠ್ಯಗಳನ್ನು ಭಾರತೀಕರಿಸುವುದರೊಂದಿಗೆ ಈ ಪಠ್ಯಗಳ ಶೀರ್ಷಿಕೆಗಳನ್ನೂ ಸಹ ಭಾರತೀಕರಣಗೊಳಿಸಿರುವುದನ್ನು ಕಾಣಬಹುದು. ಹೀಗೆ ರೂಪಾಂತರಿಸುವಾಗ ರೂಪಾಂತರ ಪಠ್ಯವನ್ನು ಭಾರತೀಕರಣಗೊಳಿಸುವ, ಭಾರತೀಯ ಪರಂಪರೆಯಲ್ಲಿ ಪರಿಚಯವಿರುವ ವ್ಯಕ್ತಿಸಮುದಾಯಗಳನ್ನು ಭೂ ಪ್ರದೇಶಗಳನ್ನು ಬಳಸಿಕೊಂಡಿದ್ದಾರೆ. ಜೊತೆಗೆ ಸಂಸ್ಕೃತದ ಶೀರ್ಷಿಕೆಗಳನ್ನು ಕೊಡುವ ಮೂಲಕವು 'ರೂಪಾಂತರ' ಪಠ್ಯಗಳ ಶೀರ್ಷಿಕೆಯನ್ನು ಭಾರತೀಕರಣಗೊಳಿಸಲು ಪ್ರಯತ್ನಿಸಿದ್ದಾರೆ. ಅದನ್ನು ಎರಡು ಬಗೆಯಲ್ಲಿ ಗುರುತಿಸಿಕೊಳ್ಳಬಹುದು. ಒಂದು, ಜನಪ್ರಿಯ ಶೀರ್ಷಿಕೆಗಳಲ್ಲಿ 'ರೂಪಾಂತರ'ವಾದರೆ ಎರಡು, ಸಂಸ್ಕೃತಮಯ ಶೀರ್ಷಿಕೆಗಳಲ್ಲಿ ರೂಪಾಂತರಿಸುವುದು. ಇವೆರಡನ್ನು ಈ ಕೆಳಗಿನಂತೆ ಗಮನಿಸಬಹುದು.

### ೮.೨.೩.೧. ಜನಪ್ರಿಯ ಶೀರ್ಷಿಕೆಗಳಲ್ಲಿ ರೂಪಾಂತರ

ಇಂಗ್ಲಿಷ್‌ನ ಕೃತಿಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸುವ ಅಥವಾ ನಿರೂಪಿಸುವ ಸಂದರ್ಭದಲ್ಲಿ ಶೀರ್ಷಿಕೆಗಳ ಭಾಷಾಂತರವು ಜನಪ್ರಿಯ ಶೀರ್ಷಿಕೆಗಳಾಗಿ ರೂಪಾಂತರಗೊಂಡಿವೆ. ಈ ಕೆಳಗಿನ ನಾಟಕಗಳು ಜನಪ್ರಿಯ ಶೀರ್ಷಿಕೆಗಳಲ್ಲಿ ರೂಪಾಂತರಗೊಂಡಿರುವವು.

| ಕ್ರ.ಸಂ. | ಮೂಲ ಶೀರ್ಷಿಕೆ | ಜನಪ್ರಿಯ ರೂಪಾಂತರ ಶೀರ್ಷಿಕೆ |
|---|---|---|
| ೧. | The School For Scandal | ಮುದುಕ ಗಂಡ ಚಿಕ್ಕ ಹೆಂಡತಿ |
| ೨. | Taming of The Shrew | ಮೊಂಡಗಂಡ ತುಂಟ ಹೆಂಡತಿ |
| ೩. | Taming of The Shrew | ಗಯ್ಯಾಳಿಯನ್ನು ಸಾಧುಮಾಡುವಿಕೆ |
| ೪. | As You Like It | ಮನೋರಂಜನಿ |

ಈ ನಾಟಕಗಳು ಕನ್ನಡದ ಸಂದರ್ಭದಲ್ಲಿ ಜನಾಕರ್ಷಕ/ಜನಪ್ರಿಯ ಶೀರ್ಷಿಕೆಗಳಲ್ಲಿ ರೂಪುಗೊಂಡಿವೆ. ಇಂಗ್ಲಿಷ್ ನಾಟಕಗಳ 'ಕನ್ನಡೀಕರಣ'ದ ಹಲವು ಉದ್ದೇಶಗಳಲ್ಲಿ ರಂಗಭೂಮಿಯ ಅಗತ್ಯವನ್ನು ಪೂರೈಸುವುದು ಮುಖ್ಯವಾಗಿತ್ತು. ಹೀಗಾಗಿ ನೋಡುಗರನ್ನು ಆಕರ್ಷಿಸಲು ಹಾಗೂ ಜನಪ್ರಿಯತೆಯ ಹಿನ್ನೆಲೆಯಲ್ಲಿ ಈ ಮಾದರಿಯ ಶೀರ್ಷಿಕೆಗಳಲ್ಲಿ ರೂಪಾಂತರಿಸಿಕೊಂಡಿರುವ ಸಾಧ್ಯತೆಯಿದೆ. ಆದರೂ ಇಂಗ್ಲಿಷ್ ನಾಟಕಗಳನ್ನು ಕನ್ನಡದ ಸಂದರ್ಭಕ್ಕೆ ಹೊಂದಿಸುವಲ್ಲಿನ ಈ ಬಗೆಯ ಪ್ರಯತ್ನ ಶೀರ್ಷಿಕೆಯ ಹಂತದಿಂದಲೇ ಆರಂಭಗೊಂಡಿದ್ದು ಕುತೂಹಲಕಾರಿಯಾಗಿದೆ.

### ೮.೨.೩.೨. ಸಂಸ್ಕೃತಮಯ ಶೀರ್ಷಿಕೆಗಳಲ್ಲಿ ರೂಪಾಂತರ

ಕನ್ನಡ ಮತ್ತು ಸಂಸ್ಕೃತದ ಸಂಬಂಧ ಕೇವಲ ಭಾಷೆಗೆ ಮಾತ್ರ ಸೀಮಿತವಾಗಿರದೆ ಸಾಹಿತ್ಯದ ಪ್ರಕಾರ, ಸಂಸ್ಕೃತಿಯವರೆಗೂ ಹಬ್ಬಿಕೊಂಡಿದೆ. ಕನ್ನಡ ಮತ್ತು ಸಂಸ್ಕೃತದ ಸಂಬಂಧದ ಬಗ್ಗೆ ಗಂಭೀರ ಚರ್ಚೆಗಳು ನಡೆದಿವೆ. ಇಂದಿಗೂ ಅನೇಕ ನವೀನ ಪರಕಲ್ಪನೆಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ ಸಂಸ್ಕೃತದ ಹೆಸರನ್ನು ಬಳಸಿಕೊಂಡು ಅವುಗಳನ್ನು ಕನ್ನಡದಾಗಿಸಿಕೊಂಡಿರುವ ಉದಾಹರಣೆಗಳು ಬೇಕಾದಷ್ಟಿವೆ. ಕನ್ನಡದ ರೂಪಾಂತರಕಾರರು ಸಹ ಇಂಗ್ಲಿಷ್‌ನ ನಾಟಕಗಳ ಶೀರ್ಷಿಕೆಯನ್ನು ಕನ್ನಡದ ಸಂದರ್ಭದಲ್ಲಿ ಸಂಸ್ಕೃತದ ಶೀರ್ಷಿಕೆಗಳಾಗಿ ರೂಪಾಂತರಿಸಿಕೊಂಡಿದ್ದಾರೆ.

**ಸಂಸ್ಕೃತಮಯ ಶೀರ್ಷಿಕೆಗಳ ಪಟ್ಟಿ**

| ಕ್ರ.ಸಂ | ಮೂಲ ಶೀರ್ಷಿಕೆಗಳು | ಸಂಸ್ಕೃತ ಮಯ ಶೀರ್ಷಿಕೆಗಳು |
|---|---|---|
| ೧. | Pericles | ಪರಿಕುಲಾಭ್ಯುದಯ |
| ೨. | The Cap | ಕನಕಾಲುಕ/ಕಮಲಿನೀ ಚರಿತಂ |
| ೩. | A Midsummer Night's Dream | ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕವು |

| | | |
|---|---|---|
| ೪. | A Midsummer Night's Dream | ಯವನ ಯಾಮಿನಿ ಕತೆಗಳು |
| ೫. | A Midsummer Night's Dream | ಯವನ ಯಾಮಿನಿ ವಿನೋದ |
| ೬. | A Midsummer Night's Dream | ಪ್ರಮಿಳಾರ್ಜುನೀಯಂ |
| ೭. | The Comedy of Erors | ಭ್ರಾಂತಿ ವಿಲಾಸ |
| ೮. | The Hermit | ಪ್ರೇಷಿತ ಪ್ರಿಯ ಸಮಗಮ |

ಮೇಲಿನ ಪಟ್ಟಿಯಲ್ಲಿರುವ ರೂಪಾಂತರ ನಾಟಕಗಳು ಸಂಸ್ಕೃತಮಯ ಶೀರ್ಷಿಕೆಗಳನ್ನು ಹೊಂದಿವೆ. ಡಿ.ವಿ.ಜಿ.ಯವರನ್ನು ಹೊರತುಪಡಿಸಿದರೆ ಉಳಿದ ರೂಪಾಂತರಕಾರರು ಪಠ್ಯದ ಶೀರ್ಷಿಕೆಯ ರೂಪಾಂತರದ ಕುರಿತು ಪ್ರಸ್ತಾಪಿಸಿಲ್ಲ. ಇವರು 'The Cup' ನಾಟಕವನ್ನು 'ಕನಕಾಲುಕ'ವಾಗಿ ರೂಪಾಂತರಿಸಿದ ಕುರಿತು ಅರಿಕೆಯಲ್ಲಿ ''ಮೂಲ ಕವಿಯಾದ ಟೆನಿಸಿನ್‌ನ ಕಥಾಸಂವಿಧಾನವು ಈ ಕನ್ನಡ ರೂಪದಲ್ಲಿ ವ್ಯತ್ಯಾಸವಾಗಿಲ್ಲ. ಮೂಲ ಗ್ರಂಥದಲ್ಲಿನ ಹೆಸರುಗಳು ಸಂಸ್ಕೃತಕ್ಕೆ ತಿರುಗಿಸಲ್ಪಟ್ಟಿವೆ. 'ಕನಕಾಲುಕ' ಎಂದರೆ ಬಂಗಾರದ ಬಟ್ಟಲು, ಸ್ವರ್ಣಪಾತ್ರೆ, ಚಿನ್ನದ ಗಿಂಡಿ ಎಂದರ್ಥ (''ಬೃಂಗಾರ ಕನಕಾಲುಕ'' - ಅಮರ) ಈ ಕಥೆಯಲ್ಲಿ ಬಟ್ಟಲಿಂದ ವಿಷ ಕುಡಿದಿದ್ದು ಮುಖ್ಯವಾದ ಕಾರಣ "ಬಟ್ಟಲು" (The Cup) ಎಂದು ಹೆಸರು" (ಡಿ.ವಿ.ಜಿ, ೧೯೧೧, ಪು ೧೪, ೧೫) ಅಂದರೆ 'The Cup'ನ ಸಂಸ್ಕೃತದ ರೂಪ 'ಕನಕಾಲುಕ' ಕನ್ನಡ 'ರೂಪಾಂತರ' ನಾಟಕದ ಶೀರ್ಷಿಕೆಯಾಗಿದೆ ಅಥವಾ ಕನ್ನಡೀಕರಣಗೊಂಡಿದೆ. ಡಿ.ವಿ.ಜಿ 'ಕನಕಾಲುಕ'ದ ಕುರಿತು ವಿವರಿಸಿದಂತೆ 'ಕಮಲಿನೀ ಚರಿತಂ' ಎಂಬ ಇನ್ನೊಂದು ಶೀರ್ಷಿಕೆಯ ಕುರಿತು ಏನನ್ನು ಪ್ರಸ್ತಾಪಿಸದಿರುವುದು ಯಾಕೆ ಎಂಬುದು ಪ್ರಶ್ನೆಯಾಗೆ ಉಳಿದಿದೆ.

'A midsummer Night's Dream' ನಾಟಕವನ್ನು ನಾಲ್ಕು ಮಂದಿ ರೂಪಾಂತರಕಾರರು ನಾಲ್ಕು ಪ್ರತ್ಯೇಕ ಶೀರ್ಷಿಕೆಗಳಲ್ಲಿ ರೂಪಾಂತಿರಿಸಿದ್ದಾರೆ. ಮೂಲದಲ್ಲಿ ನಾಟಕವು ವಿನೋದವು ಹಾಸ್ಯದಿಂದ ಕೂಡಿರುವುದು. ಅದೇ ಮಾದರಿಯಲ್ಲಿ ಕನ್ನಡಕ್ಕೆ ಬರುವಾಗ ಕನ್ನಡದ ಸಂದರ್ಭಕ್ಕೆ ಪೂರಕವಾಗಿ ರೂಪುಗೊಂಡಿದೆ. ಹೀಗೆ ರೂಪಿಸುವಾಗ ಶೀರ್ಷಿಕೆಗಳು ಸಂಸ್ಕೃತದ ಮಾದರಿಯಲ್ಲಿ ಕನ್ನಡೀಕರಣಗೊಂಡಿವೆ. 'ಯವನ ಯಾಮಿನಿ ವಿನೋದ' ಮತ್ತು 'ಯವನ ಯಾಮಿನಿ ಕತೆಗಳು' ಪಠ್ಯ ಅಧ್ಯಯನಕ್ಕೆ ಲಭ್ಯವಿಲ್ಲ. ಶ್ರೀಕಂಠೇಶಗೌಡರು ಈ ನಾಟಕವನ್ನು 'ಪ್ರಮಿಳಾರ್ಜುನೀಯಂ' ಎಂತಲೂ ಕೆರೂರರ 'ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕವು' ಎಂದು ಶೀರ್ಷಿಕೆಯನ್ನು ಸಂಸ್ಕೃತೀಕರಣಗೊಳಿಸಿದ್ದಾರೆ. ಹಾಗೆಯೇ 'ಭ್ರಾಂತಿ ವಿಲಾಸ', 'ಪ್ರೇಷಿತ ಪ್ರಿಯ ಸಮಾಗಮ' ಇತ್ಯಾದಿ ನಾಟಕಗಳು ಸಂಸ್ಕೃತಮಯ ಶೀಷಿಕೆಗಳಾಗಿ ಕನ್ನಡಕ್ಕೆ ಬಂದಿವೆ.

ಆದರೂ ಈ ಎಲ್ಲಾ ಶೀರ್ಷಿಕೆಗಳು ಕನ್ನಡದ ಸಂದರ್ಭಕ್ಕೆ ವಿಶಿಷ್ಟವೆಂದೇ ಹೇಳಬೇಕು. ಕೇಳಲು ಶ್ರಾವ್ಯವೆಂಬ ಕಾರಣದಿಂದ ಮತ್ತು ಈ ನಾಟಕಗಳು 'ರಂಗರೂಪಾಂತರ'ಗಳಾದ್ದರಿಂದ ಸಂಸ್ಕೃತದ ಶೀರ್ಷಿಕೆಗಳಲ್ಲಿ ರೂಪಾಂತರಿಸಿಕೊಂಡಿರುವ ಸಾಧ್ಯತೆಯಿದೆ. ಸಂಸ್ಕೃತದ ನಾಟಕದ ಪ್ರಭಾವ ಕನ್ನಡದ ನಾಟಕಕ್ಕೆ ಕನ್ನಡ ರಂಗಭೂಮಿಗೂ ಪ್ರೇರಣೆಯಾಗಿದ್ದರಿಂದ ಹಾಗೂ ಹಲವು ಸಂಸ್ಕೃತ ನಾಟಕಗಳು ಇದೇ ಅವಧಿಯಲ್ಲಿ ಕನ್ನಡಕ್ಕೆ ಬಂದಿದ್ದರಿಂದಲೂ 'ರೂಪಾಂತರ' ನಾಟಕಗಳು ಸಂಸ್ಕೃತದ ಮಾದರಿಯ ಶೀರ್ಷಿಕೆಗಳನ್ನು ಪಡೆದಿರುವವು.

**೮.೨.೪. ಒಂದೇ ನಾಟಕ ಭಿನ್ನ ಶೀರ್ಷಿಕೆಗಳಲ್ಲಿ ರೂಪಾಂತರ**

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿನ ರೂಪಾಂತರಕಾರರು ಶೇಕ್ಸ್‌ಪಿಯರ್ ಮುಂತಾದ ನಾಟಕಕಾರರ ಒಂದೇ ನಾಟಕವನ್ನು ಭಿನ್ನ ಶೀರ್ಷಿಕೆಗಳಲ್ಲಿ ಕನ್ನಡಕ್ಕೆ ತಂದಿದ್ದಾರೆ. ಹೀಗೆ ಭಿನ್ನ ಶೀರ್ಷಿಕೆಗಳಲ್ಲಿ ಸ್ಥಳೀಕರಣಗೊಂಡ ನಾಟಕಗಳನ್ನು ಈ ಕೆಳಗಿನಂತೆ ಗಮನಿಸಬಹುದು.

**ಭಿನ್ನ ಶೀರ್ಷಿಕೆಗಳಲ್ಲಿ ರೂಪಾಂತರಗೊಂಡ ನಾಟಕಗಳ ಪಟ್ಟಿ.**

| ಕ್ರ.ಸಂ | ಮೂಲ ನಾಟಕದ ಶೀರ್ಷಿಕೆಗಳು | ರೂಪಾಂತರಗೊಂಡ ಭಿನ್ನ ಶೀರ್ಷಿಕೆಗಳು |
|---|---|---|
| ೧. | Othello | ಅ. ರಾಘುವೇಂದ್ರರಾವ್ ನಾಟಕ |
| | Othello | ಆ. ಶೂರಸೇನ ಚರಿತ್ರೆ |
| | Othello | ಇ. ಪದ್ಮಿನಿ |
| | Othello | ಈ. ಶೂರಸೇನ ಚರಿತೆ |
| ೨. | The Winters Tal | ಅ. ಮಹೀಮಂಡನ |
| | The Winters Tal | ಆ. ಮಂಜುವಾಣಿ |
| | The Winters Tal | ಇ. ಮಂಜುಘೋಷ |
| ೩. | Hemlet | ಅ. ಹ್ಯಾಮ್ಲೆಟ್ |
| | Hemlet | ಆ. ಹೇಮಲತಾ |
| | Hemlet | ಇ. ಹ್ಯಾಮ್ಲೆಟ್ ನಾಟಕದ ಕರ್ಣಾಟ ಭಾಷಾಂತರ |
| ೪. | Romeo and Juliet | ಅ. ರಮೇಶ ಲಲಿತಾ |
| | Romeo and Juliet | ಆ. ರಾಮವರ್ಮ ಲೀಲಾವತಿ ಚರಿತ್ರೆ |
| | Romeo and Juliet | ಇ. ಕಮಲಾಕ್ಷ ಪದ್ಮಗಂಧಿಯವರ ಕಥೆ |
| ೫. | The Merchent of Venice | ಅ. ಪಾಂಚಾಲಿ ಪರಿಣಯ |
| | The Merchent of Venice | ಆ. ಸುರತ ನಗರದ ಶ್ರೇಷ್ಠಿಯು |

| | | |
|---|---|---|
| | The Merchent of Venice | ಇ. ವೆನಿಸ್ ನಗರದ ವಣಿಕ |
| | The Merchent of Venice | ಈ. ಒಬ್ಬ ಮೈಸೂರು ನಿವಾಸಿ |
| ೬. | A Midsummer Night's Dream | ಅ. ಯವನ ಯಾಮಿನಿ ವಿನೋದ |
| | A Midsummer Night's Dream | ಆ. ಯವನ ಯಾಮಿನಿ ಕಥೆಗಳು |
| | A Midsummer Night's Dream | ಇ. ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕವು |
| | A Midsummer Night's Dream | ಈ. ಪ್ರಮಿಳಾರ್ಜುನೀಯಂ |
| ೭. | Taming of the Shrew | ಅ. ಗಯ್ಯಾಳಿಯನ್ನು ಸಾಧುಮಾಡುವಿಕೆ |
| | Taming of the Shrew | ಆ. ಚಂಡಿ ಮದಮರ್ಧನ ನಾಟಕ |
| | Taming of the Shrew | ಇ. ತ್ರಾಟಿಕಾನಾಟಕ/ಮೊಂಡಗಂಡ ತುಂಟ ಹೆಂಡತಿ |

(ನಾಟಕದ ಮೂಲ ಲೇಖಕರು, ರೂಪಾಂತರಕಾರರು ಮತ್ತು ಪ್ರಕಟವಾದ ವರ್ಷ ಇತ್ಯಾದಿ ವಿವರವನ್ನು ಅನುಬಂಧ ೭ರಲ್ಲಿ ಕೊಡಲಾಗಿದೆ.)

'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಒಂದೇ ನಾಟಕವು ಭಿನ್ನ ಶೀರ್ಷಿಕೆಗಳಲ್ಲಿ ರೂಪಾಂತರಗೊಂಡಿವೆ. ಪ್ರತಿಯೊಬ್ಬ ರೂಪಾಂತರಕಾರರು ತಮ್ಮದೇ ಆದ ನೆಲೆಯಲ್ಲಿ ಹಾಗೂ ಸಂದರ್ಭಕ್ಕೆ ಅನುಸಾರವಾಗಿ ಶೀರ್ಷಿಕೆಗಳನ್ನು ರೂಪಾಂತರಿಸಿಕೊಂಡಿದ್ದಾರೆ. ಇಂಗ್ಲಿಷ್‌ನ 'Othello' ನಾಟಕವನ್ನು ನಾಲ್ಕು ಮಂದಿ ರೂಪಾಂತರಕಾರರು ನಾಲ್ಕು ಭಿನ್ನ ಶೀರ್ಷಿಕೆಗಳಲ್ಲಿ ರೂಪಾಂತರಿಸಿದ್ದಾರೆ. ಚರುಮರಿಯವರಿಗೆ 'Othello' 'ರಾಘುವೇಂದ್ರರಾವ್ ನಾಟಕ'ವಾದರೆ ಶ್ರೀಕಂಠಶಾಸ್ತ್ರಿ ನಂಜನಗೂಡ ಅವರಿಗೆ 'ಪದ್ಮಿನಿ'ಯಾಗಿದೆ. ಇನ್ನೂ ಬಸವಪ್ಪಶಾಸ್ತ್ರಿಗಳು 'ಶೂರಸೇನ ಚರಿತೆ' ಎಂದು ಭಾರತೀಕರಿಸಿದರೆ ಇನ್ನೊಬ್ಬ ರೂಪಾಂತರಕಾರರು 'Othello'ವನ್ನು ಭಾರತೀಕರಿಸುವ, ಕನ್ನಡೀಕರಿಸುವ/ಸ್ಥಳೀಕರಿಸುವ ಪ್ರಯತ್ನದಲ್ಲಿ ಭಿನ್ನ ಶೀರ್ಷಿಕೆಗಳಿಂದ ಮೂಲವನ್ನು ರೂಪಾಂತರಿಸಿದ್ದಾರೆ. ಇಲ್ಲಿ ಕೆಲವರು ಮೂಲದ ಶೀರ್ಷಿಕೆಗೆ ಕನ್ನಡದ ಸಂದರ್ಭದ ಶೀರ್ಷಿಕೆಯನ್ನು ನೀಡಿ ರೂಪಾಂತರಿಸಿದರೆ ಇನ್ನೂ ಕೆಲವರು ಶೀರ್ಷಿಕೆಯನ್ನೇ ಪಲ್ಲಟಗೊಳಿಸಿ ನಾಯಕ ಕೇಂದ್ರಿತ ಶೀರ್ಷಿಕೆ, ನಾಯಕಿ ಕೇಂದ್ರಿತ (ಪದ್ಮಿನಿ) ಶೀರ್ಷಿಕೆಯಾಗಿ ರೂಪಾಂತರಿಸಿದ್ದು ಗಮನಾರ್ಹವಾಗಿದೆ.

'The Winter's Tal' ಅಂದರೆ 'ಚಳಿಗಾಲದ ಕತೆ' ಎಂದರ್ಥ. ಈ ನಾಟಕವನ್ನು ಮೂವರು ರೂಪಾಂತರಕಾರರು ಮೂರು ಭಿನ್ನ ಶೀರ್ಷಿಕೆಗಳಲ್ಲಿ ಸ್ಥಳೀಕರಿಸಿದ್ದಾರೆ. ಇಬ್ಬರು ರೂಪಾಂತರಕಾರರು ಚಳಿಗೆ ಪರ್ಯಾಯವಾಗಿ 'ಮಂಜ'ನ್ನು ಬಳಸಿ 'ಮಂಜುವಾಣಿ' ಹಾಗೂ 'ಮಂಜುಗೋಷ' ಎಂದು ರೂಪಾಂತರಿಸಿದ್ದರೆ, ಅಣ್ಣಾಜಿರಾವ್ ಅವರು 'ಮಹೀಮಂಡನ' ಎಂಬ ಶೀರ್ಷಿಕೆಯಲ್ಲಿ ಕನ್ನಡಕ್ಕೆ ತಂದಿದ್ದಾರೆ. ಈ ಕುರಿತು ಅವರು ಪ್ರಸ್ತಾಪಿಸುತ್ತ ''ಈ ಕಥೆಯಲ್ಲಿ ಜನಗಳ ಸಹವಾಸದಿಂದುಂಟಾಗುವ ಫಲಾಫಲಗಳು ಚನ್ನಾಗಿ ಗೊತ್ತಾಗುವುದರಿಂದಲೂ, ಒಳ್ಳೆಯವರ ಸಹವಾಸವೇ ಸುಖಕರವಾದುದರಿಂದಲೂ ಈ ಅಂಶಕ್ಕೆ ಪ್ರಾಮುಖ್ಯವಂ ಕೊಟ್ಟು ಆದಿಯಲ್ಲಿ ಕಂದಪದ್ಯದಿಂದ ತೋರಿಸಿರುವೆನು.

ಇದಲ್ಲದೆ ನಾರದಾದಿ ಮುನಿಜನರು "ಯಾಹಿ ಸಜ್ಜನ ಸಂಗತಿಂ"ಎಂಬಂತೆ ಸತ್ಸಹವಾಸದಿಂದ ಮುಕ್ತಿಯನ್ನು ಕೊಡೆಂದು ಭಗವಂತನನ್ನು ಹಲವು ವಿಧವಾಗಿ ಪ್ರಾರ್ಥಿಸಿರುವರು. ಸದಸತ್ಸಹವಾಸದಿಂದ ಲಭ್ಯವಾಗಿರುವ ವೃದ್ಧಿಹಾನಿಗಳು ಈ ಕಥೆಯಲ್ಲಿ ಚನ್ನಾಗಿ ವ್ಯಕ್ತವಾಗುವುದರಿಂದ ಇದನ್ನು ಓದಿದವರೆಲ್ಲರೂ ಆ ಮಹಾತಪಸ್ವಿಗಳಂತೆ ಸತ್ಸಂಗಕ್ಕಾಗಿ ದೇವರಲ್ಲಿ ಪ್ರಾರ್ಥಿಸುವರೆಂದು ನಂಬಿ ಭಾಷಾಂತರಿಸಿ ಭೂಷಣವು ಸರ್ವರಿಂದಲೂ ಗ್ರಾಹ್ಯವಾದ ಕಾರಣ ಲೋಕಕ್ಕೆ ಇದೊಂದು ಭೂಷಣಪ್ರಾಯವಾಗಿರಲೆಂದು ಇದಕ್ಕೆ ಮಹೀಮಂಡನವೆಂದು ಹೆಸರಿಟ್ಟೆನು" (ಅಣ್ಣಾಜಿರಾವ್ ೧೯೦೦, ಉಪೋದ್ಘಾತ, ಪುಟ.೬,೭) ಎಂದಿದ್ದಾರೆ. ಮಹಿಮೆ ಎಂಬ ಅರ್ಥದಿಂದ 'ಮಹೀಮಂಡನ'ವೆಂದು ಶೀರ್ಷಿಕೆ 'ರೂಪಾಂತರ'ಗೊಂಡಿದೆ ಎನ್ನಬಹುದು.

ಇಂಗ್ಲಿಷಿನ ಸಂದರ್ಭದಲ್ಲಿ ರೂಪುಗೊಂಡ ಒಂದು ನಾಟಕವನ್ನು ಕನ್ನಡ/ಭಾರತೀಯ ಪೌರಾಣಿಕ ನಂಬಿಕೆಗಳ ಹಿನ್ನೆಲೆಯಲ್ಲಿ ಗ್ರಹಿಸಿ ಅದಕ್ಕೆ ಧರ್ಮದ ಚೌಕಟ್ಟನ್ನು ನಿರ್ಮಿಸಿ ಶೀರ್ಷಿಕೆಯನ್ನು ಅದಕ್ಕೆ ಪೂರಕವಾಗಿ ರೂಪಿಸಿಕೊಂಡಿರುವುದು 'ಮಹೀಮಂಡನ' ನಾಟಕದ ಶೀರ್ಷಿಕೆಯ ಗುಣ.

'Hamlet' ನಾಟಕದ ಶೀರ್ಷಿಕೆಯನ್ನು ಆನಂದರಾವ್ ಅವರು ನೇರ ಭಾಷಾಂತರಿಸಿಕೊಂಡರೆ ಎಂ.ಎಸ್.ಪುಟ್ಟಣ್ಣ ಅವರು 'ಹೇಮಲತಾ' ಎಂದು ಸ್ತ್ರೀಕೇಂದ್ರಿತ ಶೀರ್ಷಿಕೆಯಾಗಿ ರೂಪಾಂತರಿಸಿದ್ದಾರೆ. ಇದೇ ನಾಟಕವನ್ನು ಎ.ವಿ.ರಾವ್ ಅವರು 'ಹ್ಯಾಮ್ಲೆಟ್ ನಾಟಕದ ಕರ್ಣಾಟ ಭಾಷಾಂತರ' ಎಂದು ಕರೆದುಕೊಂಡಿರುವುದು ವಿಶಿಷ್ಟವಾಗಿದೆ. 'ಕನ್ನಡ'ಕ್ಕೆ ಪರ್ಯಾಯವಾಗಿ 'ಕರ್ಣಾಟ' ಬಳಕೆಯಾಗಿದೆ. ಮೂಲದಲ್ಲಿ ನಾಯಕ ಕೇಂದ್ರಿತ ಶೀರ್ಷಿಕೆಯಿದ್ದು ಅದನ್ನು ನಾಯಕಿ (ಸ್ತ್ರೀ) ಕೆಂದ್ರಿತ ಶೀರ್ಷಿಕೆಯಾಗಿ ರೂಪಾಂತರಿಸಿಕೊಳ್ಳುವ ಪುಟ್ಟಣ್ಣ ಅವರು ಇಂಗ್ಲಿಷ್‌ನ ಹ್ಯಾಮ್ಲೆಟ್‌ನ್ನು 'ಹೇಮಲತಾ' ಎಂದು ಟಂಕಿಸಿರುವುದು/ರೂಪಿಸಿಕೊಂಡಿದ್ದು ಗಮನಾರ್ಹ. ಈ ಯಾವುದೇ ಪಠ್ಯವು ಅಧ್ಯಯನಕ್ಕೆ ಲಭ್ಯವಿರದ ಕಾರಣ ಹೆಚ್ಚಿನ ಚರ್ಚೆಗೆ ಅವಕಾಶವಿಲ್ಲವಾಗಿದೆ.

ಕನ್ನಡ ರಂಗಭೂಮಿಯ ಆರಂಭಿಕ ಅವಧಿಯಲ್ಲಿ ಜನಮನ್ನಣೆ ಪಡೆದ ನಾಟಕ 'ರೋಮಿಯೋ ಜುಲಿಯಟ್' ರೂಪಾಂತರ ನಾಟಕ. ಈ ನಾಟಕವನ್ನು ಇಬ್ಬರು 'ರಾಮವರ್ಮ ಲೀಲಾವತಿ ಚರಿತೆ', ರಾಮವರ್ಮ ಲೀಲಾವತಿ ಚರಿತ್ರೆಯೆಂಬ ಶೀರ್ಷಿಕೆಯಲ್ಲಿ ಕನ್ನಡಿಸಿದರೆ ಕೆರೂರರು 'ರಮೇಶ ಲಲಿತಾ' ಎಂತಲೂ ಭೀಮರಾಯ ವೆಂಕಟೇಶ 'ಕಮಲಾಕ್ಷ ಪದ್ಮಗಂಧಿಯರ ಕತೆ'ಯೆಂದು ರೂಪಾಂತರಿಸಿದ್ದಾರೆ. ಶೇಕ್ಸ್‌ಪಿಯರ್‌ನ Romio - ಕನ್ನಡಿಗರಿಗೆ Romio ಆಗಿ ಪರಿಚಯವಾಗಿದೆ ರಮೇಶ, ರಾಮವರ್ಮ ಮತ್ತು ಕಮಲಾಕ್ಷರಾಗಿ ಕನ್ನಡಿಗನು, ಭಾರತೀಯನು ಆದರೆ, Juliet ಲೀಲಾವತಿ, ಲಲಿತಾ ಮತ್ತು, ಪದ್ಮಗಂಧಿಯಾಗುವ ಮೂಲಕ ಕನ್ನಡದವಳಾಗಿ 'ರೂಪಾಂತರ'ಗೊಂಡಿದ್ದಾಳೆ/ ರೂಪಾಂತರಿಸಿಕೊಳ್ಳಲಾಗಿದೆ. ಈ ನಾಟಕಗಳು ಸಾಹಿತ್ಯಪಠ್ಯಗಳಾಗುವುದಕ್ಕಿಂತ ರಂಗಪಠ್ಯಗಳಾಗಿ ರೂಪುಗೊಂಡಿರುವುದೇ ಹೆಚ್ಚು. ರಂಗಭೂಮಿಯ ಹಿನ್ನೆಲೆಯಲ್ಲಿ ನಾಟಕದ ಶೀರ್ಷಿಕೆ ಮತ್ತು ಕಥೆ ಕನ್ನಡದ್ದೇ ಎನಿಸುವಂತೆ ಇರುವುದು ಅಂದಿನ ಅಗತ್ಯವಾಗಿತ್ತು. ಇದಕ್ಕೆ ಮೂರ್ತಿರಾವ್ "ಮೂಲದ ವಿದೇಶಿ ಹೆಸರುಗಳನ್ನು ಯಥಾವತ್ತಾಗಿ ಉಪಯೋಗಿಸಿದ್ದಾರೆ, 'ಕಲೆಕ್ಷನ್'ಗೆ ಹಾನಿ ತಟ್ಟುತ್ತಿದ್ದರಿಂದ ಅವುಗಳ ಸ್ಥಳದಲ್ಲಿ ಭಾರತೀಯ ಹೆಸರುಗಳನ್ನು ಬಳಸಲಾಯಿತು" (ಮೂರ್ತಿರಾವ್, ೧೯೬೬, ಪು ೧೩೨) ಎಂದಿರುವುದು. ಒಂದು ವೇಳೆ ಮೂಲ

ಯಥಾವತ್ತಾಗಿದ್ದರೆ ರಂಗದಲ್ಲಿ ನಾಟಕಗಳು ಸೋಲುವ ಸಾಧ್ಯತೆ ಹೆಚ್ಚಿತ್ತು. ಇದರಿಂದ ರಂಗಭೂಮಿಗೆ ಸಹ ಬಳಸಲಾಗುತ್ತಿರಲಿಲ್ಲ. ಇದರಿಂದ ನಾಟಕದ ಕಥೆಯು ಭಾರತೀಯ ಸಂದರ್ಭದಲ್ಲಿ ಮರುರೂಪ ಪಡೆದಿರುವಂತೆ ಶೀರ್ಷಿಕೆಗಳು ಸಹ ಭಾರತೀಕರಣಗೊಂಡವು.

ಇದೇ ಸಂದರ್ಭದಲ್ಲಿ ಸಂಸ್ಕೃತದ ಪ್ರಮುಖ ನಾಟಕಗಳು ಕನ್ನಡಕ್ಕೆ ಭಾಷಾಂತರಗೊಂಡು ಪ್ರದರ್ಶನಗೊಳ್ಳುತ್ತಿದ್ದವು. ಇದರೊಂದಿಗೆ ಕನ್ನಡದ ನಾಟಕಗಳನ್ನು 'ರೂಪಾಂತರ'ದ ಮೂಲಕ ರೂಪಿಸಲು ಮುಂದಾದರು. ಇಂತಹ ಸಂದರ್ಭದಲ್ಲಿ ಪಶ್ಚಿಮದ ನಾಟಕಗಳು ಅನಿವಾರ್ಯವಾಗಿ ಕನ್ನಡೀಕರಣಗೊಳ್ಳುವ, ಭಾರತೀಕರಣಗೊಳ್ಳುವ ಅಗತ್ಯವನ್ನು ಹೊಂದಿದ್ದವು. ಹೀಗಾಗಿ ಇಂಗ್ಲಿಷ್‌ನ 'ರೋಮಿಯೋ ಜೂಲಿಯಟ್' ಕನ್ನಡದ ಶೀರ್ಷಿಕೆಗಳಲ್ಲಿ ರೂಪಾಂತರಗೊಂಡಿತು.

'The Merchent of Venice'ನ್ನು ಕನ್ನಡದ ಸಂದರ್ಭದಲ್ಲಿ ಕೆರೂರರು 'ಸುರತನಗರದ ಶ್ರೇಷ್ಠಿಯು', ವೆಂಕಟೇಶ್ ಅವರು 'ವೆನಿಸ್ ನಗರದ ವಣಿಕ' ಹಾಗೂ ಇನ್ನೊಬ್ಬರು 'ಒಬ್ಬ ಮೈಸೂರು ನಿವಾಸಿ' ಎಂದು ರೂಪಾಂತರಿಸಿದ್ದಾರೆ. ಕೆರೂರರು Veniceನ್ನು 'ಸುರತ್' ಆಗಿ ರೂಪಾಂತರಿಸಿಕೊಂಡರೆ ಇನ್ನೊಬ್ಬರು ಮೂಲದ ಶೀರ್ಷಿಕೆಯನ್ನು ಹಾಗೇ ಉಳಿಸಿಕೊಂಡಿದ್ದಾರೆ. ಆದರೆ ಒಬ್ಬ ಅನಾಮಿಕ ರೂಪಾಂತರಕಾರ ಅದನ್ನು ಮೈಸೂರು ಎಂದು ಕನ್ನಡಿಸಿದ್ದಾರೆ. ಈ ಬಗೆಯಲ್ಲಿ ಮೂವರು ಭಿನ್ನ ಮಾದರಿಯಲ್ಲಿ ಶೀರ್ಷಿಕೆಯನ್ನು ಭಾರತೀಕರಿಸಿದ್ದಾರೆ. ಇನ್ನೂ ಆನಂದರಾವ್ ಅವರು ಇದೇ ನಾಟಕವನ್ನು 'ಪಾಂಚಾಲಿ ಪರಿಣಯ'ವೆಂದು ರೂಪಾಂತರಿಸಿದ್ದು ಗಮನಾರ್ಹವಾಗಿದೆ. ಆದರೆ ಈ ಯಾವ ನಾಟಕವು ಅಧ್ಯಯನಕ್ಕೆ ಲಭ್ಯವಿರದ ಕಾರಣ ಯಾವುದೇ ಚರ್ಚೆಗೆ ಸಾಧ್ಯವಾಗುತ್ತಿಲ್ಲ.

ಗದಗೆಯ್ಯ ಹೊನ್ನಾಪುರ ಮಠ ಅವರು 'Taming of the Shrew' ನಾಟಕವನ್ನು 'ತ್ರಾಟಿಕಾನಾಟಕ/ಮೊಂಡ ಗಂಡ ತುಂಟ ಹೆಂಡತಿ' ಎಂದು, ಲಕ್ಷ್ಮಣರಾವ್ ಅವರು 'ಚಂಡಿಮದಮರ್ಧನ ನಾಟಕಂ' ಎಂದು ಹಾಗೂ ಸೋಮನಾಥಯ್ಯ 'ಗಯ್ಯಾಳಿಯನ್ನು ಸಾಧುಮಾಡುವಿಕೆ' ಎಂಬ ಶೀರ್ಷಿಕೆಗಳಲ್ಲಿ ರೂಪಾಂತರಿಸಿಕೊಂಡಿದ್ದಾರೆ. ಈ ಶೀರ್ಷಿಕೆಗಳಿಗೆ ಒಂದಕ್ಕೊಂದು ಸಾಮ್ಯತೆಯಿದೆ. ಮೂಲ ನಾಟಕದ ಕನ್ನಡದ ಅರ್ಥ ಚಂಡಿಯನ್ನು ಅಥವಾ ಹಟಮಾರಿಯನ್ನು ಪಳಗಿಸುವುದು ಎಂದಾದರೆ ಈ ರೂಪಾಂತರಕಾರರು ಮೋಜಿನ/ಜನಪ್ರಿಯ ಶೀರ್ಷಿಕೆಗಳಲ್ಲಿ ಕನ್ನಡಿಸಿದ್ದಾರೆ. ಹೊನ್ನಾಪುರ ಮಠ ಅವರು ಶೇಕ್ಸ್‌ಪಿಯರ್ ನಾಟಕವನ್ನು ಮರಾಠಿ ಮೂಲಕ ಕನ್ನಡೀಕರಿಸಿದ್ದು ಮರಾಠಿಯಲ್ಲಿನ 'ತ್ರಾಟಿಕಾನಾಟಕ'ದೊಂದಿಗೆ ಅಥವಾ ಎಂದು 'ಮೊಂಡಗಂಡ ತುಂಟ ಹೆಂಡತಿ' ಎಂದು ರೂಪಾಂತರಿಸಿದ್ದಾರೆ. ಈ ಶೀರ್ಷಿಕೆ ನಾಟಕದ ನಾಯಕ ನಾಯಕಿಯರ ಸ್ವಭಾವ ಕೇಂದ್ರಿತವಾದುದು. ಇವರ ನಾಟಕಗಳ ಶೀರ್ಷಿಕೆಯು ವಿನೋದಭಾವದಿಂದ ರೂಪುಗೊಂಡಿರುತ್ತದೆ. ಯಾಕೆಂದರೆ ಇವರ ಇನ್ನೊಂದು ನಾಟಕ ಸಹ ಇದೇ ಮಾದರಿಯ ಹೆಸರನ್ನು ಹೊಂದಿದೆ (ಮುದುಕ ಗಂಡ ಚಿಕ್ಕ ಹೆಂಡತಿ). ಅಲ್ಲದೆ ಈ 'ಮುದುಕ ಗಂಡ ಚಿಕ್ಕ ಹೆಂಡತಿ', 'ತ್ರಾಟಿಕಾನಾಟಕ', 'ಗಯ್ಯಾಳಿಯನ್ನು ಸಾಧುಮಾಡುವಿಕೆ' ಮತ್ತು 'ಚಂಡಿಮದಮರ್ಧನ ನಾಟಕಂ' ಇತ್ಯಾದಿಗಳು ಜನಾಕರ್ಷಣೆಯ ಶೀರ್ಷಿಕೆಗಳಾಗಿವೆ. 'ಚಂಡಿ' ಭಾರತೀಯ ಪುರಾಣದಲ್ಲಿನ ವಿಚಿತ್ರ ಸ್ವಭಾವದ ವ್ಯಕ್ತಿತ್ವವನ್ನು

ಹೊಂದಿರುವವಳಾಗಿದ್ದರಿಂದ ನಾಯಕಿಯ ಗುಣಕ್ಕೆ ರೂಪಕವಾಗಿ ಹೇಗೆ ಬಳಸಿರಬಹುದು. ಹೀಗಾಗಿ ನಾಟಕಗಳು ರಂಗಭೂಮಿಗಾಗಿ 'ರೂಪಾಂತರ'ಗೊಳ್ಳುತ್ತಿದ್ದರಿಂದ ರಂಗಭೂಮಿಯತ್ತ ಜನರನ್ನು ಆಕರ್ಷಿಸಲು ಈ ಬಗೆಯ ಜನಾಕರ್ಶಕ/ಜನಮನ ರಂಜಕ ಶೀರ್ಷಿಕೆಗಳಲ್ಲಿ ನಾಟಕಗಳನ್ನು ರೂಪಾಂತರಿಸಿಕೊಳ್ಳಲು ಮುಂದಾಗಿರಬೇಕು.

ಶೇಕ್ಸ್‌ಪಿಯರ್‌ನ 'A Midsummer Night's Dream' ನಾಟಕವನ್ನು ನಾಲ್ವರು ರೂಪಾಂತರಕಾರರು ನಾಲ್ಕುಮಾದರಿಯ ಶೀರ್ಷಿಕೆಗಳಲ್ಲಿ ರೂಪಾಂತರಿಸಿದ್ದಾರೆ. ಬಾಪು ಸುಬ್ಬರಾವ್ 'ಯವನ ಯಾಮಿನಿ ವಿನೋದ' ಎಂದು ರೂಪಾಂತರಿಸಿದರೆ ವೇದಮಿತ್ರ ಅವರು 'ಯವನ ಯಾಮಿನಿ ಕಥೆಗಳು' ಎಂದು ರೂಪಾಂತರಿಸಿದ್ದಾರೆ. ಈ ಎರಡು ಶೀರ್ಷಿಕೆಗಳು ಸುಮಾರಿಗೆ ಒಂದೇ ಮಾದರಿಯಲ್ಲಿವೆ. ಆದರೆ ಶ್ರೀಕಂಠೇಶಗೌಡರು 'ಪ್ರಮಿಳಾರ್ಜುನೀಯಂ'' ಹಾಗೂ ಕೆರೂರರು 'ವಸಂತ ಯಾಮಿನೀ ಸ್ವಪ್ನಚಮತ್ಕಾರ ನಾಟಕವು' ಎಂದು ರೂಪಾಂತರಿಸಿದ್ದಾರೆ. ಈ ರೂಪಾಂತರಕಾರರು ನಾಟಕವನ್ನು ಕನ್ನಡದ ಸಂದರ್ಭ, ಸನ್ನಿವೇಶದಲ್ಲಿ ರೂಪಿಸಿಕೊಳ್ಳುವಾಗ ಈ ರೀತಿ ಶೀರ್ಷಿಕೆಯನ್ನು ನೀಡಿದ್ದಾರೆ. ಭಾರತೀಯರಿಗೆ ಪರಿಚಯವಿರುವ ಪುರಾಣ, ಇತಿಹಾಸದ ಕತೆಗಳ ಮಾದರಿಯಲ್ಲಿ ರೂಪಾಂತರಿಸಲು ಪ್ರಯತ್ನಿಸಿದ್ದಾರೆ. ನಾಟಕ ವಿನೋದದ ಗುಣವನ್ನು ಹೊಂದಿದ್ದು, ಅದನ್ನು ಕನ್ನಡದಲ್ಲಿ ತಂದುಕೊಳ್ಳಲು ಶೀರ್ಷಿಕೆಯನ್ನು ಸಹ ಹಾಗೆಯೇ ರೂಪಾಂತರಿಸಲು ಮುಂದಾಗಿರಬೇಕು. ವೇದಮಿತ್ರ ಮತ್ತು ಬಾಪು ಸುಬ್ಬರಾವ್ ಅವರ ಕೃತಿಗಳು ದೊರೆತಿದ್ದರೆ ಶೀರ್ಷಿಕೆಯ ಬಗ್ಗೆ ಇನ್ನೂ ಹೆಚ್ಚು ವಿವರಿಸಬಹುದಿತ್ತು ಆದರೆ ಈ ಪಠ್ಯಗಳು ಲಭ್ಯವಿಲ್ಲ.

ಬಹುತೇಕ ರೂಪಾಂತರಕಾರರು ನಾಟಕಗಳ ಶೀರ್ಷಿಕೆಯನ್ನು ರೂಪಾಂತರಿಸಿಕೊಂಡರೆ, ಕೆಲವೊಂದು ನಾಟಕಗಳ ಶೀರ್ಷಿಕೆಗಳು ನೇರ ಭಾಷಾಂತರಗೊಂಡಿವೆ ಆ ನಾಟಕಗಳೆಂದರೆ 'ಜ್ಯೂಲಿಯಸ್ ಸೀಸರ್', 'ಚಂಡಮಾರುತ' ಮತ್ತು 'ಹ್ಯಾಮ್ಲೆಟ್' ಇತ್ಯಾದಿಗಳು. ಈ ನಾಟಕಗಳ ಶೀರ್ಷಿಕೆಯನ್ನು ಒಟ್ಟಾರೆಯಾಗಿ ಗಮನಿಸಿದಾಗ ಅಣ್ಣಾಜಿರಾವ್ ಅವರ ಅಭಿಪ್ರಾಯ ಸರಿಯಾಗಿರಬಹುದು ಎಂದೆನಿಸುತ್ತದೆ. ಅವರ ನಿಲುವೇನೆಂದರೆ ''ನಾಟಕಗಳನ್ನು ಭಾಷಾಂತರಿಸಿದವರು ಅವುಗಳಿಗೆ ಕನ್ನಡದಲ್ಲಿ ಹೆಸರುಗಳನ್ನು ಹುಡುಕಿ ಇಡುವ ವಿಷಯದಲ್ಲಿ ಬಹು ಪ್ರಯಾಸಪಟ್ಟಂತೆ ತೋರುತ್ತದೆ. ಇದು ಸಹಜವೆ. ಶೇಕ್ಸ್‌ಪಿಯರ್ ಕವಿಯು ಸಹ ಒಂದಾನೊಂದು ಸಲ ಒಂದು ನಾಟಕವನ್ನು ಬರೆದು ತನ್ನೊಬ್ಬ ಸ್ನೇಹಿತನ ಮುಂದಿಟ್ಟು ಏನು ಹೆಸರಿಡುವುದೆಂದಾಗ ಅವನಿಗೆ ತೋರದೆ 'ನೀನು ಇಷ್ಟ ಪಟ್ಟಂತೆ' (As you like it) ಎಂದನಂತೆ, ಅದರಂತೆ ಆ ನಾಟಕಕ್ಕೆ (As you like it) ಎಂತಲೇ ಹೆಸರಾಯಿತು'' (ಅಣ್ಣಾಜಿರಾವ್ ೧೯೦೦, ಪು.೪).

'ಇಂಗ್ಲಿಷ್ ಗೀತಗಳು' ಪೂರ್ವದ ರೂಪಾಂತರಕಾರರು ತಮ್ಮ ತಮ್ಮ ಇಷ್ಟದಂತೆ ಪಠ್ಯಗಳಿಗೆ ಶೀರ್ಷಿಕೆಗಳನ್ನು ನೀಡುವುದರೊಂದಿಗೆ ಕನ್ನಡದ ಸಂದರ್ಭ, ಸನ್ನಿವೇಶಗಳಲ್ಲಿ ಅವುಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಜೊತೆಗೆ ಪಠ್ಯಗಳು 'ರಂಗ ರೂಪಾಂತರ'ವಾಗಿ ರೂಪಾಂತರಿಸಿಕೊಳ್ಳುವ ತುರ್ತಿದ್ದುದರಿಂದ ಪಠ್ಯಗಳು ವೈವಿಧ್ಯಮಯ ಶೀರ್ಷಿಕೆಗಳನ್ನು ಪಡೆಯುವಂತಾಯಿತು.

‘ಇಂಗ್ಲಿಷ್ ಗೀತಗಳು’ ಪೂರ್ವದ ‘ರೂಪಾಂತರ’ ನಾಟಕಗಳ ಶೀರ್ಷಿಕೆಗಳಲ್ಲಿನ ವೈವಿಧ್ಯತೆ, ವಿಶಿಷ್ಟತೆಗಳನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಬಹುದು.

೧. ಬಹುತೇಕ ಇಂಗ್ಲಿಷ್ ನಾಟಕಗಳು ‘ರಂಗ ರೂಪಾಂತರ’ಗೊಂಡಿರುವುದರಿಂದ ಜನಾಕರ್ಷಕ ಶೀರ್ಷಿಕೆಗಳನ್ನು ಪಡೆದವು.

೨. ಮೂಲದಲ್ಲಿ ವಸ್ತು ಅಥವಾ ನಾಯಕ ಕೇಂದ್ರಿತ ಶೀರ್ಷಿಕೆಗಳು ‘ರೂಪಾಂತರ’ದ ಸಂದರ್ಭದಲ್ಲಿ ನಾಯಕಿ ಕೇಂದ್ರಿತ ಶೀರ್ಷಿಕೆಗಳಾಗಿ ರೂಪಾಂತರಗೊಂಡಿದ್ದು ಗಮನಾರ್ಹ.

೩. ಕನ್ನಡಿಗರಿಗೆ ಭಾರತೀಯ ಪರಿಚಿತವಿರುವ ಹೆಸರುಗಳ ಮೂಲಕವೂ ಕೃತಿಗಳ ಶೀರ್ಷಿಕೆಗಳು ರೂಪಾಂತರಗೊಂಡಿವೆ.

೪. ನಾಟಕ ಪಠ್ಯಗಳ ಭಾರತೀಕರಣ ಪ್ರಕ್ರಿಯೆ ಶೀರ್ಷಿಕೆಗಳ ರೂಪಾಂತರದಲ್ಲಿಯೂ ನಡೆದಿದೆ.

೫. ಕೆಲವೇ ಪಠ್ಯಗಳ ಶೀರ್ಷಿಕೆ ಮಾತ್ರ ನೇರ ಭಾಷಾಂತರಗೊಂಡಿರುವವು.

೬. ಕೆಲವು ರೂಪಾಂತರಕಾರರು ನಾಟಕಗಳಿಗಾಗಿಯೇ ನವೀನ ಶೀರ್ಷಿಕೆಗಳನ್ನು ಟಂಕಿಸಿಕೊಂಡಿದ್ದಾರೆ.

೭. ಅನೇಕ ನಾಟಕಗಳ ಶೀರ್ಷಿಕೆಗಳು ಸಂಸ್ಕೃತಮಯವಾಗಿ ರೂಪುಗೊಂಡಿವೆ.

೮. ಮೂಲದ ಒಂದೇ ನಾಟಕ ಭಿನ್ನ ಶೀರ್ಷಿಕೆಗಳಲ್ಲಿ ಸ್ಥಳೀಕರಣಗೊಂಡಿರುವುದು ಕುತೂಹಲಕಾರಿಯಾಗಿದೆ.

೯. ಇನ್ನೊಂದು ಮುಖ್ಯವಾದ ವಿಚಾರವೆಂದರೆ, ಮೂಲದಲ್ಲಿ ಒಂದೇ ಒಂದು ಶೀರ್ಷಿಕೆಗಳನ್ನು ಹೊಂದಿರುವ ನಾಟಕಗಳು ಒಂದಕ್ಕಿಂತ ಹೆಚ್ಚು ಶೀರ್ಷಿಕೆಗಳಲ್ಲಿ ಕನ್ನಡಕ್ಕೆ ಬಂದಿವೆ.

೧೦. ಇಂಗ್ಲಿಷ್ ನಾಟಕಗಳ ಶೀರ್ಷಿಕೆಗಳನ್ನು ಕನ್ನಡದ ಸಂದರ್ಭ, ಸನ್ನಿವೇಶಗಳಿಗೆ ಅಳವಡಿಸುವ ಪ್ರಯತ್ನ ಶೀರ್ಷಿಕೆಗಳ ‘ರೂಪಾಂತರ’ ಪ್ರಕ್ರಿಯೆಯಲ್ಲಿ ಹೆಚ್ಚಾಗಿ ನಡೆದಿದೆ.

ಈ ಬಗೆಯಲ್ಲಿ ಶೀರ್ಷಿಕೆಗಳ ರೂಪಾಂತರ ಪ್ರಕ್ರಿಯೆಯನ್ನು ಗಮನಿಸಬಹುದು. ಈ ಲಕ್ಷಣ ಭಾರತೀಯ ಇತರ ಭಾಷೆಗಳಲ್ಲಿ ನಡೆದ ನಾಟಕಗಳ ರೂಪಾಂತರ ಪ್ರಕ್ರಿಯೆಗೂ ಅನ್ವಯಿಸಬಹುದು. ‘ಇಂಗ್ಲಿಷ್ ಗೀತಗಳು’ ಪೂರ್ವದ ‘ರೂಪಾಂತರ’ ಪ್ರಕ್ರಿಯೆಯ ಆಧುನಿಕದ ಸಂದರ್ಭದಲ್ಲಿ ಶೀರ್ಷಿಕೆಗಳ ‘ರೂಪಾಂತರ’ವು ಅಷ್ಟೇ ಮುಖ್ಯವಾದುದು ಎಂಬುದನ್ನು ಈ ಮೇಲಿನ ಚರ್ಚೆಯಿಂದ ತಿಳಿದುಬರುತ್ತದೆ.

**೮.೩. ಪಾತ್ರಗಳ ಹೆಸರುಗಳ ರೂಪಾಂತರ ಪ್ರಕ್ರಿಯೆ**

ಯಾವುದೇ ಕಾಲಾವಧಿಯಲ್ಲಿನ ‘ರೂಪಾಂತರ’/ಭಾಷಾಂತರ ಪ್ರಕ್ರಿಯೆಯನ್ನು ಅರ್ಥೈಸಿಕೊಳ್ಳಬೇಕಾದರೆ ಪಠ್ಯದ ಶೀರ್ಷಿಕೆ, ಆಕೃತಿ, ಆಶಯಗಳಂತೆ ಪಾತ್ರಗಳ ‘ರೂಪಾಂತರ’ವೂ ಮುಖ್ಯವಾಗುತ್ತವೆ. ಪಾತ್ರಗಳು ಕೃತಿಯ ಆಶಯ, ಮತ್ತು ಆಕೃತಿಗಳಿಗೆ ಪೂರಕವಾಗಿರುವಂತೆ ಪಠ್ಯದ ಜೀವಾಳ. ಅದರಲ್ಲೂ ನಾಟಕ ಪ್ರಕಾರದ ಸಂದರ್ಭದಲ್ಲಿ ಪಾತ್ರಗಳು ಗಮನಾರ್ಹವಾದವು. ಪಠ್ಯವೊಂದು ಭಿನ್ನ ಸಾಂಸ್ಕೃತಿಕ ಜಗತ್ತಿನ ಸನ್ನಿವೇಶದಲ್ಲಿ ‘ರೂಪಾಂತರ’ವಾಗುತ್ತದೆ ಎಂದರೆ

ಸಹಜವಾಗಿ ಪಾತ್ರಗಳ ಹೆಸರುಗಳ 'ರೂಪಾಂತರ'ಗೊಳ್ಳುತ್ತವೆ. ಆದರೆ ಈವರೆಗಿನ ಅಧ್ಯಯನಗಳು ಪಾತ್ರಗಳ 'ರೂಪಾಂತರ'ದ ಬಗ್ಗೆ ಪ್ರತ್ಯೇಕವಾಗಿ ಚರ್ಚೆಯನ್ನು ನಡೆಸಿಲ್ಲ. 'ರೂಪಾಂತರ' ಪ್ರಕ್ರಿಯೆಯನ್ನು ತಾತ್ವಿಕವಾಗಿ ಚರ್ಚಿಸುವಾಗಲೂ ಮತ್ತು ಸೈದ್ಧಾಂತಿಕವಾಗಿ ರೂಪಿಸಿಕೊಳ್ಳುವಾಗಲೂ ಪಾತ್ರಗಳ ಹೆಸರುಗಳ 'ರೂಪಾಂತರ'ವನ್ನು ಗಮನಿಸಬೇಕಾಗುತ್ತದೆ. ಅಲ್ಲದೆ ಪಾತ್ರಗಳ 'ರೂಪಾಂತರ' ಇಡೀ ಪಠ್ಯದ 'ರೂಪಾಂತರ'ಕ್ಕೆ ಪೂರಕವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ೧೮೫೦ ರಿಂದ ೧೯೨೦ರ ಅವಧಿಯಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ 'ರೂಪಾಂತರ'ಗೊಂಡಿರುವ ಲಭ್ಯಪಠ್ಯಗಳ ಪಾತ್ರಗಳ ಹೆಸರುಗಳ 'ರೂಪಾಂತರ' ಪ್ರಕ್ರಿಯೆಯನ್ನು ಗಮನಿಸಲಾಗುವುದು. ಅಧ್ಯಯನದ ಅನುಕೂಲಕ್ಕಾಗಿ ಪಾತ್ರಗಳ ಹೆಸರುಗಳ 'ರೂಪಾಂತರ'ವನ್ನು ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

**ಪಾತ್ರಗಳ ಹೆಸರುಗಳ ರೂಪಾಂತರ ಪಟ್ಟಿ**

| ಕ್ರಸಂ. | ಮೂಲನಾಟಕ ಮತ್ತು ಅದರ ಪಾತ್ರಗಳು | | ರೂಪಾಂತರ ನಾಟಕಗಳು ಮತ್ತು ರೂಪಾಂತರ ಪಾತ್ರಗಳ ಹೆಸರುಗಳು | |
|---|---|---|---|---|
| ೧. | Othello | ರಾಘವೇಂದ್ರರಾವ್ ನಾಟಕ | ಶೂರಸೇನ ಚರಿತ್ರೆ | ಪದ್ಮಿನಿ |
| | Othello | ರಾಘವೇಂದ್ರರಾವ್ | ಶೂರಸೇನ | ಪ್ರಭಾಕರ |
| | Brabantio | ತ್ರೀಮಲರಾವ್ | ಸುನೀತ | ವಾಸುದೇವ |
| | Cassio | ಸುಬ್ಬರಾಯ | ವಿಜಯಧ್ವಜ | ಮಿತ್ರಪಾಲ |
| | Iago | ನರಸಿಂಗರಾಯ | ದೇವದತ್ತ | ದುಷ್ಟಬುದ್ಧಿ |
| | Emilia | ಹಸ್ತ | ವನೀತೆ | ರಾಧಿಕಾ |
| | Bianoa | ತಾರೆ | ಬಾಲಕಾವಣಿ | ? |
| | Desdemona | ವೆಂಕುಬಾಯಿ | ಮೋಹನೆ | ಪದ್ಮಿನಿ |
| | Gratiano | ರಾಮರಾವ್ | ? | ? |
| ೨. | **A Midsummer Night's Dream** | **ಪ್ರಮಿಳಾರ್ಜುನೀಯಂ** | | **ವಸಂತ ಯಾಮಿನೀ ಸ್ವಪ್ನಚಮತ್ಕಾರ ನಾಟಕವು** (ಯವನ ಯಾಮಿನಿ ವಿನೋದ ಮತ್ತು ಯವನಯಾಮಿ ಕತೆಗಳು ಲಭ್ಯವಿಲ್ಲ.) |
| | The Seus | ಅರ್ಜುನ | | ಸುಭಾಹು |
| | Egeus | ಮೇನವ | | ಪ್ರಸ್ತರ ಸೇನ |
| | Lysander | ಜಯಂತ | | ಧೃತಿವರ್ಮ |
| | Demetriue | ವಸಂತ | | ಧೃಢವರ್ಮ |

| | | | |
|---|---|---|---|
| | Philostrate | ಅಸುಗ | ರಸಘೋಷ |
| | Shag A Joiner | ಮಡಿವಾಳ ಮಾಚಯ್ಯ | ಕನ್ನಯ್ಯ ಸಿಂಪಿಗ |
| | Bottom A weaver | ನೆನಬಾರದ ನಾಗಪ್ಪ | ಮುಗಿಯಣ್ಣ ಕುಂಬಾರನು |
| | Flute a Bellows-mirr | ಕುಲಾಲ ಕುಂಟಶೆಟ್ಟಿ | ಉಂಡಾಡಿ ಜೇಡನು |
| | Qulnce,a Carpinter | ಮಾಯಾಚಾರಿ | ಉಳಿಯಪ್ಪ ಬಡಿಗನು |
| | Starvelino a Tailor | ದರ್ಜಿ ಸಯಾರಾಂ ವಿಠೋಬ | ಮಂಡುಕ ನಾಪಿತ |
| | Heppolyta | ಪ್ರಮಿಳೆ | ಪ್ರಗಲ್ಭಾ |
| | Hermia | ಕೈರವೆ | ಊರ್ಮಿಲೆ |
| | Helena | ಪದ್ಮಿನಿ | ಶ್ಯಾಮಲ |
| | Oberon | ಮನ್ಮಥ | ಶುಭದರ್ಶನ |
| | Titania | ರತಿದೇವಿ | ವನಜೋತ್ಸ್ನಾ |
| | Puck | ಖೇಚರ | ವಿನೋದ |
| | Pease-Blosom | ಮಾಲತಿ | ಚಿತ್ರಾಂಗ |
| | Colwer Friries | ಮಾಧವಿ (ರತಿದೇವಿಯರ | ಭಂಗ |
| | Moth | ಮಲ್ಲಿಕಾ ಸಖಿಯರು) | ಪತಂಗ (ಬೇರೆ ಕಿನ್ನರರು) |
| | Mustard-seed | ಮಂಜರಿ | ಶಲಭ |
| ೩ | **The Taming of the Shrow** | **ಚಂಡಿಮದಮರ್ಧನ ನಾಟಕಂ** | **ತ್ರಾಟಿಕಾನಾಟಕ/ಮೊಂಡಗಂಡ ತುಂಟ ಹೆಂಡತಿ** |
| | Baptista | ಮಾನಸೋಲ್ಲಾಸ | ಲಕ್ಷ್ಮೀಪತಿರಾವ್ |
| | Lucentio | ಚಂದ್ರವರ್ಮ | ರಂಗರಾವ್ |
| | Petrachio | ಕಮಲಾಕ್ಷ | ಪ್ರತಾಪರಾವ್ |
| | Gremio | ರಜತಾಂಗ | ಬಾಪುರಾವ್ |
| | Hortensia | ಕಾಲಹಂಸ | ಭೀಮರಾವ್ |
| | Tranio | ಮದನ | ವೆಂಕಣ್ಣನಾಯಕ |
| | Biondello | ಬಂಧುವ | ತಮ್ಯಾ |
| | Gramio | ಸುಮತಿ | ನೀಲಾ |
| | Kathorina-the shrow | ಕಮಲಿನಿ | ತ್ರಾಟಿಕಾ |
| | Bianco | ಕುಮುದಿನಿ | ಕಮಲೆ |

| ೪ | Romeo And Jaliet | ರಾಮವರ್ಮ ಲೀಲಾವತಿ ಚರಿತ್ರೆ | ರಾಮೇಶ ಲಲತಾ ನಾಟಕವು (ಅಪೂರ್ಣ) |
|---|---|---|---|
| | Paris | ಪೇಶಲಾಂಗ | ? |
| | Montegue | ಮಾಧುರ | ? |
| | Cepulet | ಕಾಫಿಲ | ಕಪಿಲವರ್ಮ |
| | Romeo | ರಾಮವರ್ಮ | ರಮೇಶ |
| | Mercutio | ಮದನ | ಮುರಾಂತಕ |
| | Benvolio | ಬೇಹಾರಿ | ದಯಾಘನ |
| | Tybalt | ತ್ರೈವಿಕ್ರಮ | ಉಗ್ರಸೇನ |
| | Friar Laurence | ಪೂಜ್ಯಪಾದ | ಉಪಾಧ್ಯಾಯ |
| | Balthasar | ಬಾಲಚಂದ್ರ | ? |
| | Sampson | ಸಂತನು | ? |
| | Gregory | ಗ್ರೈವೇಯಕ | ? |
| | Peter | ? | ಪಿಡ್ಡ |
| | Abraham | ಏಕಪಿಗ | ? |
| | Lady Montague | ಲಲಿತಾಂಗಿ | ? |
| | Lady Capulet | ಕಲಾವತಿ | ಕಾಮಾಕ್ಷಿ |
| | Juleat | ಲೀಲಾವತಿ | ಲಲಿತೆ |
| | Nurse | ಧಾತ್ರಿ | ನರಸಮ್ಮ |

| ೫ | The cup | ಕನಕಾಲುಕ/ಕಮಲಿನೀ ಚರಿತಂ |
|---|---|---|
| | Synorix | ಸುವರ್ಣಾಕ್ಷ |
| | Sinnatus | ವಸುನಾಥ |
| | Comma | ಕಮಲಿನಿ |
| | Phoebe | ಪ್ರಭಾವತಿ |
| | Anotonias | ಅನಂತಸೇನ |
| | Publicus | ಪರ್ವತ |

| | | |
|---|---|---|
| ೬ | **The winters Tale** | ಮಹೀಮಂಡನ (ಗದ್ಯರೂಪಾಂತರ) (ಮಂಜುವಾಣಿ, ಮಂಜುಘೋಷ ಅಲಭ್ಯ) |
| | Leontes | ಮಣಿರತ |
| | Polixenes | ಕಂಠೀರವ |
| | Mamillius | ಚಂದ್ರಶೇಖರ |
| | Dion | ದೇವದತ್ತ |
| | Cleonehes | ಕರ್ದಮ |
| | Comillo | ಕಾಪಿಲ |
| | Anitigonus | ಕುಂಬಗ್ರೀವ |
| | Florise | ಸಿಂಹ ವಿಕ್ರಮ |
| | Hermine | ಗುಣಮಣಿ |
| | Perdita | ಪ್ರೇಮವತಿ |
| | Pauliha | ಸುಶೀಲೆ |
| | On old Shepherd | ವಿದ್ಯಾಧೀಶ |
| ೭ | **The Mistake** | ಪ್ರಮಾದಕರಣ ನಾಟಕಂ |
| | Don Alvarez | ಪಂಚಾನನ |
| | Don Felix | ಮೂಡಲಗಿರಿ |
| | Don Corlos | ಮಹಾಬಲನು |
| | Don Lorenso | ಪ್ರಭಾಕರನು |
| | Metapharstas | ವೈಧಿಕರಣೆ |
| | Sancho | ಶಂಖಚೂಡನು |
| | Lopet | ಲಾತವ್ಯನು |
| | Toledo | ರುಧಿರಪ್ರಿಯನು |
| | Leoners | ಸಿಂಹಿಕೆ |
| | Camillo | ಕಮಲಿನಿ |
| | Isabella | ಸೂರ್ಯಕಾಂತಿ |
| | Iqcints | ಮಾಲತಿ |

| | | |
|---|---|---|
| ೮ | **Macbeth** | **ಪ್ರತಾಪರುದ್ರದೇವ** |
| | Duncon | ವಿಜಯಧ್ವಜ |
| | Malcom | ಪ್ರತಾಪರುದ್ರದೇವ |
| | Donalbain | ಪ್ರತಾಪ ಸಿಂಹ |
| | Macbeth | ವೀರಸೇನ |
| | Benquo | ಶೂರಸೇನ |
| | Fleance | ಆದ್ರಿ |
| | Macduft | ಜಯಸಿಂಹ |
| | Lonnox | ನಂದರಾಜ |
| | Ross | ಕಳಿಂಗರಾಯ |
| | Menteith | ವಾಮದೇವ |
| | Angus | ಮಿತ್ರ |
| | Caithness | ನಳ |
| | Seward | ಶೇಖರ |
| | Yound Seward | ಶೇಖರನ ಮಗ |
| | Lady Macbath | ಚಂದ್ರವಲ್ಲಿ |
| ೯ | **The morchent of Venice** | **ಸುರತನಗರದ ಶ್ರೇಷ್ಠಿಯು** (ಪಾಂಚಾಲಿ ಪರಿಣಯ, ವೆನಿಸ್‌ನಗರದ ವಣಿಕ ಮತ್ತು ಒಬ್ಬ ಮೈಸೂರಿನ ನಿವಾಸಿ ರೂಪಾಂತರಗಳು ಲಭ್ಯವಿಲ್ಲ.) |
| | Duke | ವಿಕ್ರಮಸಿಂಹ |
| | Antonio | ಸಂತೋಷ ಪ್ರಸಾದ |
| | Bassnio | ಬಸಂತ ಕುಮಾರ |
| | Gratiano | ಸಾವಳರಾಮ |
| | Salanio | ಸಾವಳದಾಸ |
| | Salario | ಸ್ವಯಂಭೂ |
| | Lorenzo | ಪ್ರೇಮಚಂದ |
| | Shylock | ಕಠೋರಮಲ್ಲ |
| | Tubal | ಟೀಕಮದಾಸ |
| | Launcelot Gobbo | ಗುಬ್ಬಿಸಂಗ |

| | | |
|---|---|---|
| | Old Gobbo | ಗುಬ್ಬಿಮುದಿಮಲ್ಲ |
| | Leonardo | ವಾಘುಜೀ |
| | Balthazar | ಬದ್ರೀಪ್ರಸಾದ |
| | Stephano | ಭವಾನೀ ಪ್ರಸಾದ |
| | Protia | ತಾರಾದೇವಿ |
| | Nerissa | ನರ್ಮದೆ |
| | Jessica | ಯಶೋಧೆ |
| ೧೦ | **King Lear** | **ಹೇಮಚಂದ್ರ ರಾಜವಿಲಾಸ** |
| | Lear king of britain | ಹೇಮಚಂದ್ರರಾಯ |
| | King of Frahe | ಅನಂಗರಾಯ |
| | Dake of Burgahdy | ಮದ್ರಾದೀಶ |
| | Dake of Cornwalli | ಕುಚೇಲ (ಎರಡನೇ ಮಗಳ ಗಂಡ) |
| | Dake of Albany | ಭದ್ರನಾಥ (ಮೊದಲ ಮಗಳ ಗಂಡ) |
| | Curan | ಕರಣ |
| | Curen | ನಿಷ್ಕಂಟಕ |
| | Gloucester | ದುಃಖಸಾರ |
| | Edgar | ಶುಕ್ಲಚಂದ್ರ |
| | Edmand | ಕುಮಂತ್ರ |
| | Oswald | ರಾಹುಕ |
| | Goneril | ನಾಗವೇಣಿ (ದೊರೆಯ ಮೊದಲ ಮಗಳು) |
| | Regan | ವಿಷಜೆ (ದೊರೆಯ ಎರಡನೇ ಮಗಳು) |
| | Cordelia | ಇಂದುಕಲೆ (ದೊರೆಯ ಮೂರನೇ ಮಗಳು) |
| ೧೧ | **The School for Scandal** | **ನಿಂದಕರನಡಾವಳಿ/ ಮುದುಕ ಗಂಡ ಚಿಕ್ಕ ಹೆಂಡತಿ** |
| | Lady sheerwell | ಕುಚೇಷ್ಟಿತೆ |
| | Shake | ಕುಟಿಲೆ |
| | Mrs, Condour | ನಿಷ್ಕಪಟ |
| | Crabtree | ವಂಚಕರಾವ್ |

| | |
|---|---|
| Snakebite | ಕ್ಷುದ್ರಕರಾವ್ |
| Sir peter teazle | ಶ್ರೀಪತಿರಾವ್ ಜಹಾಗೀರದಾರ |
| Lady teazrle | ಲಾವಣ್ಯವತಿ |
| Maria | ಮೋಹಿನೀ |
| Joseph surface | ಮನೋಹರರಾವ್ |
| Charles sarface | ವಿಲಾಸರಾವ್ |
| Siroliver surface | ಶುಶೀಲರಾವ್ |
| Moses jew | ಮೋತಿಚಂದ |
| Premium jew | ಪ್ರೇಮಚಂದ್ರ |
| Old stanley | ನಿರ್ಧನರಾವ್ |
| Rowley | ರಾಮು |

'ರೂಪಾಂತರ' ಪಠ್ಯಗಳನ್ನು ಗಮನಿಸಿದಾಗ ಪಟ್ಟಿಯಲ್ಲಿರುವಂತೆ ಪಾತ್ರಗಳ ಹೆಸರುಗಳ 'ರೂಪಾಂತರ' ನಡೆದಿರುವುದು ಕಾಣುತ್ತದೆ. ರೂಪಾಂತರಕಾರರು ಪಠ್ಯಗಳಲ್ಲಿ ಪಾತ್ರಗಳ ಹೆಸರುಗಳ 'ರೂಪಾಂತರ'ವನ್ನು ತಾಂತ್ರಿಕವಾಗಿ ಹೇಗೆ ನಿರ್ವಹಿಸಿದ್ದಾರೆ ಎಂಬುದು ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಹೀಗಾಗಿ ಈ ಕೆಳಗಿನಂತೆ ಪಾತ್ರಗಳ 'ರೂಪಾಂತರ'ವನ್ನು ವಿಂಗಡಿಸಿಕೊಳ್ಳಬಹುದು.

**೮.೩.೧. ಮೂಲ ಪಾತ್ರಗಳ ಹೆಸರುಗಳು ಮತ್ತು ರೂಪಾಂತರ ಪಾತ್ರಗಳ ಹೆಸರುಗಳು**

'ನಿಂದಕರ ನಡಾವಳಿ', 'ರಾಮವರ್ಮ ಲೀಲಾವತಿ ಚರಿತೆ', 'ಕನಕಾಲುಕ' ಮತ್ತು 'ಪ್ರಮಾದಕರಣ ನಾಟಕಂ' ಈ ನಾಲ್ಕು 'ರೂಪಾಂತರ' ನಾಟಕಗಳಲ್ಲಿ ಮೂಲ ನಾಟಕದ ಪಾತ್ರಗಳ ಹೆಸರು ಹಾಗೂ ಅದರ ಎಡಕ್ಕೆ 'ರೂಪಾಂತರ' ಪಾತ್ರಗಳ ಹೆಸರನ್ನು ಕೊಡಲಾಗಿದೆ. ಹೊನ್ನಾಪುರ ಮಠ ಅವರು 'ನಿಂದಕರ ನಡಾವಳಿ/ಮೋಹಿನಿ' ನಾಟಕದಲ್ಲಿ ಮೊದಲು 'ರೂಪಾಂತರ' ಪಾತ್ರಗಳ ಹೆಸರು, ನಂತರ ಅದರ ಪಕ್ಕಕ್ಕೆ ಮೂಲ ನಾಟಕದ ಪಾತ್ರದ ಹೆಸರನ್ನು ಕೊಟ್ಟರೆ 'ರಾಮವರ್ಮ ಲೀಲಾವತಿ ಚರಿತೆ'ಯಲ್ಲಿ ಮೊದಲು ಮೂಲ ಪಾತ್ರದ ಹೆಸರನ್ನು 'English Name' ಎಂದು ಅವರ ಕೆಳಗೆ ಹಾಗೂ ಅವರ ಪಕ್ಕಕ್ಕೆ 'ಕನ್ನಡದ ಹೆಸರು' ಎಂದು 'ರೂಪಾಂತರ' ಪಾತ್ರಗಳ ಹೆಸರನ್ನು ಕೊಡಲಾಗಿದೆ. ಆದರೆ 'ಪ್ರಮಾದಕರಣ ನಾಟಕಂ' ಮತ್ತು 'ಕನಕಾಲುಕ' ನಾಟಕಗಳಲ್ಲಿ 'ರೂಪಾಂತರ' ಪಾತ್ರಗಳನ್ನು ಮೊದಲು ಕೊಟ್ಟು ನಂತರ ಅದರ ಮುಂದೆ ಕಂಸದಲ್ಲಿ ಮೂಲಪಾತ್ರದ ಹೆಸರುಗಳನ್ನು ಕೊಟ್ಟಿದ್ದಾರೆ. ಈ ಕ್ರಮ ಪಾತ್ರಗಳ ಹೆಸರುಗಳ 'ರೂಪಾಂತರ'ವನ್ನು ಕನ್ನಡದ ರೂಪಾಂತರಕಾರರು ಹೇಗೆ ನಿರ್ವಹಿಸಿದ್ದಾರೆ ಎಂಬುದನ್ನು ತಿಳಿಸುತ್ತದೆ.

ಹೊನ್ನಾಪುರ ಮಠ ಅವರಿಗೆ 'ನಿಂದಕರ ನಡಾವಳಿ' ನಾಟಕದಲ್ಲಿ 'ರೂಪಾಂತರ' ಪಾತ್ರಗಳ ಹೆಸರು ಮೂಲಕ್ಕಿಂತ ಮುಖ್ಯವಾಗಿದ್ದು ಮೊದಲು 'ರೂಪಾಂತರ' ಪಾತ್ರಗಳ ಹೆಸರನ್ನು ಕೊಟ್ಟ ಅನಂತರ ಮೂಲ ಪಾತ್ರದ ಹೆಸರುಗಳನ್ನು ಕೊಟ್ಟಿದ್ದಾರೆ. ಆದರೆ ಡಿ.ವಿ.ಜಿ (ಕನಕಾಲುಕ/ಕಮಲಿನೀ ಚರಿತಂ), ನರಹರಯ್ಯ (ಪ್ರಮಾದಕರಣ ನಾಟಕಂ) ರಂಥಹ

ರೂಪಾಂತರಕಾರರಿಗೆ ಮೂಲಪಾತ್ರ ಕೇವಲ ನೆಪ. ಅದಕ್ಕಾಗಿ ಮೊದಲು 'ರೂಪಾಂತರ' ಪಾತ್ರಗಳನ್ನು ಕೊಟ್ಟು, ಅದರ ಪಕ್ಕದ ಕಂಸದಲ್ಲಿ ಹೀಗೆ ಎನ್ನುವಂತೆ ಮೂಲ ಪಾತ್ರದ ಹೆಸರುಗಳನ್ನು ನೀಡಿದ್ದಾರೆ. ಮೂಲ ಮತ್ತು 'ರೂಪಾಂತರ' ಎರಡು ಪಾತ್ರಗಳನ್ನು 'ನಿಂದಕರ ನಡಾವಳಿ'ಯಲ್ಲಿ ಕೊಟ್ಟ ಹೊನ್ನಾಪುರ ಮಠ ತಮ್ಮ ಇನ್ನೊಂದು ನಾಟಕದ 'ರೂಪಾಂತರ'ದಲ್ಲಿ ಕೈ ಬಿಟ್ಟಿದ್ದಾರೆ. ಇವುಗಳ ನಡುವೆ ನಾಟಕವನ್ನು ಭಾರತೀಕರಿಸುವ ಕಾರಣದಿಂದ ಪ್ರತ್ಯೇಕ ದೃಶ್ಯಗಳನ್ನೇ ಸೃಷ್ಟಿಸಿ ದುಃಖಾಂತ ನಾಟಕವನ್ನು ಸುಖಾಂತವಾಗಿ ರೂಪಾಂತರಿಸಲು ಪ್ರಯತ್ನಿಸಿದ ಆನಂದರಾವ್ ಅವರು ಪಾತ್ರಗಳ 'ರೂಪಾಂತರ'ದ ಸಂದರ್ಭದಲ್ಲಿ ಮೊದಲು ಮೂಲನಾಟಕದ ಪಾತ್ರಗಳ ಇಂಗ್ಲಿಷ್ ಹೆಸರುಗಳನ್ನು ಕೊಟ್ಟು, ನಂತರ 'ರೂಪಾಂತರ' ಪಾತ್ರಗಳ ಹೆಸರನ್ನು ಕೊಟ್ಟಿದ್ದಾರೆ. ಈ ವಿಧಾನ ತಾನು ಯಾವ ಮಾದರಿಯಲ್ಲಿ ಪಾತ್ರಗಳನ್ನು ವಿಶೇಷವಾಗಿ ರೂಪಾಂತರಿಸಿದ್ದೇನೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಲು ನಡೆಸಿದ ಪ್ರಯತ್ನವೂ ಆಗಿರಬಹುದು.

**೮.೩.೨. ಕೇವಲ 'ರೂಪಾಂತರ' ಪಾತ್ರಗಳ ಹೆಸರುಗಳು**

'ಇಂಗ್ಲಿಷ್ ಗೀತಗಳು' ಪೂರ್ವದ ಕೆಲವು ರೂಪಾಂತರಕಾರರು 'ರೂಪಾಂತರ' ಕೃತಿಗಳಲ್ಲಿ ಮೂಲ ಪಾತ್ರಗಳ ಹೆಸರು ಮತ್ತು 'ರೂಪಾಂತರ' ಪಾತ್ರಗಳ ಹೆಸರುಗಳನ್ನು ಕೊಟ್ಟಿದ್ದರೆ. ಕೆಲವರು ಕೇವಲ ರೂಪಾಂತರ ಪಾತ್ರಗಳ ಹೆಸರುಗಳನ್ನು ಕೊಡುವಷ್ಟು ಸ್ವತಂತ್ರವನ್ನು ವಹಿಸಿದ್ದಾರೆ. ಇವರು ನಾಟಕದ ದೃಶ್ಯಗಳು ಆರಂಭವಾಗುವುದಕ್ಕೆ ಮುನ್ನ 'ನಾಟಕ ಪಾತ್ರಗಳು/ನಾಟಕದೊಳಗಿನ ಪಾತ್ರಗಳು' ಎಂದು ಅವಗಳ ಕೆಳಗೆ 'ರೂಪಾಂತರ' ಪಾತ್ರಗಳ ಹೆಸರುಗಳನ್ನು ನೀಡಿದ್ದಾರೆ. ಈ ಗುಂಪಿಗೆ ಸೇರುವ ನಾಟಕಗಳೆಂದರೆ 'ವಸಂತ ಯಾಮಿನೀ ಸ್ವಪ್ನಚಮತ್ಕಾರ ನಾಟಕವು', 'ಸುರತನಗರದ ಶ್ರೇಷ್ಠಿಯು', 'ರಾಘವೇಂದ್ರರಾವ್ ನಾಟಕವು', 'ಪ್ರತಾಪರುದ್ರದೇವ', 'ಹೇಮಚಂದ್ರರಾಜವಿಲಾಸ', 'ಚಂಡಿಮದಮರ್ಧನ ನಾಟಕಂ' ಮತ್ತು 'ಪ್ರಮೀಳಾರ್ಜುನೀಯಂ' ಇತ್ಯಾದಿಗಳು. ಈ ನಾಟಕಗಳ ರೂಪಾಂತರಕಾರರಿಗೆ ಮೂಲ ಪಾತ್ರಗಳು ಮುಖ್ಯ ಅನಿಸಿರಲಿಲ್ಲ. ಅದಕ್ಕೆ 'ಸ್ವತಂತ್ರ' ನಾಟಕಗಳಂತೆ ತಮ್ಮ ನಾಟಕಗಳಲ್ಲಿ 'ರೂಪಾಂತರ' ಪಾತ್ರಗಳ ಹೆಸರುಗಳನ್ನು ಮಾತ್ರ ನೀಡುವಷ್ಟು ಸ್ವತಂತ್ರವಹಿಸಿದ್ದಾರೆ. ಇವರು 'ರೂಪಾಂತರ' ಪಠ್ಯಗಳನ್ನು 'ಸ್ವತಂತ್ರ ಪಠ್ಯ'ಗಳೆಂದು ಭಾವಿಸಿರಬಹುದೇ?

ಆದರೆ ಇನ್ನೂ ಕೆಲವು ನಾಟಕಗಳು ಇಂಗ್ಲಿಷ್ ನಾಟಕಗಳಿಂದ 'ರೂಪಾಂತರ'ಗೊಂಡರೂ ನಾಟಕಗಳಲ್ಲಿ ಮೂಲ ಪಾತ್ರದ ಹೆಸರುಗಳಾಗಲಿ 'ರೂಪಾಂತರ' ಪಾತ್ರಗಳ ಹೆಸರುಗಳನ್ನು ಕೊಡುವುದಾಗಲಿ ಮಾಡಲಿಲ್ಲ. ಆ ನಾಟಕಗಳೆಂದರೆ 'ಪದ್ಮಿನಿ', 'ನಿರ್ಮಲೆ' ಇತ್ಯಾದಿಗಳು. ಈ ನಾಟಕಗಳು ಗದ್ಯರೂಪಾಂತರವಾದ್ದರಿಂದ ಪಾತ್ರಗಳ ಹೆಸರುಗಳ ಪಟ್ಟಿ ಅನಾವಶ್ಯಕ ಎನಿಸಿರಬಹುದು. ಯಾಕೆಂದರೆ, ಇವು ಪ್ರಕಾರಾಂತರಗೊಂಡಿವೆ. ಆದರೆ 'ತ್ರಾಟಿಕಾನಾಟಕ, ರಮೇಶ ಲಲಿತಾ' ಇತ್ಯಾದಿ ನಾಟಕಗಳು ಹಾಗೆಯೇ 'ರೂಪಾಂತರ'ಗೊಂಡಿವೆ. ಆದರೆ ನಾಟಕ ಪ್ರಕಾರದ ಸಹಜ ಗುಣಲಕ್ಷಣದಂತೆ ಯಾವುದೇ ಬಗೆಯಲ್ಲಿಯೂ ಪಾತ್ರಗಳ ಹೆಸರನ್ನು ಕೊಡಲು ಪ್ರಯತ್ನಿಸಿಲ್ಲ. ಇದನ್ನೊಂದು ಪರಿವರ್ತನ ಗುಣವೆಂದು ಹೇಳಬಹುದು.

ಹೀಗೆ ರೂಪಾಂತರಕಾರರು ತಮ್ಮ ನಾಟಕಗಳಲ್ಲಿ ರೂಪಾಂತರ ಪಾತ್ರಗಳ ಹೆಸರುಗಳ ಪಟ್ಟಿಯನ್ನು ಕೊಡುವಾಗ ಭಿನ್ನ ಕ್ರಮವನ್ನು ಅನುಸರಿಸಿದ್ದಾರೆ. ಇನ್ನೂ ಕೆಲವರು ಪಾತ್ರಗಳ ಹೆಸರನ್ನು ಕೊಟ್ಟಿಲ್ಲ. ಇದು ರೂಪಾಂತರಕಾರರು ಪಾತ್ರಗಳ 'ರೂಪಾಂತರ'ವನ್ನು ಯಾವ ನೆಲೆಯಲ್ಲಿ ಮಾಡಿಕೊಂಡಿದ್ದಾರೆ ಅಥವಾ 'ರೂಪಾಂತರ' ಮಾಡಲು ಪ್ರಯತ್ನಿಸಿದ್ದಾರೆ ಎಂಬುದರ ಮಾದರಿಯೂ ಆಗಿದೆ. ಕೆಲವು ರೂಪಾಂತರಕಾರರಿಗೆ 'ರೂಪಾಂತರ'ದೊಂದಿಗೆ ಮೂಲ ಪಾತ್ರಗಳ ಹೆಸರುಗಳನ್ನು ಕೊಡಬೇಕೆನಿಸಿದರೆ ಇನ್ನೂ ಕೆಲವರಿಗೆ ಕೇವಲ 'ರೂಪಾಂತರ' ಪಾತ್ರಗಳ ಸಾಕು ಎನಿಸಿತ್ತು. ಮತ್ತೆ ಕೆಲವರಿಗೆ 'ರೂಪಾಂತರ' ಪಾತ್ರಗಳ ಹೆಸರುಗಳು ಯಾಕೆ? ಎಂದು ಯಾವುದೇ ಪಾತ್ರಗಳ ಹೆಸರುಗಳ ಪಟ್ಟಿಯನ್ನೇ ಕೊಡಲಿಲ್ಲ. ಕೆಲವರಿಗೆ 'ರೂಪಾಂತರ' ಪಾತ್ರಗಳೇ ಅಂತಿಮ ಎಂದೆನಿಸಿದರೆ ಮತ್ತೆ ಕೆಲವರಿಗೆ 'ರೂಪಾಂತರ'ದೊಂದಿಗೆ ಅದಕ್ಕೆ ಪೂರಕವಾದ ಮೂಲ ಪಾತ್ರಗಳ ಹೆಸರುಗಳು ಸಹ ಬೇಕು ಎನಿಸಿದೆ. ಈ ರೀತಿಯಲ್ಲಿ ಆರಂಭ ಘಟ್ಟದ ಭಾಷಾಂತರಕಾರರು 'ರೂಪಾಂತರ' ಪಾತ್ರಗಳ ಹೆಸರುಗಳ ಯಾದಿಯನ್ನು ಕೊಡುವಾಗ ಯಾವು ಯಾವ ನೆಲೆಯೆ ತಮ್ಮ ಪಥ್ಯವನ್ನು ರೂಪಿಸಿಕೊಂಡಿದ್ದೇವೆ ಎಂಬುದಕ್ಕೆ ಪೂರಕವಾಗಿ ಭಿನ್ನ ಮಾದರಿಗಳನ್ನು ಕಂಡುಕೊಂಡಿದ್ದಾರೆ ಅದು ವೈವಿಧ್ಯಪೂರ್ಣವಾಗಿದೆ.

**೮.೩.೩. ಪಾತ್ರಗಳ ಹೆಸರುಗಳ 'ರೂಪಾಂತರ' ಮತ್ತು ರೂಪಾಂತರ ಪಥ್ಯಗಳು**

ಪಾತ್ರಗಳ 'ರೂಪಾಂತರ' ಪಟ್ಟಿಯನ್ನು ಗಮನಿಸಿದಾಗ ಈ ಪಾತ್ರಗಳು ಮೂಲದಿಂದ ಯಾವಬಗೆಯಲ್ಲಿ 'ರೂಪಾಂತರ'ಗೊಂಡಿವೆ ಎಂಬುದನ್ನು ತಿಳಿಯಬಹುದು. ಪಾತ್ರಗಳ ಹೆಸರುಗಳ ರೂಪಾಂತರ ಪ್ರಮುಖವಾಗಿ ಅನುಸರಿಸಿದ ಮಾದರಿಗಳೆಂದರೆ ಒಂದು, ಪರಿಚಿತ ಪುರಾಣ ಕಾವ್ಯಗಳಲ್ಲಿನ ವ್ಯಕ್ತಿಗಳ ಹೆಸರನ್ನು ರೂಪಾಂತರ ಪಾತ್ರಗಳಿಗೆ ಕೊಟ್ಟಿರುವುದು. ಎರಡು, ಪಾತ್ರಗಳನ್ನು ಸಮಕಾಲೀನ ಹೆಸರುಗಳನ್ನು ನೀಡುತ್ತಿರುವುದು ಮೂರು, ಪಾತ್ರಗಳ ಸ್ವಭಾವಕ್ಕೆ ಅನುಸಾರವಾಗಿ ಹೊಸ ಹೆಸರುಗಳನ್ನು ಕೊಟ್ಟಿರುವುದು. ನಾಲ್ಕು, ವರ್ಗ ಸಮುದಾಯಗಳಿಗೆ ಅನುಸಾರವಾದ ಹೆಸರುಗಳಲ್ಲಿ ಪಾತ್ರಗಳ ರೂಪಾಂತರ. ಇನೊಂದು ಮುಖ್ಯವಾದುದೆಂದರೆ ಪಾತ್ರಗಳ ಹೆಸರುಗಳ ಉಚ್ಚಾರಕ್ಕನುಸಾರವಾಗಿ ಧ್ವನಿಪ್ರಸ್ತಾನದ ಹಿನ್ನೆಲೆಯಲ್ಲಿ ಹೊಸ ಹೆಸರುಗಳನ್ನು ಟಂಕಿಸಿರುವುದು. ಇತ್ಯಾದಿ ಮಾದರಿಗಳಲ್ಲಿ ಪಾತ್ರಗಳ ಹೆಸರುಗಳ ರೂಪಾಂತರ ನಡೆದಿದೆ.

೧. ಕನ್ನಡದಲ್ಲಿ 'A Midsummer Night's Dream' ನಾಟಕದ Theseus ಕನ್ನಡದ 'ಅರ್ಜುನ'ನಾದರೆ Hoppolyta ಪ್ರಮಿಳಿಯಾಗಿದ್ದಾಳೆ, Hrrmia 'ನಿರ್ಮಲೆ'ಯಾದರೆ Titara 'ರತಿದೇವಿ'ಯಾಗಿದ್ದಾಳೆ. ಈ ಎಲ್ಲಾ ಹೆಸರುಗಳು ಪುರಾಣಗಳ ಮೂಲಕ ಭಾರತೀಯರಿಗೆ ಪರಿಚಿತವಿರುವ ಹೆಸರುಗಳಾಗಿವೆ. 'ರೂಪಾಂತರ' ಕೃತಿಯೊಂದು ಈ ಪರಿಸರದ್ದು ಎಂದಾಗಬೇಕಾದರೆ ಪಾತ್ರಗಳ ಹೆಸರು ಕೂಡ ಗೊತ್ತಿರುವವೆ ಆಗಬೇಕು. ಈ ಕಾರಣದಿಂದ ಇಲ್ಲಿನ ಪಾತ್ರಗಳನ್ನು ಆಯ್ದು 'ರೂಪಾಂತರ' ಪಾತ್ರಗಳಿಗೆ ಹೆಸರನ್ನು ನೀಡಿದ್ದಾರೆ ಎನ್ನಬಹುದು. 'ಇಂಗ್ಲಿಷ್ ಗೀತಗಳು' ಪೂರ್ವದ ರೂಪಾಂತರಕಾರರು ಇಡೀ ನಾಟಕವನ್ನೇ ಭಾರತೀಕರಿಸುವ/ಕನ್ನಡೀಕರಿಸುವ ಪ್ರಯತ್ನದಲ್ಲಿದ್ದಾಗ ಸಹಜವಾಗಿ ಪಾತ್ರಗಳನ್ನೂ ಸಹ ಭಾರತೀಕರಣಗೊಳಿಸಬೇಕಿತ್ತು. ಇದರಿಂದಾಗಿ Synorix-ಸುವರ್ಣಕ್ಷನಾಗಿ, Lacentia ಚಂದ್ರವರ್ಮನಾಗಿಯೂ ಶೂರಸೇನನಾಗಿ, Cassio ವಿಜಯಧ್ವಜನಾದಂತೆ ದೇವದತ್ತ, ಕಂಠೀರವ, ಅನಂತಸೇನ

ಇತ್ಯಾದಿ 'ರೂಪಾಂತರ'ಗೊಂಡ ಪಾತ್ರಗಳು ಕನ್ನಡೀಕರಣಗೊಂಡಿವೆ ಅಥವಾ ಭಾರತೀಯ ಪಾತ್ರಗಳಾಗಿ 'ರೂಪಾಂತರ'ಗೊಂಡಿವೆ.

೨. ಕನ್ನಡ ರೂಪಾಂತರಕಾರರು ತಮ್ಮ ಪಾತ್ರಗಳ ಸ್ವಭಾವಕ್ಕೆ ಅನುಸಾರವಾದ ಹೆಸರುಗಳನ್ನಿಟ್ಟಿರುವುದು ಪಾತ್ರಗಳ ರೂಪಾಂತರದಲ್ಲಿನ ವಿಶಿಷ್ಟ ವಿಧಾನವಾಗಿದೆ. ಸ್ವಭಾವಕ್ಕನುಸಾರವಾದ ಹೆಸರುಗಳಲ್ಲಿ 'ರೂಪಾಂತರ'ಗೊಂಡ ಪಾತ್ರಗಳೆಂದರೆ ದುಷ್ಟಬುದ್ಧಿ, ದಯಾಘನ, ಕುಟಿಲೆ, ವಿಷಜೆ, ಕಠೋರಮಲ್ಲ ಇತ್ಯಾದಿಗಳು. ಇವುಗಳ ಸ್ವಭಾವಕ್ಕೆ ಹೆಸರುಗಳು ಅನ್ವರ್ಥಗೊಂಡಿವೆ. ಅಂದರೆ ಈ ಕ್ರಮ ಹೊಸದೇನಲ್ಲ, ಭಾರತೀಯ ಸಂದರ್ಭದಲ್ಲಿ ಈ ಮಾದರಿಯ ವ್ಯಕ್ತಿಗಳ ಹೆಸರು ಬಂದು ಹೋಗಿವೆ. ಉದಾಹರಣೆಗೆ ಭಾರತದ ದುರ್ಯೋಧನ, ಚಂದ್ರಹಾಸ ಪಠ್ಯದಲ್ಲಿನ ದುಷ್ಟಬುದ್ಧಿ ಮತ್ತು ಕಂಸ ಮುಂತಾದವರು.

೩. ಇಲ್ಲಿ ಕೆಲವು ನಾಟಕಗಳು ಮಧ್ಯವರ್ತಿ ಭಾಷೆಗಳಿಂದ ಬಂದಿವೆ. ಹಾಗೇ ಬರುವಾಗ ಅಲ್ಲಿನ ಪಾತ್ರಗಳ ಹೆಸರುಗಳನ್ನು ಕೂಡಿಸಿಕೊಂಡಿರುವ, ಕೆಲವನ್ನು ಬಿಡುವ ಕೆಲಸಗಳೂ ನಡೆದಿವೆ. ಉದಾಹರಣೆಗೆ 'ಪದ್ಮಿನಿ' ನಾಟಕ ತೆಲುಗಿನ 'ಪದ್ಮಿನಿ ಪ್ರಭಾಕರ'ದ 'ರೂಪಾಂತರ'ದಲ್ಲಿನ ಹೆಸರುಗಳು ಇಲ್ಲಿಯೂ ಮುಂದುವರಿದಿದೆ. ಆದರೆ ಹೊನ್ನಾಪುರ ಮಠ ಅವರು 'ತ್ರಾಟಿಕಾನಾಟಕ'ವನ್ನು ಕೇಳ್ಕರರ ಮರಾಠಿ ಆವೃತ್ತಿಯಿಂದ ಕನ್ನಡಕ್ಕೆ ರೂಪಾಂತರಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಪಾತ್ರಗಳ 'ರೂಪಾಂತರ'ದ ಕುರಿತು ಹೇಳುವುದೇನೆಂದರೆ ''ಕೇಳ್ಕರರು ತಮ್ಮ ಮರಾಠಿ ನಾಟಕದಲ್ಲಿ ಮುಖ್ಯನಾಯಕ ನಾಯಕಿಯರಿಗೆ 'ಪ್ರತಾಪರಾವ್' ಮತ್ತು 'ತ್ರಾಟಿಕಾ' ಎಂತಲೂ ತ್ರಾಟಕೆಯ ತಂಗಿಯ ಹೆಸರನ್ನು 'ಕಮಲಾ' ಎಂತಲೂ ಕೊಟ್ಟಿರುವಂತೆ ನಾನಾದರೂ ಆ ಮೂರು ಪಾತ್ರಗಳಿಗೆ ಅದೇ ಹೆಸರುಗಳನ್ನು ಕೊಟ್ಟು ಮಿಕ್ಕ ಪಾತ್ರಗಳ ಹೆಸರುಗಳನ್ನು ಮಾತ್ರ ಬದಲಿಸಿರುತ್ತೇನೆ'' (ಹೊನ್ನಾಪುರ ಮಠ ೧೯೨೦, ಪ್ರಸ್ತಾವನೆ, ೧೨) ಎಂದಿದ್ದಾರೆ. ಆದರೆ ಇದೇ ನಾಟಕದ ಮೂರನೇ ಆವೃತ್ತಿಯಲ್ಲಿ ಪಾತ್ರಗಳ 'ರೂಪಾಂತರ' ಕುರಿತು ಇನ್ನೂ ಭಿನ್ನವಾದ ವಿಚಾರ ಹೇಳುತ್ತಾರೆ. ''ಕೇಳ್ಕರರು ತಮ್ಮ ನಾಟಕದ ಪಾತ್ರಗಳನ್ನು ಮಾಂಸಾಹಾರಿ ಮರಾಠಿ ಸಮಾಜದಿಂದ ತೆಗೆದುಗೊಂಡಿದ್ದು ನಾನು ನನ್ನ ಪಾತ್ರಗಳನ್ನು ಶಾಖಾಹಾರಿ ಬ್ರಾಹ್ಮಣ ಸಮಾಜದಿಂದ ತೆಗೆದುಕೊಂಡಿದ್ದೇನೆ. ಆದುದರಿಂದ ಅರ್ಥಾತ್ ನಾನು ಅವರ ಭಾಷಣಗಳನ್ನು ಹೆಚ್ಚು ಕಡಿಮೆ ಮಾಡಿರುತ್ತೇನೆ. ಹಾಗೇ ನನ್ನ ಪಾತ್ರಗಳ ಹೆಸರುಗಳನ್ನು ಪ್ರತಾಪ, ತ್ರಾಟಿಕಾ ಮತ್ತು ಕಮಲಾ ಈ ಮೂರನ್ನು ಹೊರತುಪಡಿಸಿ ಉಳಿದವುಗಳನ್ನು ಕನ್ನಡ ಸಮಾಜಕ್ಕೆ ಒಪ್ಪುವಂತೆ ಹೊಸವು ಇಟ್ಟಿರುತ್ತೇನೆ'' (ಹೊನ್ನಾಪುರ ಮಠ, ೧೯೨೯, ಪ್ರಸ್ತಾವನೆ) ಎಂದಿರುವರು.

೪. ಪಾತ್ರಗಳ ರೂಪಾಂತರಗಳಲ್ಲಿ ನಡೆದ ಇನ್ನೊಂದು ಗಮನಾರ್ಹವಾದ ವಿಧಾನವೆಂದರೆ ಮೂಲ ಪಾತ್ರಗಳನ್ನು ಧ್ವನಿಸ್ವಾಮ್ಯತೆಗೆ/ವಿಚಾರಕ್ಕನುಗುಣವಾಗಿ ಹೊಸ ಹೆಸರುಗಳನ್ನು ಟಂಕಿಸಿಕೊಂಡಿರುವುದು 'ರೋಮಿಯೋ ಜ್ಯೂಲಿಯಟ್' ಮತ್ತು 'ದ ಕಪ್' ನಾಟಕಗಳ ಪಾತ್ರಗಳ ಹೆಸರುಗಳು ಬಹುತೇಕವಾಗಿ ಧ್ವನಿಸ್ವಾಮ್ಯತೆಗೆ ಅನುಗುಣವಾಗಿಯೇ 'ರೂಪಾಂತರ'ಗೊಂಡಿರುವುದನ್ನು ಕಾಣಬಹುದು.

ಆನಂದರಾವ್ ಅವರು 'Romeio'ವನ್ನು 'ರಾಮವರ್ಮ'ನನ್ನಾಗಿ ರೂಪಾಂತರಿಸಿದರೆ ಕೆರೂರರು 'ರಮೇಶ' ಎಂತಲೂ 'ಜ್ಯೂಲಿಯಟ್' ಕ್ರಮವಾಗಿ 'ಲೀಲಾವತಿ', 'ಲಲಿತ'ಳಾಗಿ ರೂಪಾಂತರಗೊಂಡಿವೆ. ನಾಟಕದ ಉಳಿದ ಪಾತ್ರಗಳು ಹೆಸರುಗಳು ಸಹ ಇದೇ ಮಾದರಿಯಲ್ಲಿ ರೂಪಾಂತಗೊಂಡಿವೆ. 'Paris'-'ಪೇಶಲಾಂಗ', 'Gregory'-'ಗ್ರೈವೇಯಕ', 'Capulet'-'ಕಾಫಿಲ', 'ಕಪಿಲವರ್ಮ' ಮತ್ತು 'Tybalt'-'ತ್ರೈವಿಕ್ರಮ' ಎಂಬ ಹೆಸರುಗಳಲ್ಲಿ 'ರೂಪಾಂತರ'ಗೊಂಡಿವೆ.

ಗೋಲ್ಡ್‌ಸ್ಮಿತ್‌ನ The Cup ನಾಟಕವನ್ನು 'ಕನಕಾಲುಕ/ಕಮಲಿನೀ ಚರಿತಂ' ಎಂದು ರೂಪಾಂತರಿಸಿದ ಡಿ.ವಿ.ಜಿ.ಯವರು ಸಹ ನಾಟಕಗಳ ಪಾತ್ರಗಳ ಹೆಸರುಗಳನ್ನು ಧ್ವನಿಸಾಮ್ಯತೆಯ ಹಿನ್ನೆಲೆಯಲ್ಲಿಯೇ 'ರೂಪಾಂತರಿಸಿ'ಕೊಂಡಿದ್ದಾರೆ. 'Synorix'-'ಸುವರ್ಣಾಕ್ಷನಾದರೆ' 'Comma'-'ಕಮಲಿನಿ'ಯಾಗಿದ್ದಾಳೆ ಹಾಗೇ 'Phoebe'-'ಪ್ರಭಾವತಿ'ಯಾಗಿಯೂ 'ರೂಪಾಂತರ'ಗೊಂಡಿರುವುದು ಕುತೂಹಲಕಾರಿ. (ಪಾತ್ರಗಳ ಹೆಸರುಗಳ ರೂಪಾಂತರ ಪಟ್ಟಿಯನ್ನು ಹಿಂದಿನಭಾಗದಲ್ಲಿ ಗಮನಿಸಬಹುದಾಗಿದೆ.) ಇಂಗ್ಲಿಷ್ ಪಾತ್ರಗಳ ಹೆಸರುಗಳನ್ನು ಕನ್ನಡದಲ್ಲಿ ಉಚ್ಚರಿಸುವ ಬಗೆಯಲ್ಲಿಯೇ ಅದೇ ಮಾದರಿಯಲ್ಲಿ ಕನ್ನಡದ ಹೆಸರುಗಳನ್ನು ಟಂಕಿಸಿರುವುದು ಗಮನಾರ್ಹವಾದುದು. ಹೀಗೆ ಪಾತ್ರಗಳು, ಶೀರ್ಷಿಕೆಗಳು (Hamlet- ಹೇಮಲತಾ) ಉಚ್ಚಾರಕನುಸಾರವಾಗಿ ರೂಪಾಂತರವಾಗಿರುವ ಬಗ್ಗೆ ಶ್ರೀಕಂಠೇಶಗೌಡರು ಸ್ವಲ್ಪ ವಿವರಿಸಿದ್ದನ್ನು ಹೊರತುಪಡಿಸಿದರೆ ಇತರ ರೂಪಾಂತರಕಾರರು ಈ ಕುರಿತು ಪ್ರಸ್ತಾಪಿಸಿದ ಮಾಹಿತಿಗಳಿಲ್ಲ.

ಹೀಗೆ ವಿಭಿನ್ನ ಮಾದರಿಯಲ್ಲಿ ಪಾತ್ರಗಳ 'ರೂಪಾಂತರ' ಪ್ರಕ್ರಿಯೆ ನಡೆದಿದೆ. ''ಗ್ರಂಥವು ವಾಚಕರಿಗೆ ಕನ್ನಡ ಸ್ವರೂಪ ಉಳ್ಳದ್ದಾಗಿಯೇ ಕಾಣಲೆಂದು ಪಾತ್ರಗಳಿಗೆಲ್ಲ ಯೋಗ್ಯತಾನುಸಾರವಾದ ನಮ್ಮ ದೇಶದ ಹೆಸರುಗಳನ್ನು ಇಟ್ಟಿದೆ'' (ಪುಟ್ಟಣ್ಣ, ೧೮೯೦, ಪೀಠಿಕೆ). ಎಂದಿರುವುದು ಎಲ್ಲಾ ಪಾತ್ರಗಳ ರೂಪಾಂತರಕ್ಕೆ ಅನ್ವಯಿಸುತ್ತದೆ. ಶೀರ್ಷಿಕೆಗಳ 'ರೂಪಾಂತರ'ದಂತೆ ಪಾತ್ರಗಳ ಹೆಸರುಗಳ 'ರೂಪಾಂತರ'ದ ಕುರಿತು ಕೆಲವೇ ಕೆಲವು ರೂಪಾಂತರಕಾರರು ಪ್ರಸ್ತಾಪಿಸಿದರೂ ಅವರು ಆಕಾಲದಲ್ಲಿ ನಡೆದ ಪಾತ್ರಗಳ ಒಟ್ಟು 'ರೂಪಾಂತರ' ಪ್ರಕ್ರಿಯೆಯನ್ನು ಗಮನಿಸಿದ್ದಾರೆ ಎನ್ನಬಹುದು.

ಈರೀತಿಯಲ್ಲಿ ಪಾತ್ರಗಳ 'ರೂಪಾಂತರ' ಪ್ರಕ್ರಿಯೆ ವಿಶಿಷ್ಟ ತಾತ್ವಿಕ ನೆಲೆಯಲ್ಲಿ ರೂಪುಗೊಂಡಿರುವುದು ಗಮನಾರ್ಹವಾಗಿದೆ. ಎಲ್ಲಾ ರೂಪಾಂತರಕಾರರ ಗುರಿ ಪಾತ್ರಗಳನ್ನು 'ಸ್ಥಳೀಕರಿಸು'ವುದೇ ಆಗಿತ್ತು. ಹಾಗಾಗಿ ಕೆಲವರು ಪುರಾಣಗಳಿಂದ ಪಾತ್ರಗಳ ಹೆಸರನ್ನು ಆಯ್ದುಕೊಂಡರೆ ಇನ್ನೂ ಕೆಲವರು ಮಧ್ಯವರ್ತಿ ಭಾಷೆಗಳಲ್ಲಿನ ಹೆಸರುಗಳನ್ನು ಹಾಗೇ ಉಳಿಸಿಕೊಳ್ಳಲು ಪ್ರಯತ್ನಿಸಿದರು. ಸ್ವಭಾವ, ಉಚ್ಚಾರಣೆ, ಸಮಕಾಲೀನ ಹೆಸರುಗಳ ಮತ್ತು ಸಮುದಾಯಗಳ ಹಿನ್ನೆಲೆಯಲ್ಲಿ ಪಾತ್ರಗಳನ್ನು ಕೊಡುವ ಟಂಕಿಸುವ ಕೆಲಸ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯಲ್ಲಿ ನಡೆದಿದೆ. ಪಾತ್ರಗಳ 'ರೂಪಾಂತರ'ಪ್ರಕ್ರಿಯೆ ಹಾಗೂ ನಾಟಕದ ಶೀರ್ಷಿಕೆಗಳ 'ರೂಪಾಂತರ' ಒಂದೇ ಸೈದ್ಧಾಂತಿಕ ನೆಲೆಯನ್ನು ಹೊಂದಿವೆ.

ಒಟ್ಟಾರೆಯಾಗಿ ಪಾತ್ರಗಳ ರೂಪಾಂತರದ ಮೂಲಕವೂ ಇಂಗ್ಲಿಷ್ ನಾಟಕಗಳನ್ನು ಕನ್ನಡದ ಸಂದರ್ಭ, ಸನ್ನಿವೇಶಗಳಲ್ಲಿ ರೂಪಾಂತರಿಸುವುದರೊಂದಿಗೆ ಅವುಗಳಿಗೆ ಭಾರತೀಯ ಪುರಾಣ. ಕಾವ್ಯದ ಪಾತ್ರಗಳ

ವೇಶಭೂಷಣವನ್ನು ತೊಡಿಸಿದ್ದಾರೆ. ಪಾತ್ರಗಳ ಹೆಸರುಗಳ 'ರೂಪಾಂತರ'ವು ನಾಟಕದ 'ರೂಪಾಂತರ'ದ ಕುರಿತು ಸಮಗ್ರವಾಗಿ ಚರ್ಚಿಸುವಾಗ ಮುಖ್ಯವಾದುದಾಗಿದೆ.

**೮.೪. ಸನ್ನಿವೇಶಗಳ ರೂಪಾಂತರ**

'ರೂಪಾಂತರ' ಪ್ರಕ್ರಿಯೆಯಲ್ಲಿನ ಶೀರ್ಷಿಕೆ, ಪಾತ್ರಗಳ 'ರೂಪಾಂತರ'ದಂತೆಯೇ ಸನ್ನಿವೇಶಗಳ 'ರೂಪಾಂತರ'ವು ಮುಖ್ಯವಾದುದು. ತಮ್ಮ ಸಂಸ್ಕೃತಿಗೆ ಭಿನ್ನವಾದ ಪಠ್ಯವೊಂದನ್ನು ತಮ್ಮ ಸಾಮಾಜಿಕ ಸಂದರ್ಭಕ್ಕೆ ತಂದುಕೊಳ್ಳುವಾಗ ಸನ್ನಿವೇಶಗಳ 'ರೂಪಾಂತರ' ಅಗತ್ಯವೆನ್ನಬಹುದು. ಕನ್ನಡದಲ್ಲಿ ನಡೆದ 'ರೂಪಾಂತರ' ಪ್ರಕ್ರಿಯೆಯಲ್ಲಿ ಇದನ್ನು ನಾವು ಗಮನಿಸಬಹುದು. 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಡೆದ ನಾಟಕಗಳ 'ರೂಪಾಂತರ'ದಲ್ಲಿ ಸನ್ನಿವೇಶಗಳ ರೂಪಾಂತರ ಗಮನಾರ್ಹವಾಗಿದೆ. ಈ ಕಾಲಾವಧಿಯ ಬಹುತೇಕ ರೂಪಾಂತರಕಾರರು ಇಂಗ್ಲಿಷ್ ಪಠ್ಯವನ್ನು ಕನ್ನಡದ ಸನ್ನಿವೇಶಗಳಲ್ಲಿ ರೂಪಿಸಿಕೊಳ್ಳುವಾಗ ತಮಗೆ ಸರಿಯೆನಿಸಿದ ರೀತಿಯಲ್ಲಿ ಅಥವಾ ಕನ್ನಡದ/ಭಾರತದ ಸಂದರ್ಭಕ್ಕೆ ಒಗ್ಗುವಂತೆ ಸನ್ನಿವೇಶಗಳನ್ನು ರೂಪಾಂತರಿಸಿಕೊಂಡಿದ್ದಾರೆ. ಹೀಗೆ ರೂಪಾಂತರಿಸುವಾಗ ಹೊಸ ಸನ್ನಿವೇಶಗಳ ನಿರ್ಮಾಣ, ಇಲ್ಲಿರುವ ಸನ್ನಿವೇಶಗಳನ್ನು ಮಾರ್ಪಡಿಸಿಕೊಂಡಿರುವ ಕ್ರಮ ಮತ್ತು ಇರುವ ಸನ್ನಿವೇಶಗಳಿಗೆ ಹೊಂದಿಸಿಕೊಳ್ಳುವ ಪ್ರಯತ್ನನಡೆಸಿದೆ. ಈ ಸನ್ನಿವೇಶಗಳ 'ರೂಪಾಂತರ'ವನ್ನು 'ಸನ್ನಿವೇಶಗಳ ಭಾರತೀಕರಣ' ಎಂದು ಸೈದ್ಧಾಂತಿಕ ನೆಲೆಯಲ್ಲಿ ಗುರುತಿಸಿಕೊಳ್ಳಬಹುದು.

ಯುರೋಪಿನ ಸನ್ನಿವೇಶಗಳಲ್ಲಿ ರೂಪುಗೊಂಡ ನಾಟಕಗಳನ್ನು ಹಾಗೆಯೇ ಕನ್ನಡಕ್ಕೆ ತಂದುಕೊಳ್ಳುವ ಬದಲು ಅವುಗಳನ್ನು ಭಾರತೀಯ ಸನ್ನಿವೇಶಗಳಲ್ಲಿ ರೂಪಿಸಿಕೊಳ್ಳುವ ಮೂಲಕ 'ರೂಪಾಂತರ' ಮಾಡುವುದು ಸನ್ನಿವೇಶಗಳ ಭಾರತೀಕರಣವಾಗಿದೆ. ಮೂಲದ ರಾಜ, ರಾಣಿ ಇತರ ಮಂತ್ರಿ ಪರಿವಾರದ ಸನ್ನಿವೇಶಗಳನ್ನು ಭಾರತೀಯ ಪುರಾಣ ಇತಿಹಾಸಗಳಲ್ಲಿನ ವಿವರಗಳಲ್ಲಿ ರೂಪಾಂತರಿಸಿರುವುದನ್ನು ಹೆಚ್ಚಿನ 'ರೂಪಾಂತರ' ಪಠ್ಯಗಳಲ್ಲಿ ಕಾಣಬಹುದು.

'ಪ್ರಮಿಳಾರ್ಜುನೀಯಂ' ನಾಟಕದಲ್ಲಿ ಪ್ರಮಿಳೆ ಕೇರಳದವಳಾಗಿದ್ದಾಳೆ. ಹಾಗೆಯೇ ಸಮಕಾಲೀನ ಸನ್ನಿವೇಶವು ಪುರಾಣದೊಂದಿಗೆ ಬೆಸೆದುಕೊಂಡು ಎರಡೂ ಜೊತೆಯಾಗಿಸಿ ಒಂದೇ ಸನ್ನಿವೇಶವನ್ನು ನಾಟಕಕಾರರು ಕನ್ನಡದಲ್ಲಿ ರೂಪಿಸಿಕೊಂಡಿದ್ದಾರೆ. 'ಮೂಲ' ನಾಟಕದ ಸನ್ನಿವೇಶ ಇಲ್ಲಿ ಭಾರತೀಕರಣಗೊಂಡಿದೆ. ಕೆರೂರರು 'ಸುರತನಗರದ ಶ್ರೇಷ್ಠಿಯು' ನಾಟಕದಲ್ಲಿ ಮೂಲದಲ್ಲಿನ ಯಹೂದಿಯರನ್ನು ಮಾರ್ವಾಡಿಗಳನ್ನಾಗಿ ರೂಪಾಂತರಿಸುವದರೊಂದಿಗೆ ಸನ್ನಿವೇಶವನ್ನು ಭಾರತೀಯ ಸ್ವರೂಪದಲ್ಲಿ ರೂಪಿಸಿಕೊಂಡಿರುವುದನ್ನು ಕಾಣಬಹುದು.

ಬಸವಪ್ಪಶಾಸ್ತ್ರಿಯವರ 'ಶೂರಸೇನ ಚರಿತ್ರೆ'ಯಲ್ಲಿ ಸನ್ನಿವೇಶಗಳು ಭಾರತೀಕರಣಗೊಂಡಿವೆ. ಮೂಲ ನಾಟಕದಲ್ಲಿನ Othello, 'ಶೂರಸೇನ'ನಾಗಿ 'Desdemona'-'ಮೋಹನೆ'ಯಾಗಿ ಭಾರತೀಯ ಸೇನಾಧಿಕಾರಿಯ ಮಡದಿಯಾಗಿದ್ದಾಳೆ ಹಾಗೂ ನಾಟಕದ ಸನ್ನಿವೇಶಗಳು ಭಾರತೀಕರಣಗೊಂಡು ಭಾರತೀಯರಲ್ಲಿಯೇ ನಡೆದ ಕತೆಯನ್ನಾಗಿ ರೂಪಿಸಲು ರೂಪಾಂತರಕಾರರು ಪ್ರಯತ್ನಿಸಿದ್ದಾರೆ. ಇದೇ ರೀತಿ ಇನ್ನೂ ಸಮರ್ಪಕವಾಗಿ ಸನ್ನಿವೇಶಗಳು ರೂಪಾಂತರಗೊಂಡ ನಾಟಕ ಚುರಮರಿಯವರ ' ರಾಘವೇಂದ್ರರಾವ್ ನಾಟಕ', ಮೇಲ್ವರ್ಗದಲ್ಲಿ ಆಧುನಿಕ ಶಿಕ್ಷಣ ಪಡೆದವರಲ್ಲಿನ ಅಧಿಕಾರಕ್ಕಾಗಿ ದಾಹ, ತಂತ್ರಗಾರಿಕೆ, ಇತ್ಯಾದಿಗಳನ್ನು Othello ನಾಟಕದ 'ರೂಪಾಂತರ'ದಲ್ಲಿ ಕಾಣುತ್ತೇವೆ. ಮೂಲದಲ್ಲಿನ Othello ತೆಲುಗು ಬ್ರಾಹ್ಮಣ ರಾಘವೇಂದ್ರರಾವ್‌ನಾಗಿ ರೂಪುಗೊಂಡು, ಸವಿಮಾತಿಗೆ

ಸೋತು ಸ್ವಂತ ನಿರ್ಧಾರವಿಲ್ಲದೆ ಹೇಗೆ ಅವಸಾನ ಹೊಂದುತ್ತಾನೆ ಎಂಬುದನ್ನು ಭಾರತೀಯ ಸಂದರ್ಭದಲ್ಲಿ ರೂಪಿಸಿಕೊಳ್ಳಲಾಗಿದೆ. ಇಲ್ಲಿ ನಾಟಕ ನೌಕರಶಾಹಿ ಸನ್ನಿವೇಶದಲ್ಲಿ 'ರೂಪಾಂತರ'ಗೊಂಡಿದೆ.

ಭಾರತೀಯ ರಾಜರ ಆಡಳಿತ ಅಲ್ಲಿನ ಮಂತ್ರಿ ನಾಯಕರ ನಡುವಿನ ಅಧಿಕಾರಕ್ಕಾಗಿ ನಡೆದ ಅಂತರಿಕ ಹೋರಾಟವಾಗಿ ರಾಘವೇಂದ್ರರಾವ್ ನಾಟಕವನ್ನು ಭಾರತೀಯ ಸಂದರ್ಭಕ್ಕೆ ಅಳವಡಿಸಿಕೊಂಡಿದ್ದಾರೆ. ಹಾಗೂ ಇದರಲ್ಲಿ ಚುರಮರಿಯವರು ಯಶಸ್ವಿಯಾಗಿದ್ದಾರೆಯೆಂದೇ ಹೇಳಬೇಕು. ಸಂಪೂರ್ಣ ನಾಟಕ ಭಾರತದ ಯಾವುದೋ ರಾಜನ ಆಡಳಿತದ ನಡೆದ ಸನ್ನಿವೇಶದಂತೆ 'ರೂಪಾಂತರ'ಗೊಂಡಿದೆ.

ಲಕ್ಷ್ಮಣರಾವ್ ಅವರ 'ಚಂಡಿಮದರ್ಧನ ನಾಟಕಂ' ಹಾಗೂ ಹೊನ್ನಾಪುರ ಮಠ ಅವರ 'ತ್ರಾಟಿಕಾನಾಟಕ'ಗಳೆರಡನ್ನು ಕನ್ನಡದ ಸಂದರ್ಭದ ಸನ್ನಿವೇಶಗಳಲ್ಲಿ ರೂಪಿಸಿಕೊಳ್ಳಲಾಗಿದೆ. 'ಚಂಡಿಮದಮರ್ಧನ ನಾಟಕಂ'ದಲ್ಲಿ ಪೀಠಿಕೆಗಾಗಿ ಹೊಸ ಸನ್ನಿವೇಶವನ್ನು ಸೃಷ್ಟಿಸಿಕೊಳ್ಳುವುದರೊಂದಿಗೆ ಆ ಸನ್ನಿವೇಶದಲ್ಲಿ ಮದ್ಯಪಾಯಿ ಒಬ್ಬನಿಗೆ ನಿನಗೊಂದು ನಾಟಕ ತೋರಿಸುತ್ತೇನೆಂದು ರಾಜಪರಿವಾರ ಹೇಳಿ ಆತನಿಗೆ 'The Taming of shrew' ನಾಟಕದ 'ರೂಪಾಂತರ' 'ಚಂಡಿಮದಮರ್ಧನ ನಾಟಕ'ವನ್ನು ತೋರಿಸಲಾಗುತ್ತದೆ. ಈ ನಾಟಕದ ಇಡೀ ಸನ್ನಿವೇಶ ಕನ್ನಡದ ಪ್ರದೇಶಕ್ಕೆ ಪ್ರಾದೇಶೀಕರಣಗೊಂಡಿದ್ದು ಹಟಮಾರಿ ಹೆಣ್ಣು, ಅವಳನ್ನು ಪಳಗಿಸುವ ಗಂಡು ಇವರುಗಳ ಸುತ್ತ ನಾಟಕ ಹೆಣೆದುಕೊಂಡಿದೆ. ಕನ್ನಡದ ಸಂದರ್ಭದ ಹಟಮಾರಿ ಹೆಣ್ಣನ್ನು ಗಂಡು ಹೇಗೆ ಪಳಗಿಸಬಹುದು ಎಂಬ ರೀತಿಯಲ್ಲಿ ನಾಟಕ ರೂಪುಗೊಂಡಿದೆ.

ಹೀಗೆ ಪಾತ್ರ ಮತ್ತು ಶೀರ್ಷಿಕೆಗಳನ್ನು ಕನ್ನಡೀಕರಿಸಿಕೊಂಡಂತೆ ಸನ್ನಿವೇಶಗಳನ್ನು ಸಹ ಕನ್ನಡೀಕರಿಸಿದ್ದಾರೆ.

ಹೀಗೆ ನಾಟಕಗಳ 'ರೂಪಾಂತರ' ಪ್ರಕ್ರಿಯೆಯಿಂದ ಈ ಕೆಳಗಿನ ಕೆಲವು ಅಂಶಗಳನ್ನು ಗುರುತಿಸಿಕೊಳ್ಳಬಹುದು.

೧. ನಾಟಕಗಳ 'ರೂಪಾಂತರ' ಶೇಕ್ಸ್‌ಪಿಯರ್ ನಂಥಹ ಮಹಾನಾಟಕಕಾರರನ್ನು ಕನ್ನಡದಲ್ಲಿ ಪರಿಚಯಿಸುವ ಮತ್ತು ಆತನ ನಾಟಕಗಳನ್ನು ಓದಲು, ನೋಡಲು ಅವಕಾಶ ಕಲ್ಪಿಸುವ ಉದ್ದೇಶದಿಂದ ನಡೆದಿದೆ.

೨. ನಾಟಕಗಳು 'ರಂಗ ರೂಪಾಂತರ'ಗಳಾಗಿರುವಂತೆ ಗದ್ಯಾನುವಾದವಾಗಿರುವುದು ಕುತೂಹಲಕಾರಿ.

೩. ನೀತಿ ಮತ್ತು ಆಚಾರವನ್ನು ತಿಳಿಸುವ ಭಾಗವಾಗಿ ಇಂಗ್ಲಿಷ್ ನಾಟಕಗಳ ಕನ್ನಡೀಕರಣ ನಡೆದಿದೆ.

೪. ಬಹುತೇಕ ನಾಟಕಗಳು ಶಿಕ್ಷಣದಿಂದ ಪರಿಚಯಗೊಂಡು ನಂತರ ಕನ್ನಡಕ್ಕೆ 'ರೂಪಾಂತರ'ಗೊಂಡಿವೆ.

೫. ಇಂಗ್ಲಿಷ್ ಗೀತಗಳು 'ಪೂರ್ವದ ರೂಪಾಂತರ'ಕಾರರು 'ರೂಪಾಂತರ'ದ ಗುರುತಿನೊಂದಿಗೆ, ಇನ್ನಿತರವಾದ ಸ್ವತಂತ್ರ ರಚನೆ, ರಂಗಭೂಮಿ ಕಾಯಕ ಮುಂತಾದ ಚಹರೆಗಳನ್ನು ಹೊಂದಿದವರಾಗಿದ್ದಾರೆ.

೬. ಈ ಅವಧಿಯಲ್ಲಿ ಶೇಕ್ಸ್‌ಪಿಯರ್ ನಾಟಕಗಳು ಅತಿ ಹೆಚ್ಚು ಸಂಖ್ಯೆಯಲ್ಲಿ ರೂಪಾಂತಗೊಂಡಿರುವುದು ಗಮನಾರ್ಹವಾಗಿದೆ.

೭. ಈ ಕಾಲದ ರೂಪಾಂತರಕಾರರಲ್ಲಿ ಒಬ್ಬ ಮಹಿಳಾ 'ರೂಪಾಂತರ'ಕಾರರು ಇರದಿರುವುದು ಕುತೂಹಲಕಾರಿಯಾಗಿದೆ. (೨೦ನೇ ಶತಮಾನದ ಅರಂಭದಲ್ಲಿ ಸ್ವತಂತ್ರ ರಚನೆಗಳಲ್ಲಿ ಕೆಲವು ಮಹಿಳೆಯರು ತೊಡಸಿಕೊಂಡಿದ್ದರು)

**ಟಿಪ್ಪಣಿ**

೧. ಸುಮಾರು ೧೮೭೪ರಲ್ಲಿ ಎಂಬ As You Like It ಶೇಕ್ಸ್‌ಪಿಯರ್‌ನ ನಾಟಕ ಯಕ್ಷಗಾನ ರೂಪದಲ್ಲಿ ಮೂಡಿಬಂದಿದೆ! (ಹಾವನೂರ, ೨೦೦೦).



ಅಧ್ಯಾಯ ೯

# ಸಮಾರೋಪ

೯.೧. ಭಾಷಾಂತರಕ್ಕೆ ಬಳಸಲಾಗಿರುವ ಪರ್ಯಾಯ (ಭಿನ್ನ) ಹೆಸರುಗಳು

೯.೨. ಭಾಷಾಂತರದ ಉದ್ದೇಶ

೯.೨.೧. ಸಾಹಿತ್ಯೇತರ ಜ್ಞಾನವನ್ನು ಮಾಹಿತಿಯನ್ನು ಕನ್ನಡಕ್ಕೆ ತಂದುಕೊಳ್ಳುವುದು.

೯.೨.೨. ಧಾರ್ಮಿಕ ಉದ್ದೇಶ

೯.೨.೩. ಅನ್ಯಸಾಹಿತ್ಯಿಕ ಪಠ್ಯಗಳನ್ನು ಕನ್ನಡದ್ದಾಗಿಸುವ ಉದ್ದೇಶ

೯.೩. ಭಾಷಾಂತರದ ಮಾದರಿಗಳು

೯.೪. ಭಾಷಾಂತರಗಳ ಓದುಗ ಪರಿಕಲ್ಪನೆ

## ಸಮಾರೋಪ

ಪ್ರಸ್ತುತ ಅಧ್ಯಾಯದಲ್ಲಿ ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿದ ಮಾಹಿತಿಗಳನ್ನು ಗಮನದಲ್ಲಿಟ್ಟುಕೊಂಡು ಹಾಗೂ ಈ ಕಾಲಘಟ್ಟದ (೧೮೫೦ ರಿಂದ ೧೯೨೦) ಭಾಷಾಂತರಕಾರರು ತಮ್ಮ ಮುನ್ನುಡಿ ಹಾಗೂ ಬೆನ್ನುಡಿ ಇತ್ಯಾದಿಗಳಲ್ಲಿ ಭಾಷಾಂತರದ ಕುರಿತು ಹೇಳಿರುವ ಅಥವಾ ಮಂಡಿಸಿರುವ ವಿಚಾರಗಳನ್ನು ಗಮನಿಸಿ ಪ್ರಸ್ತುತ ಅಧ್ಯಯನಕ್ಕೊಂದು ತಾತ್ವಿಕ ನೆಲಗಟ್ಟನ್ನು ಕೊಡುವ ಪ್ರಯತ್ನವನ್ನು ಮಾಡಲಾಗಿದೆ.

'ಇಂಗ್ಲಿಷ್ ಗೀತಗಳು' ಪೂರ್ವದ ಕನ್ನಡದಲ್ಲಿ ಭಾಷಾಂತರ ಚಟುವಟಿಕೆಯು ವಿಪುಲವಾಗಿ ಹಾಗೂ ವೈವಿಧ್ಯಪೂರ್ಣವಾಗಿ ನಡೆದಿರುವುದನ್ನು ಅವುಗಳ ವಸ್ತು ವೈವಿಧ್ಯ ಹಾಗೂ ಭಿನ್ನ ಮಾದರಿಗಳನ್ನು ಈ ಹಿಂದಿನ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಈ ಚರ್ಚೆಯ ಹಿನ್ನೆಲೆಯಲ್ಲಿ ೧೮೫೦ರಿಂದ ೧೯೨೦ರ ಕಾಲಘಟ್ಟದ ಭಾಷಾಂತರದ ಸ್ವರೂಪವನ್ನು ಗಮನಿಸಿದರೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರಕಾರರು ಹಲವು ಆಯಾಮಗಳಿಂದ ಭಾಷಾಂತರ ಚಟುವಟಿಕೆಯನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಹೀಗೆ ಭಾಷಾಂತರವನ್ನು ಅರ್ಥೈಸುವ ಸಂದರ್ಭದಲ್ಲಿ ಏಕೆ ಭಾಷಾಂತರ ಮಾಡಬೇಕು, ಹೇಗೆ ಭಾಷಾಂತರಿಸಬೇಕು ಮತ್ತು ಯಾರಿಗಾಗಿ ಭಾಷಾಂತರಿಸಬೇಕು ಎಂಬಿತ್ಯಾದಿ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಈ ರೀತಿಯಲ್ಲಿ ಭಾಷಾಂತರ ಚಟುವಟಿಕೆಯ ಕುರಿತು ಪ್ರಸ್ತಾಪಿಸಿದ ಅಥವಾ ಹೇಳಲಾದ ವಿಷಯಗಳನ್ನು ಇಲ್ಲಿ ಚರ್ಚಿಸಲಾಗುವುದು.

ಈ ಕಾಲಾವಧಿಯಲ್ಲಿನ ಭಾಷಾಂತರ ಚಟುವಟಿಕೆಯು ಪ್ರಧಾನವಾಗಿ ಎರಡು ಮಾದರಿಯಲ್ಲಿ ನಡೆದಿರುವುದು ಕಂಡು ಬರುತ್ತದೆ. ಒಂದೆರಡು ಅಪವಾದಗಳನ್ನು ಹೊರತುಪಡಿಸಿದರೆ ಬಹುತೇಕ 'ಸಾಹಿತ್ಯಿಕ ಭಾಷಾಂತರ ಪಠ್ಯಗಳು' ಕನ್ನಡಕ್ಕೆ 'ಹೊಂದಿಸುವ' ಪ್ರಯತ್ನವಾಗಿದ್ದರೆ, 'ಸಾಹಿತ್ಯೇತರ ಭಾಷಾಂತರ ಪಠ್ಯಗಳು' 'ಸಂಗ್ರಹ' ಮತ್ತು 'ನೇರ ಭಾಷಾಂತರ' ಮಾದರಿಗಳನ್ನು ಅನುಸರಿಸಿದ್ದಾಗಿದ್ದು ಈ ಎರಡೂ ಮಾದರಿಯ ಪ್ರಕ್ರಿಯೆಗಳು ತಮ್ಮದೇ ಆದ ನೆಲೆಯಲ್ಲಿ ಭಾಷಾಂತರ ಚಟುವಟಿಕೆಯ ಉದ್ದೇಶ, ಸ್ವರೂಪ ಇತ್ಯಾದಿಗಳನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡಿವೆ. ಅಂತಹ ಪ್ರಯತ್ನಗಳನ್ನು ಒಗ್ಗೂಡಿಸಿ ಈ ಕಾಲದಲ್ಲಿನ ಭಾಷಾಂತರ ಚಿಂತನೆಯ ಸ್ವರೂಪವನ್ನು ಕಟ್ಟಿಕೊಳ್ಳಲು ಸಾಧ್ಯವೇ ಎನ್ನುವ ಪ್ರಯತ್ನವನ್ನು ಈ ಅಧ್ಯಾಯವು ಕೈಗೊಂಡಿದೆ.

**೯.೧. ಭಾಷಾಂತರಕ್ಕೆ ಬಳಸಲಾಗಿರುವ ಪರ್ಯಾಯ (ಭಿನ್ನ) ಹೆಸರುಗಳು**

ಈ ಕಾಲವಧಿಯಲ್ಲಿನ ಭಾಷಾಂತರ ಚಟುವಟಿಕೆಯನ್ನು ಗಮನಿಸಿದಾಗ ಭಾಷಾಂತರ ಪ್ರಕ್ರಿಯೆಯನ್ನು ಹಲವಾರು ಭಿನ್ನ ಹೆಸರುಗಳಿಂದ ಕರೆದುಕೊಂಡಿರುವುದನ್ನು ಕಾಣುತ್ತೇವೆ. ಆ ಭಿನ್ನ ಅಥವಾ ಪರ್ಯಾಯ ಹೆಸರುಗಳೆಂದರೆ 'ರೂಪಾಂತರ', 'ಪರಿವರ್ತನ', 'ಕನ್ನಡಿಸು', 'ಅನುವಾದ', 'ಅನುಸರಿಸು', 'ಆಧಾರದಿಂದ', 'ಮಾರ್ಪಡಿಸು' ಮತ್ತು 'ಕರ್ಣಾಟ(ಕ) ಭಾಷಾಂತರ' ಇತ್ಯಾದಿಗಳು. ಹೀಗೆ ಭಾಷಾಂತರಕ್ಕೆ ಸಮನಾಗಿ ಬಳಸಿದ ಇಲ್ಲವೆ ಗುರುತಿಸಿಕೊಂಡ ಈ ಹೆಸರುಗಳು ಭಾಷಾಂತರವನ್ನು ಈ ಕಾಲಘಟ್ಟದಲ್ಲಿ ಹೇಗೆ ಗ್ರಹಿಸಲಾಗಿದೆ ಎಂಬುದನ್ನು ಸೂಚಿಸುತ್ತವೆ. ಹಾಗೂ ಒಂದೇ ಪಠ್ಯವು ಒಂದಕಿಂತ ಹೆಚ್ಚು ಪರ್ಯಾಯ ಹೆಸರುಗಳನ್ನು ಹೊಂದಿರುವುದು ವಿಶ್ಲೇಷಣೆಗೆ ಒಳಪಡಬೇಕಾದ ಅಂಶವಾಗಿದೆ. ಭಾಷಾಂತರಕ್ಕೆ ಪರ್ಯಾಯವಾಗಿ ಬಳಕೆಯಾದ ಪ್ರತಿಯೊಂದು ಹೆಸರೂ ಭಾಷಾಂತರ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವ, ಅರ್ಥೈಸುವ ಪ್ರಯತ್ನವಾಗಿವೆ. ಈ ರೀತಿ ಒಂದಕ್ಕಿಂತ ಹೆಚ್ಚು ಹೆಸರುಗಳಿಂದ ಭಾಷಾಂತರ ಚಟುವಟಿಕೆಯನ್ನು ಕರೆದುಕೊಂಡಿರುವುದನ್ನು ಈ ಕೆಳಗಿನಂತೆ ಗಮನಿಸಬಹುದು.

ಗದಗೆಯ್ಯ ಹೊನ್ನಾಪುರ ಮಠ ಅವರ 'ನಿಂದಾಪ್ರಭಾವ ನಾಟಕ' (೧೯೧೧)ದಲ್ಲಿ ಭಾಷಾಂತರವನ್ನು ಭಿನ್ನ ಹೆಸರುಗಳಿಂದ ಕರೆದಿರುವುದನ್ನು ಕಾಣಬಹುದು. ಪಠ್ಯದ ಮುಖಪುಟದಲ್ಲಿ "ನಿಂದಾಪ್ರಭಾವ ನಾಟಕ ಅಥವಾ ಮುದುಕು ಗಂಡ ಚಿಕ್ಕ ಹೆಂಡತಿ ನಾಟಕ (ಆಂಗ್ಲ ಮಹಾಕವಿ ಶೆರಿಡನ್ ಕೃತ "ದಿ ಸ್ಕೂಲ್ ಫಾರ್ ಸ್ಕ್ಯಾಂಡಲ್" ಎಂಬ ನಾಟಕದ **ಅನುವಾದವು**)" ಎಂದಿದ್ದರೆ, ಪ್ರಸ್ತಾವನೆಯಲ್ಲಿ "ನಾನು ಈ ಸಾಮಾಜಿಕ ನಾಟಕವನ್ನು ಪ್ರಸಿದ್ಧ ಆಂಗ್ಲ ನಾಟಕಾಚಾರ್ಯರಾದ ಶೆರಿಡನ್ ಎಂಬುವರು ರಚಿಸಿದ "ದಿ ಸ್ಕೂಲ್ ಫಾರ್ ಸ್ಕ್ಯಾಂಡಲ್" (The school Foor Scandal) ಎಂಬ ಇಂಗ್ಲೀಷ್ ನಾಟಕದ **ಆಧಾರದಿಂದ** ಬರೆದಿದ್ದೇನೆ" ಎಂದಿದ್ದಾರೆ. ಇವರ ಇನ್ನೊಂದು ನಾಟಕ 'ತ್ರಾಟಿಕಾ ನಾಟಕ' (೧೯೨೦)ದ ಪ್ರಸ್ತಾವನೆಯಲ್ಲಿ "೧೯೧೧ನೇ ಇಸ್ವಿಯಲ್ಲಿ ತ್ರಾಟಿಕಾ ನಾಟಕದ **ಪರಿವರ್ತನ** ಮುಗಿಸಿ.... ಈ ನಾಟಕವು ಒಟ್ಟಿನ ಮೇಲಿಂದ ಮರಾಠಿ ನಾಟಕದ **ಪರಿವರ್ತನ**ವಿದ್ದಾಗ್ಯೂ ಅವಶ್ಯಕಂಡ ಸ್ಥಳಗಳಲ್ಲಿ ಮೂಲನಾಟಕದ **ಆಧಾರದಿಂದ** ಕನ್ನಡಿಗರಿಗೂ ಕನ್ನಡ ರಂಗಭೂಮಿಗೂ ಸರಿಯಾಗುವಂತೆ **ರೂಪಾಂತರ**ವನ್ನು ಮಾಡಿರುತ್ತೇನೆ"ಎಂದಿರುವರು.

ಹೊನ್ನಾಪುರ ಮಠ ಅವರು ತಮ್ಮ ಭಾಷಾಂತರದ ಸಂದರ್ಭದಲ್ಲಿ 'ಅನುವಾದ', 'ಆಧಾರದಿಂದ', 'ಪರಿವರ್ತನ' ಮತ್ತು 'ರೂಪಾಂತರ' ಎಂಬ ನಾಲ್ಕು ಭಿನ್ನ ಹೆಸರುಗಳನ್ನು ಬಳಸಿದ್ದಾರೆ. ಇಂಗ್ಲಿಷ್ ನಾಟಕವನ್ನು ಭಾಷಾಂತರಿಸುವಾಗ ಎನ್ನುವಲ್ಲಿ 'ಅನುವಾದ' ಮತ್ತು 'ಆಧಾರದಿಂದ' ಎಂಬ ಪದಗಳನ್ನು ಬಳಸಿದರೆ, ತಮ್ಮ 'ತ್ರಾಟಿಕಾ ನಾಟಕದ ಭಾಷಾಂತರದ ಸಂದರ್ಭದಲ್ಲಿ ಕನ್ನಡಕ್ಕೆ ತಂದುಕೊಳ್ಳುವುದನ್ನು 'ಪರಿವರ್ತನ' ಎಂದು ಕರೆದಿದ್ದಾರೆ. ಬಹುಶಃ ಇಂಗ್ಲಿಷ್‌ನೊಂದಿಗೆ ಮರಾಠಿ ಭಾಷಾಂತರವನ್ನು ಗಮನದಲ್ಲಿಟ್ಟುಕೊಂಡು ಇವರು ತಮ್ಮ ಭಾಷಾಂತರವನ್ನು ಪ್ರಸ್ತಾಪಿಸುತ್ತಿರುವುದರಿಂದ ಮರಾಠಿಯಲ್ಲಿನ 'ಪರಿವರ್ತನ' ಎಂಬ ಪದವನ್ನು ಹಾಗೆಯೇ ಉಳಿಸಿಕೊಂಡಿರಬಹುದು. ಇನ್ನೂ ನಾಟಕವನ್ನು ಕನ್ನಡ ರಂಗಭೂಮಿಗೆ ಅಣಿಗೊಳಿಸುವುದನ್ನು ಹೇಳುವಾಗ ಮೂಲ ನಾಟಕದ 'ಆಧಾರದಿಂದ' ಎಂದು ಹೇಳುವುದರೊಂದಿಗೆ ರಂಗಭೂಮಿಗೆ ಸರಿಯಾಗುವಂತೆ 'ರೂಪಾಂತರ' ಮಾಡಿದೆ ಎಂದಿದ್ದಾರೆ. ಇಲ್ಲಿ

'ರೂಪಾಂತರ' ಎಂಬುದು ರಂಗಭೂಮಿಯ ಸಂದರ್ಭಕ್ಕೆ ಮಾತ್ರ ಎಂಬ ಅಭಿಪ್ರಾಯ ಭಾಷಾಂತರಕಾರರಿಗೆ ಇರಬಹುದು. ಆದರೂ ಅದನ್ನು ದೃಢಪಡಿಸಲು ಅಗತ್ಯವಿದ್ದಷ್ಟು ಖಚಿತ ಮಾಹಿತಿ ದೊರೆಯುವುದಿಲ್ಲ. ಅಂದರೆ ಈ ಕಾಲಘಟ್ಟದಲ್ಲಿ ಬಳಸಲಾಗಿರುವ/ಪ್ರಯೋಗಿಸಿದ ಹೆಸರು ಪ್ರಜ್ಞಾಪೂರ್ವಕವಾಗಿ ಬಳಸಿದವುಗಳೇ ಅಲ್ಲವೆ ಎನ್ನುವುದನ್ನು ಖಚಿತ ಪಡಿಸುವುದು ಮಾತ್ರ ಕಷ್ಟ. ಇದನ್ನು ದೃಢಪಡಿಸುವಂತೆ ಇನ್ನೂ ಹಲವಾರು ಉದಾಹರಣೆಗಳನ್ನು ಗಮನಿಸಬಹುದು.

ಕೆರೂರರು ಭಾಷಾಂತರಿಸಿರುವ ಮೂರು ನಾಟಕಗಳಲ್ಲಿ 'ರಮೇಶ ಲಲಿತಾ' ನಾಟಕ ಅಪೂರ್ಣವಾಗಿರುವುದರಿಂದ ಇದರಲ್ಲಿ ಭಾಷಾಂತರಕ್ಕೆ ಸಮನಾಗಿ ಬಳಕೆಗೊಂಡಿರುವ ಹೆಸರುಗಳು ದೊರೆಯುವುದಿಲ್ಲ. ಇನ್ನುಳಿದ ಎರಡು ನಾಟಕಗಳಲ್ಲಿ ಭಾಷಾಂತರದ ಪರ್ಯಾಯ ಹೆಸರುಗಳನ್ನು ಗಮನಿಸಬಹುದು. 'ಸುರತನಗರದ ಶ್ರೇಷ್ಠಿಯು' (೧೯೧೭) ನಾಟಕದ ಮುಖಪುಟದಲ್ಲಿ ''ಸುರತನಗರದ ಶ್ರೇಷ್ಠಿಯು ಶೇಕ್ಸ್‌ಪಿಯರ್‌ನ 'ದ ಮರ್ಚಂಟ್ ಆಫ್ ವ್ಹೆನಿಸ್' ನಾಟಕದ ರೂಪಾಂತರವು'' ಎಂದಿದ್ದರೆ, ಮೊದಲನೆಯ ಅಂಕದ ಆರಂಭದಲ್ಲಿ 'ಸುರತನಗರದ ಶ್ರೇಷ್ಠಿಯು' (ಶೇಕ್ಸ್‌ಪಿಯರ್‌ರ 'ದ ಮರ್ಚಂಟ್ ಆಫ್ ವ್ಹೆನಿಸ್ ಎಂಬ ನಾಟಕದ ಅನುವಾದವು)ಎಂದಿದೆ. ಜೊತೆಗೆ ಈ ನಾಟಕಕ್ಕೆ ಹಿನ್ನುಡಿ ಬರೆದ ರಂಗನಾಥ ಅವರು ''ಪರಿವರ್ತನದೊಳಗಣವಾತಾವರಣವೂ ಆಚಾರ-ವಿಚಾರಗಳೂ ಕೇವಲವಾಗಿ ಭಾರತಖಂಡವನ್ನೇ ಸಂಬಂಧಿಸಿದಂತಹವುಗಳಾಗಿವೆ.... ವಾಸುದೇವನು ''ದಿ ಮರ್ಚಂಟ್ ಆಫ್ ವ್ಹೆನಿಸ್'' ನಾಟಕವನ್ನು ಹನ್ನೆರಡು ವರುಷಗಳ ಹಿಂದೆ ಕನ್ನಡಿಸಿದನು.... ಪರಿವರ್ತಕನು ಪ್ರಭಾವಶಾಲಿಯೂ ಆಂಗ್ಲ ಕರ್ನಾಟಕ ಭಾಷೆಗಳಲ್ಲಿ ಬಲ್ಲಿದನಾದವನೂ ಇದ್ದರೆ ಮಾತ್ರ ಭಾಷಾಂತರ ಸರಸವಾಗುವುದು.... ಅವನ 'ಸುರತನಗರದ ಶ್ರೇಷ್ಠಿ'ಯು ಪರಕೀಯ ಕೃತಿಯಿಂದ ಕನ್ನಡಿಸಿದುದಾದರೂ ಸ್ವತಂತ್ರವಾಗಿಯೆ ಪರಿಣಮಿಸಿದೆ. ಆಂಗ್ಲಭಾಷೆಯನ್ನರಿಯದವರು ಈ ಪರಿವರ್ತನ ಪಠನದಿಂದಲೇ ಮೂಲನಾಟಕದ ಪಠನದಿಂದ ಉಂಟಾಗಬಹುದಾದ ಸೊಗಸೆಲ್ಲವನ್ನು ಸವಿಯದಿರರು'' (ಕೆರೂರು, ೧೯೧೭, ಹಿನ್ನುಡಿ, ೭) ಎಂದಿದ್ದಾರೆ.

ಇವರ ಇನ್ನೊಂದು ಕೃತಿಯಾದ 'ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕವು' (೧೯೧೭) ಇದರ ಮುಖಪುಟದಲ್ಲಿ ''ವಸಂತ ಯಾಮಿನೀ ಸ್ವಪ್ನಚಮತ್ಕಾರ ನಾಟಕವು ಶೇಕ್ಸ್‌ಪಿಯರ್‌ರ 'ಎ ಮಿಡ್ಸಮರ್ನಾಯಿಟ್ಸ್ ಡ್ರೀಮ್' ಎಂಬ ನಾಟಕದ ರೂಪಾಂತರವು'' ಎಂದಿದ್ದಾರೆ. ಹಿನ್ನುಡಿಯಲ್ಲಿ ರಂಗನಾಥ ಅವರು ಈ ನಾಟಕದ ಕುರಿತು ಸಚಿತ್ರ ಭಾರತದಲ್ಲಿನ ಬಿಂದುರಾವ್ ಮತಾಲಿಕ್‌ರ ಮಾತನ್ನು ಪ್ರಸ್ತಾಪಿಸುತ್ತ'' ಶೇಕ್ಸ್‌ಪಿಯರ್‌ನ ಗ್ರಂಥಗಳನ್ನು ಬೇರೊಂದು ಭಾಷೆಯಲ್ಲಿ ಅನುವಾದ ಮಾಡಬೇಕಾದರೆ ಅನುವಾದಕನಾದವನೂ, ಕೆಲವಂಶದಿಂದ ಶೇಕ್ಸ್‌ಪಿಯರ್‌ನಾಗಿಯೇ ಇರಬೇಕು.... ವಾಸುದೇವನು ತಾನಾಗಿಯೇ ಶೇಕ್ಸ್‌ಪಿಯರ್‌ರ ನಾಟಕಗಳನ್ನು ಕನ್ನಡಿಸುವ ಕೆಲಸವನ್ನು ಕೈಕೊಂಡು ಮೊದಲು ''ಎ ಮಿಡ್ ಸಮ್ಮರ್ ನಾಯಿಟ್ಸ್ ಡ್ರೀಮ್'' ನಾಟಕವನ್ನು ಕನ್ನಡಿಸಿ ಅದಕ್ಕೆ 'ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕ'ವೆಂದು ಹೆಸರಿಟ್ಟನೆಂದು ಸ್ಪಷ್ಟವಾಯಿತು'' (ಕೆರೂರು, ೧೯೧೭, ಹಿನ್ನುಡಿ, ೩) ಎಂದಿದ್ದಾರೆ.

ಇದರೊಂದಿಗೆ ಈ ನಾಟಕ ಯಾವ ಬಗೆಯ 'ರೂಪಾಂತರ' ಎಂಬುದನ್ನು ಹೇಳುವಾಗ ಪ್ರಬುದ್ಧ ಕರ್ಣಾಟಕದಲ್ಲಿನ ವೀ.ಸೀಯವರ ಮಾತನ್ನು ಬಳಸಿಕೊಂಡಿದ್ದಾರೆ. ಅದೇನೆಂದರೆ;

''ಪರಿವರ್ತನ ಪ್ರಕಾರಗಳು

೧. ಮೂಲ ಗ್ರಂಥಗಳಲ್ಲಿ ಕಂಡುಬರುವ ಹೆಸರು ಮೊದಲಾದವುಗಳನ್ನು ಹಾಗೆಯೇ ಇಟ್ಟುಕೊಂಡು ಕಥಾಭಾಗವನ್ನು ಮಾತ್ರ ಕನ್ನಡದಲ್ಲಿ ಬರೆಯುವುದು....

೨. ಎಲ್ಲಾ ಪಾತ್ರ ಪ್ರದೇಶಗಳಿಗೂ ಬೇರೆ ಬೇರೆ ಹೆಸರುಗಳನ್ನು ಕೊಟ್ಟು, ಬೇಕಾದರೆ ಅಲ್ಲಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಮಿಕ್ಕೆಲ್ಲಾ ಭಾಗಗಳನ್ನು ಕ್ರಮವಾಗಿ ಭಾಷಾಂತರಿಸುವುದು.

೩. ಮೂಲಗಳ ಆಧಾರದ ಮೇಲೆ ನಮ್ಮ ಜನರ ನಡಾವಳಿಕೆ ಮತ್ತು ಭಾಷೆಗಳಿಗೆ ತಕ್ಕಂತೆ ನಮಗೆ ಸ್ವಾಭಾವಿಕವಾಗಿ. ತೋರುವ ಹಾಗೆ, ಪರಕೀಯವಾದ ವಸ್ತುವನ್ನು ಸ್ವತಂತ್ರಕೃತಿ ವೆಂಬ ಭ್ರಾಂತಿಯಾಗುವಂತೆ ಮಾರ್ಪಡಿಸುವುದು.

ಈ ನಾಟಕ ಮೇಲಿನ ೨,೩ನೆಯ ಬಗೆಗಳ 'ರೂಪಾಂತರ'ವೆಂದು ತಿಳಿಯಬಹುದು'' (ಕೆರೂರು, ೧೯೧೭ ಹಿನ್ನುಡಿ) ಎಂದಿದ್ದಾರೆ.

ಕೆರೂರರ ನಾಟಕಗಳಲ್ಲಿ ಭಾಷಾಂತರ ಎಂಬುದನ್ನು 'ರೂಪಾಂತರ', 'ಮಾರ್ಪಡಿಸು', 'ಆಧಾರದಿಂದ', 'ಭಾಷಾಂತರಿಸು', 'ಪರಿವರ್ತನ', 'ಕನ್ನಡಿಸು' ಮತ್ತು 'ಅನುವಾದ' ಎಂಬಿತ್ಯಾದಿ ಹೆಸರುಗಳಲ್ಲಿ ಕರೆಯಲಾಗಿದೆ. ಇಲ್ಲಿ 'ರೂಪಾಂತರ' ಎಂಬುದು ಇಂಗ್ಲಿಷ್ ನಾಟಕವನ್ನು ಕನ್ನಡಕ್ಕೆ ತರುವುದು ಎಂಬ ಸಂದರ್ಭದಲ್ಲಿ ಬಳಕೆಯಾದಂತೆ, ಮೂಲಪಠ್ಯವನ್ನು ಹೇಗೆ 'ರೂಪಾಂತರಿಸಿ'ಕೊಳ್ಳಬಹುದು ಹಾಗೂ 'ವಸಂತ ಯಾಮಿನೀ ಸ್ವಪ್ನಚಮತ್ಕಾರ ನಾಟಕ'ವು ಯಾವ ಬಗೆಯ 'ರೂಪಾಂತರ'ಗೊಂಡಿದೆ ಎಂಬುದನ್ನು ಹೇಳಿದ್ದಾರೆ. ಇವೆರಡರಂತೆ ಇತರ ಪರ್ಯಾಯ ಪದಗಳು ಬೇರೆ ಬೇರೆ ಅರ್ಥಗಳಿಂದ ಬಳಕೆಯಾಗಿರುವ ಸಾಧ್ಯತೆಯಿದೆ.

ಹೀಗಿದ್ದರೂ ಕೆರೂರರ ನಾಟಕಗಳಲ್ಲಿ ಬಳಕೆಗೊಂಡ ಪದಗಳಲ್ಲಿ ಭಾಷಾಂತರದ ಮಾದರಿಗಳನ್ನು ಕಾಣಬಹುದಾದರೂ ಇವುಗಳ ಪ್ರಯೋಗ ಅಥವಾ ಬಳಕೆಯ ಹಿಂದೆ ನಿರ್ದಿಷ್ಟ ತಾತ್ವಿಕತೆಯೊಂದಿದೆ ಎಂಬುದನ್ನು ನಿರ್ಧರಿಸಿಕೊಳ್ಳುವುದಿಲ್ಲ.

'ಮಹೀಮಂಡನ' (೧೯೦೦) ನಾಟಕದಲ್ಲಿ ಎಂ.ಆರ್. ಅಣ್ಣಾಜಿರಾವ್ ಅವರು ಭಾಷಾಂತರಕ್ಕೆ ಸಂವಾದಿಯಾಗಿ ಬಳಸಿದ ಹೆಸರುಗಳನ್ನು ಗುರುತಿಸುವುದಾದರೆ.... ನಮ್ಮ ದೇಶ ಭಾಷೆಯಲ್ಲಿ ಅಸ್ಮದ್ದೇಶಿಯರ ತಿಳುವಳಿಕೆಯ ಬಗ್ಗೆ ಭಾಷಾಂತರಿಸಬೇಕೆಂಬ ಅಭಿಲಾಷೆ ಹುಟ್ಟಿತು.... The winter's Tal ಎಂಬ ನಾಟಕವನ್ನು ಕನ್ನಡಿಸಿ ಮುಗಿಸಿರುವೆನು'' (ಅಣ್ಣಾಜಿರಾವ್, ೧೯೦೦, ಉಪೋದ್ಘಾತ, ಪು ೫).

ಇವರು 'ಭಾಷಾಂತರ' ಮತ್ತು 'ಕನ್ನಡಿಸು' ಎಂಬ ಎರಡು ಪದಗಳನ್ನು ಬಳಸಿದ್ದಾರೆ. ಇಲ್ಲಿ 'ಕನ್ನಡಿಸು' ಎಂಬುದು ಇಂಗ್ಲಿಷಿನಿಂದ ಕನ್ನಡಕ್ಕೆ ಎಂದು ಹೇಳುವಾಗ ಬಳಕೆಗೊಂಡಿದೆ.

'King Lear' ನಾಟಕವನ್ನು 'ಹೇಮಚಂದ್ರ ರಾಜವಿಲಾಸ' ಎಂದು ಭಾಷಾಂತರಿಸಿದ ಎಂ. ಎಸ್. ಪುಟ್ಟಣ್ಣನವರು ಸಹ ಭಾಷಾಂತರಕ್ಕೆ ಅನೇಕ ಪರ್ಯಾಯ ಪದಗಳನ್ನು ಬಳಸಿದ್ದಾರೆ. ಮುಖಪುಟದಲ್ಲಿ 'ಹೇಮಚಂದ್ರ ರಾಜವಿಲಾಸ' ಷೇಕ್ಸ್‌ಪಿಯರ್ ಮಹಾಕವಿಯಿಂದ ರಚಿಸಲ್ಪಟ್ಟ ಕಿಂಗ್ ಲಿಯರ್ ನಾಟಕದ **ಭಾಷಾಂತರ**'' ಎಂದಿದ್ದಾರೆ. ಪೀಠಿಕೆಯಲ್ಲಿ ''ಈ ಗ್ರಂಥವನ್ನು ಕಥಾರೂಪವಾಗಿಯಾಗಲಿ ಕಾವ್ಯರೂಪವಾಗಿಯಾಗಲಿ **ಕನ್ನಡಿಸಿದರೆ**, ಕವಿಯ ಆಶಯವನ್ನು ಸರಿಯಾಗಿ ಕಂಡುಹಿಡಿದು **ಭಾಷಾಂತರ** ಮಾಡತಕ್ಕ ಶಕ್ತಿ ನನಗಿಲ್ಲವಾಗಿ, ಎಲ್ಲಿಯಾದರೂ ನನ್ನ ಬುದ್ಧಿ ಮೋಸಹೋಗಿ ಅಪಾರ್ಥವನ್ನು ಕಲ್ಪಿಸಿಯೇನಲ್ಲಾ ಎಂದು ಭಯಗೊಂಡು, ಸಾಧ್ಯವಾದ ಮಟ್ಟಿಗೆ ಮೂಲಕ್ಕೆ **ಅನುಸಾರ**ವಾಗಿರಲೆಂದು ವಾಕ್ಯರೂಪವಾಗಿಯೇ ಈ ನಾಟಕವನ್ನು **ಕನ್ನಡಿಸಿದೆ**. ಗ್ರಂಥವು ವಾಚಕರಿಗೆ ಕನ್ನಡ ಸ್ವರೂಪ ಉಳದ್ದಾಗಿಯೇ ಕಾಣಲೆಂದು ಪಾತ್ರಗಳಿಗೆಲ್ಲಾ ಯೋಗ್ಯತಾನುಸಾರವಾದ ನಮ್ಮ ದೇಶದ ಹೆಸರುಗಳನ್ನೇ ಇಟ್ಟಿದೆ. ಮೂಲಕ್ಕೂ ಈ **ತರ್ಜುಮೆ**ಗೂ ಎರಡು ಸಂದರ್ಭದಲ್ಲಿ ಮಾತ್ರ ವ್ಯತ್ಯಾಸವಿದೆ; ಕನ್ನಡ ಜನರ ಕನ್ನಡ ಭಾಷೆಯ ತಿಳುವಳಿಕೆ ಮತ್ತು ರೀತಿಗೆ ಅನುಗುಣವಾಗಿರುವಂತೆ ಇಂಗ್ಲಿಷ್ ದೇಶದಲ್ಲಿ ರೂಢವಾಗಿರತಕ್ಕ ಕೆಲವು ಪದಾರ್ಥಗಳಿಗೆ ಮತ್ತು ಪದ್ಧತಿಗಳಿಗೆ ಈ ದೇಶದಲ್ಲಿ ಅನುರೂಪವಾಗಿರತಕ್ಕವುಗಳನ್ನು ಬರೆದು ಕಂಡ ಹಾಗೆ ಮಾಡಿರತಕ್ಕ ವ್ಯತ್ಯಾಸ ಒಂದು. ಮೂಲಕ್ಕೆ ನಾನು ಅಚಾತುರ್ಯದಿಂದ ಅಪಾರ್ಥವನ್ನು ಕಲ್ಪಿಸಿಕೊಂಡು ನಾನು ಕಾಣದ ಹಾಗೆ ಮಾಡಿರತಕ್ಕ ವ್ಯತ್ಯಾಸ ಒಂದು.... **ಭಾಷಾಂತರ** ಮಾಡತಕ್ಕ ಕಷ್ಟವನ್ನು ಬಲ್ಲ ಪುಣ್ಯಾತ್ಮರೆಲ್ಲರೂ ನನ್ನ ದೋಷಗಳನ್ನು ಕ್ಷಮಿಸಬೇಕು'' (ಪುಟ್ಟಣ್ಣ, ೧೮೯೯, ಪೀಠಿಕೆ, ಪು. ೧೨).

ಇವರು ಭಾಷಾಂತರ ಎಂಬುದನ್ನು 'ಕನ್ನಡಿಸು', 'ಅನುಸಾರ', 'ತರ್ಜುಮೆ', ಹಾಗೂ 'ಭಾಷಾಂತರ' ಎಂದು ಕರೆದಿದ್ದಾರೆ. ಈ ಕಾಲಘಟ್ಟದಲ್ಲಿ 'ತರ್ಜುಮೆ' ಎಂದು ಬಳಸಿದವರು ಇವರೊಬ್ಬರೆ, ಬಹುಶಃ ಮೈಸೂರು ಸಂಸ್ಥಾನದಲ್ಲಿ ಟಿಪ್ಪುವಿನ ಆಳ್ವಿಕೆಯ ಕಾಲದಲ್ಲಿ ಪಾರ್ಸಿ ಭಾಷೆಯ ಬಳಕೆಯಿದ್ದುದರಿಂದ ಹಾಗೂ ಇವರು ಆ ಪ್ರದೇಶದವರೂ ಆಗಿರುವುದರಿಂದ 'ತರ್ಜುಮೆ' ಎಂಬ ಪದವನ್ನು ಬಳಸಿರುವ ಸಾಧ್ಯತೆಯಿದೆ.

ಚುರಮುರಿಯವರು ತಮ್ಮ 'ರಾಘವೇಂದ್ರರಾವ ನಾಟಕ'ದಲ್ಲಿ ಭಾಷಾಂತರವನ್ನು ಈ ಕೆಳಗಿನ ಹೆಸರುಗಳಿಂದ ಕರೆದಿದ್ದಾರೆ. ''ಅಥಲ್ಲೋಯಂಬ ಶೋಕರಸ ಪ್ರಧಾನವಾದ ಒಂದು ನಾಟಕದ **ಆಧಾರದಿಂದ** ಬರೆದಿರುತ್ತೇನೆ. ಇಂಗ್ಲಿಷ್ ಭಾಷೆಯ ಜ್ಞಾನವು ನನಗೆ ಸಾಕಷ್ಟು ಇದ್ದು, ಆ ಕಥೆಯನ್ನು ಕನ್ನಡ ಭಾಷೆಯಲ್ಲಿ **ಅಂತರಿಸಿದ್ದರೆ** ಯಾವಸೊಗಸು ಉಂಟಾಗುತ್ತಿತ್ತೋ ಅದರಲ್ಲಿ ನೂರರಲ್ಲಿ ಒಂದು ಪಾಲು ಸಹ ಈ ಗ್ರಂಥದಲ್ಲಿ ಇಲ್ಲವೆಂದು ನಾನು ಒಪ್ಪಿಕೊಳ್ಳಲೇ ಬೇಕಾಗಿದೆ.'' ಇಲ್ಲಿ 'ಆಧಾರ'ದಿಂದ ಮತ್ತು 'ಅಂತರಿಸಿದ' ಎರಡು ಹೆಸರುಗಳ ಬಳಕೆಯಿದೆ.

ಬಸವಪ್ಪಶಾಸ್ತ್ರಿಗಳು ತಮ್ಮ 'ಶೂರಸೇನ ಚರಿತ್ರೆ' (೧೮೬೫) ನಾಟಕದಲ್ಲಿ '**ರೂಪಾಂತರ**' ಎಂಬುದನ್ನು ಭಾಷಾಂತರಕ್ಕೆ ಸಮನಾಗಿ ಬಳಸಿದ್ದಾರೆ. ಹಾಗೆಯೇ 'ರಾಮವರ್ಮಲೀಲಾವತಿ ಚರಿತ್ರೆ'ಯಲ್ಲಿ ಆನಂದರಾವ್ ಅವರು **ಕರ್ಣಾಟ ಭಾಷಾಂತರ** ಮತ್ತು **ಕರ್ಣಾಟಕ ಭಾಷಾಂತರ** ಎಂದು ಬಳಸಿರುವರು. ಡಿ.ವಿ.ಜಿ.ಯವರು ತಮ್ಮ 'ಕನಕಾಲುಕ' /ಕಮಲಿನೀ ಚರಿತಂ' ನಾಟಕದಲ್ಲಿ **ಪರಿವರ್ತನ** ಮತ್ತು **ಅನುಸರಿಸಿದೆ** ಎಂದು ಹಾಗೂ ನಂಜನಗೂಡು ಶ್ರೀಕಂಠಶಾಸ್ತ್ರಿಗಳು **ಕಥಾನುವಾದ** ಮತ್ತು **ಭಾಷಾಂತರ** ಎಂಬ ಪದಗಳನ್ನು ಬಳಸಿದ್ದಾರೆ.

ಮೇಲಿನವು ಒಟ್ಟು 'ಸಾಹಿತ್ಯಿಕ ಪಠ್ಯ'ಗಳಾಗಿದ್ದು ಅವುಗಳ ಸಂದರ್ಭದಲ್ಲಿ ಬಳಕೆಗೊಂಡಿರುವ ಎಲ್ಲಾ ಪದಗಳು ಹೆಚ್ಚು ಕಡಿಮೆ ಸಮನಾರ್ಥಕ ಪದಗಳಾಗಿ ಬಳಕೆಗೊಂಡಿವೆ. ಈ ಹೊತ್ತು ಭಾಷಾಂತರ ಅಧ್ಯಯನವು 'ರೂಪಾಂತರ', 'ಭಾಷಾಂತರ', 'ಅನುವಾದ' ಇತ್ಯಾದಿ ಪದಗಳಿಗೆ ಅರ್ಥಖಚಿತತೆಯನ್ನು ನಿಗದಿಪಡಿಸಲು ಪ್ರಯತ್ನಿಸುತ್ತಿದೆ. ಆದರೆ ಅದನ್ನು 'ಇಂಗ್ಲಿಷ್ ಗೀತಗಳು' ಪೂರ್ವದ ಕಾಲಘಟ್ಟಕ್ಕೆ ಅನ್ವಯಿಸುವುದು ಸಾಧ್ಯವಾಗುವುದಿಲ್ಲ.

ಇದೇ ಚರ್ಚೆಯನ್ನು 'ಸಾಹಿತ್ಯೇತರ ಪಠ್ಯ'ಗಳ ಸಂದರ್ಭದಲ್ಲಿ ಪರಿಶೀಲಿಸುವ ಮೂಲಕ ಚರ್ಚೆಯನ್ನು ಇನ್ನಷ್ಟು ಮುಂದುವರಿಸಬಹುದಾಗಿದೆ. 'ಸಾಹಿತ್ಯೇತರ ಪಠ್ಯ' 'ಕಲಾತರಂಗ' (೧೯೦೯)ದಲ್ಲಿ ''ಇಷ್ಟಾದರೂ ಇತರ ಭಾಷೆಗಳಲ್ಲಿರುವಂತೆ ನಮ್ಮ ಕನ್ನಡ ಭಾಷೆಯಲ್ಲಿ ಹೇರಳವಾಗಿಲ್ಲವಾದ್ದರಿಂದ ಅನ್ಯಭಾಷಾ ಪರಿಚಯಕ್ಕವಕಾಶವಿಲ್ಲದೆ ಗ್ರಾಮಾಂತರಗಳಲ್ಲಿಯೂ ಮತ್ತು ಇತರ ಪ್ರದೇಶಗಳಲ್ಲಿಯೂ ಇರುವ ಸಹಸ್ರಾರು ಮಂದಿ ಸೋದರ ಬಾಂಧವರು ಮೇಲ್ಕಂಡ ಭಾಷೆಗಳಲ್ಲಿನ ಗ್ರಂಥ ವಿಶೇಷಗಳನ್ನು ಸುಲಭವಾಗಿ ಗ್ರಹಿಸುವಂತೆ **ಭಾಷಾಂತರಾಧಿ**ಗಳಿಂದ ಅನುಕೂಲಪಡಿಸುವುದೇ ಭಾಷಾಸೇವಕರ ಮುಖ್ಯ ಕರ್ತವ್ಯವೆಂದು....'' (ಕಲಾತರಂಗ, ೧೯೦೯, ಪೀಠಿಕೆ, ೧) ಹೇಳಿದ್ದರೆ, 'ಜ್ಯೋತಿರ್ವಿನೋದಿನಿ'ಯಲ್ಲಿ ''ಅದು ಆಂಗ್ಲ ಭಾಷೆಗೆ ಫ್ರಾನ್ಸಿಸ್ ಎ. ವೆಲ್ಬ (Francis A Welby) ಅವರಿಂದ **ಪರಿವರ್ತಿತ**ವಾಗಿ ಆ ಆಂಗ್ಲ **ಭಾಷಾನುವಾದ**ವು ಕನ್ನಡ ಭಾಷೆಗೆ ಮಾಡುವುದಕ್ಕೆ ತಕ್ಕೂದೆಂದೂ, **ಪರಿವರ್ತನ** ಕಾರ್ಯವನ್ನು ನಾನು ಕೈಗೊಳ್ಳಬೇಕೆಂದು, ಅವಶ್ಯಕ ತೋರಿದೆಡೆಗಳಲ್ಲಿ **ಮಾರ್ಪಡಿಸಿ**ರುವುದೂ ಸಾಧ್ಯವೆಂದೂ, **ಪರಿವರ್ತನ**ವನ್ನು ಬೇಗನೆ ಮುಗಿಸಬೇಕೆಂದು ಅಪ್ಪಣೆಯಿತ್ತರು.... ಅವಕಾಶ ಸಿಕ್ಕಾಗ **ಅನುವಾದ** ಮಾಡುತ್ತ.... ಇನ್ನೂ **ಪರಿವರ್ತನೆ** ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕಾಗಿರುವುದು. ಈ ಜ್ಯೋತಿರ್ವಿನೋದಿನಿ ಆಂಗ್ಲ **ಭಾಷಾನುವಾದ**ದ ಪದಶಃ ಪರಿವರ್ತನವಲ್ಲ,'' (ಜ್ಯೋತೀರ್ವಿನೋದಿನಿ, ೧೯೨೦, ಪ್ರಸ್ತಾವನೆ) ಎಂದಿದ್ದಾರೆ.

ಈ ಕೃತಿಯಲ್ಲಿ ಭಾಷಾಂತರವು 'ಸಂಗ್ರಹ', 'ಪರಿವರ್ತನ'/'ಪರಿವರ್ತಿತ', 'ಮಾರ್ಪಡಿಸು', 'ಅನುವಾದ', 'ಭಾಷಾನುವಾದ' ಎಂದಿತ್ಯಾದಿ ಹೆಸರುಗಳಲ್ಲಿ ಬಳಕೆಯಾಗಿದೆ. ಈ ಬಳಕೆ ಯಾದೃಚ್ಛಿಕವಾಗಿದೆ. ಹೀಗೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ಗುರುತಿಸಲು ಒಂದಕ್ಕಿಂತ ಹೆಚ್ಚಿನ ಪರ್ಯಾಯ ಹೆಸರುಗಳನ್ನು ಬಳಸುತ್ತಿದ್ದರೂ ಅವುಗಳನ್ನು ಅವುಗಳ ಹಿಂದಿನ ಪರ್ಯಾಯ ನಿರ್ದಿಷ್ಟ ತಾತ್ವಿಕತೆಯನ್ನು ಗುರುತಿಸುವುದು ಕಷ್ಟ.

ಭಾಷಾಂತರವೆಂಬುದು ಸಾಮಾನ್ಯ ಅರ್ಥದಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅಂತರಿಸುವುದು ಅಥವಾ ತರುವುದು ಎಂಬ ಅರ್ಥದಿಂದ ಹಿಡಿದು ನಮ್ಮ ಮಾತುಗಳು ಹಾಗೂ ಆ ನಂತರದ ಬರಹಗಳು ಸಹ ಭಾಷಾಂತರವೇ ಆಗಿದೆ. ಭಾಷಾಂತರದ ಬಗ್ಗೆ ಡಾ. ಜಾನ್ಸನ್ ಅವರು ತಮ್ಮ ನಿಘಂಟಿನಲ್ಲಿ ''To changing in to another language retaining sense'' ಎಂದು ಹೇಳಿದ್ದಾರೆ. ಅಂದರೆ ಅರ್ಥವನ್ನು ಕಾಯ್ದುಕೊಂಡು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಕೊಂಡೊಯ್ಯುವುದು. ಇಲ್ಲಿ ಅರ್ಥವು ಒಂದು ಮೂಲದಿಂದ ಇನ್ನೊಂದು ಮೂಲಕ್ಕೆ ಹರಿದು ಬರುವುದು. ಆದರೆ ಪ್ರಸ್ತುತ ದಿನಗಳಲ್ಲಿ ಭಾಷಾಂತರ ಪ್ರಕ್ರಿಯೆ ಕೇವಲ ಅರ್ಥಕ್ಕೆ ಸೀಮಿತವಾಗಿರದೆ ತನ್ನ ಮೇರೆಗಳನ್ನು ವಿಸ್ತರಿಸಿಕೊಂಡಿದೆ. ನಾಟಕ ಪಠ್ಯ ಪ್ರದರ್ಶನಗೊಳ್ಳುವುದಾಗಲಿ, ಕಾದಂಬರಿಯೊಂದು ಚಲನಚಿತ್ರವಾಗುವುದಾಗಲಿ ಈ ಎಲ್ಲವೂ ಭಾಷಾಂತರವೇ ಆಗಿದೆ.

ನಮ್ಮಲ್ಲಿ ಇಂದಿಗೂ 'ಅನುವಾದ' ಎಂಬ ಪದವನ್ನು ಭಾಷಾಂತರಕ್ಕೆ ಪರ್ಯಾಯವಾಗಿ ಬಳಸಲಾಗುತ್ತದೆ. ಅನುವಾದವೆಂದರೆ ಭಾಷಾಂತರ, ಭಾಷಾಂತರವೆಂದರೆ ಅನುವಾದ ಎನ್ನುವ ರೀತಿಯಲ್ಲಿ ಇದರ ಬಳಕೆಯಿದೆ. ಅನುವಾದ ಎಂಬ ಪದವು ಹಿಂದಿಮೂಲದಿಂದ ಬಂದಿದೆಯೆಂದು ಪ್ರಧಾನ ಗುರುದತ್‌ಅವರು (೧೯೭೮) ಗುರುತಿಸುತ್ತಾರೆ. ಭಾಷಾಂತರಕಾರರನ್ನು ಅನುವಾದಕ ಎಂದು ಕರೆಯುವುದು ಸಹಜವಾಗಿದೆ. ಹಾಗೆಯೇ 'ತರ್ಜುಮೆ' ಸಹ ಭಾಷಾಂತರ/ ಅನುವಾದಕ್ಕೆ ಪರ್ಯಾಯವಾಗಿಯೂ, ಸಂವಾದಿಯಾಗಿಯೂ ಬಳಕೆಯಾಗುತ್ತದೆ. 'ತರ್ಜುಮೆ' ಪದ 'ಪಾರ್ಸಿ' ಮೂಲದಿಂದ ಬಂದಿರುವಂತದ್ದು, (ಎಂ.ಎಸ್.ಪುಟ್ಟಣ್ಣ, ೧೯೪೦, ಪು.೩೯) ಭಾಷಾಂತರ ಚರಿತ್ರೆಯನ್ನು ಅವಲೋಕಿಸಿದರೆ ನ್ಯಾಯಸಂಬಂಧಿ ಮತ್ತು ಆಡಳಿತಾತ್ಮಕ ವಿಷಯಗಳ ಭಾಷಾಂತರದ ಸಂದರ್ಭದಲ್ಲಿ 'ತರ್ಜುಮೆ' ಎಂಬುದು ಹೆಚ್ಚುರೂಢಿಯಲ್ಲಿದೆ.

ಪ್ರಸ್ತುತ ಅವಧಿಯಲ್ಲಿ (ಪೂರ್ವದಲ್ಲಿಯು) ಭಾಷಾಂತರಕ್ಕೆ ಸಮನಾಗಿ ಬಳಕೆಯಾಗುತ್ತಿರುವ 'ಅನುವಾದ' ಎಂಬುದು ಮೂಲವನ್ನು ಅನುಸರಿಸಿ ಹೇಳುವುದು ಎಂಬ ಅರ್ಥವನ್ನು ಹೊಂದಿದೆ. ಅಲ್ಲದೆ ಕನ್ನಡದಲ್ಲಿರುವ ಬಹುತೇಕ ಶಬ್ದಕೋಶ /ನಿಘಂಟುಗಳಲ್ಲಿ ಭಾಷಾಂತರದ ಅರ್ಥವನ್ನು 'ಅನುವಾದ' ಎಂತಲೂ ಅನುವಾದದ ಅರ್ಥವನ್ನು 'ಭಾಷಾಂತರ'ವೆಂದು ಮತ್ತು ಭಾಷಾಂತರಕ್ಕೆ ಅರ್ಥವೆಂದು 'ತರ್ಜುಮೆ' ಎಂಬ ಪದವನ್ನು ಬಳಸಿವೆ. ಈ ರೀತಿಯಲ್ಲಿ ಪದಕೋಶಗಳು ಯಾವುದೇ ಅರ್ಥವನ್ನು ಸೂಚಿಸಿದರೂ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರಕಾರರು ಪಶ್ಚಿಮದ ಹಾಗೂ ಭಾರತೀಯ ಇತರ ಭಾಷೆಗಳ ಕೃತಿಗಳನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವಾಗ ಮತ್ತು ಭಾಷಾಂತರ ಚಟುವಟಿಕೆಯನ್ನು ಪರಿಭಾವಿಸಿಕೊಳ್ಳುವಾಗ ಭಾಷಾಂತರವೂ ಸೇರಿದಂತೆ ಈ ಹಿಂದೆ ಪ್ರಸ್ತಾಪಿಸಿದ ಹಲವಾರು ಹೆಸರುಗಳು ಬಳಸಿರುವುದನ್ನು ಕಾಣಬಹುದಾಗಿದೆ.

ಈ ಚಟುವಟಿಕೆಯಲ್ಲಿ ಬದಲಾವಣೆ ಅಗತ್ಯವಾಗಿದ್ದು, ಭಾಷೆ, ಸಂಸ್ಕೃತಿ ಇತ್ಯಾದಿಗಳು ಭಿನ್ನ ಸನ್ನಿವೇಶದಲ್ಲಿ ರೂಪುಗೊಳ್ಳುವಾಗ ಅಲ್ಲಿನ ಅಗತ್ಯಕ್ಕೆ ಅನುಗುಣವಾಗಿ ಬದಲಾವಣೆ, ಹೊಂದಾಣಿಕೆಗಳು ನಡೆಯುತ್ತವೆ. ಈ ಕಾಲಘಟ್ಟದ ನಾಟಕ ಭಾಷಾಂತರಕಾರರು ಇಂಗ್ಲಿಷ್ ನಾಟಕಗಳನ್ನು ಕನ್ನಡದ ಸಂದರ್ಭದಲ್ಲಿ ರೂಪಿಸಿಕೊಳ್ಳುವಾಗ ವಿವಿಧ ನೆಲೆಯಲ್ಲಿ 'ಪರಿವರ್ತನ' 'ಮಾರ್ಪಾಡು'ಗಳನ್ನು ಮಾಡಿಕೊಂಡಿದ್ದಾರೆ. ಹಾಗೆಯೇ ಸಾಹಿತ್ಯೇತರ ಕೃತಿಗಳನ್ನು ಕನ್ನಡದಲ್ಲಿ ರೂಪಿಸುವಾಗಲೂ ಸಹ ಭಾಷಿಕ ನೆಲೆಯಲ್ಲಿ ಪರಿವರ್ತನೆಗಳು ನಡೆದಿರುವವು. ಹೀಗಾಗಿ ಭಾಷಾಂತರಕ್ಕೆ ಸಂವಾದಿಯಾಗಿ ಅಥವಾ ಭಾಷಾಂತರ ಚಟುವಟಿಕೆಯನ್ನು ಪರಿಭಾವಿಸಿಕೊಳ್ಳಲು 'ಅಂತರಿಸಿದೆ' 'ಮಾರ್ಪಡಿಸು' 'ಪರಿವರ್ತಿಸಿ'ದೆ ಎಂಬಿತ್ಯಾದಿ ಪದಗಳನ್ನು/ ಹೆಸರುಗಳನ್ನು ಕೊಟ್ಟಿರಬಹುದು. 'ಪರಿವರ್ತನೆ', 'ಮಾರ್ಪಡಿಸು', 'ಕನ್ನಡಿಸು', 'ಅಂತರಿಸು' ಈ ಪದಗಳು ಒಂದು ಪ್ರಕ್ರಿಯೆಯನ್ನು ವಿವರಿಸಿಕೊಳ್ಳುವ ನೆಲೆಯಿಂದ ಉಪಯುಕ್ತವಾದುದಾಗಿದೆ.

'ಕನ್ನಡಿಸು' ಮತ್ತು 'ಕರ್ಣಾಟಕ ಭಾಷಾಂತರ'ಗಳೆರಡರ ಪ್ರಯೋಗಗಳು ಕನ್ನಡದ ಸಂದರ್ಭದಲ್ಲಿ ಗಮನಾರ್ಹವಾಗಿದೆ. ಕನ್ನಡ ಎನ್ನುವ ನಾಮಪದಕ್ಕೆ 'ಇಸು' ಎಂಬ ಪ್ರತ್ಯಯವನ್ನು ಸೇರಿಸುವ ಮೂಲಕ ಸಾಧಿಸಲಾಗಿರುವ ಪದವೆ 'ಕನ್ನಡಿಸು'. ಈ ಪದ To Mirror ಎಂಬ ಇನ್ನೊಂದು ಅರ್ಥವನ್ನು ಹೊಂದಿದೆ. ಈ

ಪದ ಕನ್ನಡಕ್ಕೆ ತರುವುದು/ಕನ್ನಡವಾಗಿಸುವುದು ಎಂಬ ಅರ್ಥವನ್ನು ವಿಶದಪಡಿಸುತ್ತದೆ. ಒಂದು ಭಾಷೆ/ವ್ಯವಸ್ಥೆಯಲ್ಲಿರುವುದು ಇನ್ನೊಂದು ಭಾಷೆ/ರೂಪದಲ್ಲಿ ಪ್ರತಿಫಲಿಸುವ, ಪ್ರತಿನಿಧಿಸುವ ಕ್ರಿಯೆಯೇ 'ಕನ್ನಡಿಸು' ಎನ್ನುವುದಾಗಿದೆ. ಹೀಗಾಗಿ ಇಂಗ್ಲಿಷ್‌ನ ಕೃತಿ ಕನ್ನಡದಲ್ಲಿ ಪ್ರತಿಫಲನಗೊಳ್ಳುವುದರಿಂದ 'ಕನ್ನಡಿಸು' ಎಂದು ಪ್ರಯೋಗಿಸಲಾಗಿದೆ.

ಇದಕ್ಕೆ ಹತ್ತಿರವಾದ ಇನ್ನೊಂದು ಪ್ರಯೋಗ 'ಕರ್ಣಾಟಕ ಭಾಷಾಂತರ' ಈ ಪ್ರಯೋಗ ಸಾಂಪ್ರದಾಯಿಕ ನೆಲೆಯಿಂದ ಬಂದಿರುವುದಾಗಿದೆ. ಬೇರೆ-ಬೇರೆ ಭಾಷೆಯ ಕೃತಿಗಳನ್ನು ಕನ್ನಡ ಭಾಷೆಯಲ್ಲಿ, ಕರ್ಣಾಟಕ ಭಾಷೆಯಲ್ಲಿ ರೂಪಿಸಿಕೊಳ್ಳುವುದರಿಂದ ಭಾಷಿಕ ಹಿನ್ನೆಲೆಯಲ್ಲಿ ಈ ಪದವನ್ನು ಬಳಸಲಾಗಿದೆ. ಸಂಸ್ಕೃತದಿಂದ ಕನ್ನಡಕ್ಕೆ ಬಂದ ಅನೇಕ ನಾಟಕಗಳು 'ಕರ್ಣಾಟಕ ಭಾಷಾಂತರ' ಎಂಬ ಶೀರ್ಷಿಕೆಯನ್ನು ಹೊಂದಿವೆ. ಹೀಗಾಗಿ ಈ ಪದ ಕನ್ನಡದ ಭಾಷಾಂತರದ ಪ್ರಕ್ರಿಯೆಯಲ್ಲಿನ ಗಮನಿಸಬೇಕಾದ ಪ್ರಯೋಗ ಎನ್ನಬಹುದು. ಇಂದು ಭಾಷಾಂತರ ಮತ್ತು ಅನುವಾದವನ್ನು ನಿರ್ದಿಷ್ಟ ಅರ್ಥ ಖಚಿತತೆಯೊಂದಿಗೆ ಪ್ರತ್ಯೇಕಗೊಳಿಸಿ ಪ್ರಸ್ತಾಪಿಸುತ್ತಿರುವುದನ್ನು ಕಾಣಬಹುದಾದರೂ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಕೃತಿಗಳಿಗೆ ಅದನ್ನು ಅನ್ವಯಿಸಲು ಸಾಧ್ಯವಾಗುವುದಿಲ್ಲ.

**೯.೨. ಭಾಷಾಂತರದ ಉದ್ದೇಶ**

ಯಾವುದೇ ಒಂದು ಪಠ್ಯ ಬೇರೊಂದು ಭಾಷೆಗೆ ಭಾಷಾಂತರಗೊಳ್ಳುವಾಗ ತನ್ನದೇ ಆದ ಉದ್ದೇಶವನ್ನು ಹೊಂದಿರುತ್ತದೆ. ಈ ಉದ್ದೇಶವು ಯಾವ ಸ್ವರೂಪದ್ದು ಎಂಬ ನೆಲೆಯಲ್ಲಿ ಭಾಷಾಂತರದ ಓದುಗವರ್ಗ ಮತ್ತು ಭಾಷಾಂತರದ ಮಾದರಿಗಳು ನಿರ್ಧಾರಗೊಳ್ಳುತ್ತವೆ. 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರಕಾರರು ವಿವಿಧ ಉದ್ದೇಶಗಳಲ್ಲಿ ಭಾಷಾಂತರವನ್ನು ಕೈಗೊಂಡಿದ್ದಾರೆ. ಈ ಅವಧಿಯಲ್ಲಿ ಬಂದಿರುವ 'ಸಾಹಿತ್ಯ' ಮತ್ತು 'ಸಾಹಿತ್ಯೇತರ' ಕೃತಿಗಳು ಯಾವ ಯಾವ ಉದ್ದೇಶಗಳಿಂದ ಭಾಷಾಂತರಗೊಂಡವು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಈ ಕೆಳಗಿನ ಸ್ಥೂಲ ವಿಂಗಡಣೆಯೊಂದಿಗೆ ಗಮನಿಸಬಹುದು.

**೯.೨.೧. ಸಾಹಿತ್ಯೇರ ಜ್ಞಾನವನ್ನು ಮಾಹಿತಿಯನ್ನು ಕನ್ನಡಕ್ಕೆ ತಂದುಕೊಳ್ಳುವುದು.**

ಸಾಹಿತ್ಯೇತರ ಪಠ್ಯಗಳ ಭಾಷಾಂತರವು ಬಹುತೇಕವಾಗಿ ಜ್ಞಾನ ಮತ್ತು ಮಾಹಿತಿಯನ್ನು ಕನ್ನಡದಲ್ಲಿ ರೂಪಿಸುವ ಉದ್ದೇಶವನ್ನು ಹೊಂದಿದೆ. ವಸಾಹತು ಸಂದರ್ಭದಲ್ಲಿ ಸಾಹಿತ್ಯೇತರ ಮಾಹಿತಿಯನ್ನು ಕನ್ನಡದಲ್ಲಿ ಸಂಗ್ರಹಿಸುವ ಹಾಗೂ ಧಾರ್ಮಿಕ/ತಾತ್ವಿಕ ಕೃತಿಗಳನ್ನು ಪುನರ್ ರೂಪಿಸಿಕೊಳ್ಳುವ ಉದ್ದೇಶದಿಂದ ಭಾಷಾಂತರಗಳು ನಡೆದವು. ಕೆಲವು ಸಾಹಿತ್ಯೇತರ ಪಠ್ಯಗಳಲ್ಲಿ ಭಾಷಾಂತರಕಾರರು ತಮ್ಮ ಉದ್ದೇಶಗಳನ್ನು ಪ್ರಸ್ತಾಪಿಸಿದ್ದಾರೆ. ಉದಾಹರಣೆಗೆ: ''ನಮ್ಮ ಕನ್ನಡ ಭಾಷೆಯಲ್ಲಿ ಈ ಗ್ರಂಥಗಳು ಹೇರಳವಾಗಿಲ್ಲವಾದ್ದರಿಂದ ಅನ್ಯಭಾಷಾ ಪರಿಚಯಕ್ಕವಕಾಶವಿಲ್ಲದೆ ಗ್ರಾಮಾಂತರಗಳಲ್ಲಿಯೂ ಮತ್ತು ಇತರ ಸ್ಥಳಗಳಲ್ಲಿರುವ ಸಹಸ್ರಾರು ಮಂದಿ ಸೋದರ ಬಾಂಧವರು ಮೇಲ್ಕಂಡ ಭಾಷೆಗಳಲ್ಲಿನ ಗ್ರಂಥ ವಿಶೇಷಗಳನ್ನು ಸುಲಭವಾಗಿ ಗ್ರಹಿಸುವಂತೆ..... ಈ ಭಾಷೆಯಲ್ಲಿ ಇದುವರೆಗೆ ಇಂತಹ ಪುಸ್ತಕವೇ ಇರಲಿಲ್ಲ. ಈ ಕೊರತೆಯನ್ನು ಹೋಗಲಾಡಿಸುವ ಉದ್ದೇಶದಿಂದ'' (ಗೋವಿಂದ ರಾಜಲು, ೧೯೦೯, ಪೀಠಿಕೆ) ಭಾಷಾಂತರವನ್ನು ಮಾಡಲಾಯಿತು. ಈ ಉದ್ದೇಶವನ್ನು ಹೀಗೆ ಗುರುತಿಸಬಹುದು.

ಸಾಹಿತ್ಯೇತರ ಕೃತಿಗಳು ಹೆಚ್ಚಿನ ಪ್ರಮಾಣದ ಕನ್ನಡದಲ್ಲಿ ಇರದೇ ಇರುವುದರಿಂದ ಈ ಕೊರತೆಯನ್ನು ತುಂಬುವ ಉದ್ದೇಶದಿಂದ ಭಾಷಾಂತರಗಳು ನಡೆದವು. ಹಾಗೂ ಗ್ರಾಮೀಣ ಪ್ರದೇಶಗಳಲ್ಲಿರುವ ಜನರಿಗೆ ಅನ್ಯಭಾಷೆಯ ಪರಿಚಯಕ್ಕೆ ಅವಕಾಶವಿರುವುದಿಲ್ಲ. ಅದರಿಂದಾಗಿ ಅವರಿಗೆ ಗೊತ್ತಿರುವ (ಕನ್ನಡದ) ಭಾಷೆಯಲ್ಲಿ ಸಾಹಿತ್ಯೇತರ ಪಠ್ಯಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದರು.

ಇವುಗಳೊಂದಿಗೆ ಜ್ಞಾನ ಅಥವಾ ಮಾಹಿತಿಯನ್ನು ದೇಶೀಯ ಭಾಷೆಗಳಲ್ಲಿ ಒದಗಿಸುವ ಉದ್ದೇಶ ಸಹ ಭಾಷಾಂತರವನ್ನು ಕೈಗೊಳ್ಳಲು ಪ್ರೇರೆಪಿಸಿವೆ. ಈ ಕುರಿತು ವೆಂಕಟೇಶ ನಾರಣಪ್ಪನವರು ಹೇಳುವುದೇನೆಂದರೆ ''ಈಗ್ಗೆ ಸುಮಾರು ಅರವತ್ತು ಎಪ್ಪತ್ತು ವರುಷಗಳಿಂದಲೂ ಆಂಗ್ಲಭಾಷಾಭ್ಯಾಸವು ನಮ್ಮ ದೇಶದಲ್ಲಿ ಅಭಿವೃದ್ಧಿಯಾಗುತ್ತಿದ್ದರೂ ವಿಜ್ಞಾನ ವಿಷಯವಾಗಿ ಮಾತ್ರ ವಿಶೇಷ ಶ್ರದ್ಧೆಯನ್ನು ತೋರಿಬಂದಿಲ್ಲ.... ಆಧುನಿಕ ವಿಜ್ಞಾನಶಾಸ್ತ್ರದ ವಿಷಯಗಳನ್ನು ಸಾಮಾನ್ಯ ಜನರಿಗೆ ತಿಳಿಯುವಂತೆ....'' (ವೆಂಕಟೇಶ ನಾರಣಪ್ಪ ೧೯೧೮,) ಭಾಷಾಂತರವನ್ನು ಕೈಗೊಳ್ಳಲಾಗಿದೆ. ಈ ಮಾತನ್ನು ವೆಂಕಟೇಶ ಅವರು ವಿಜ್ಞಾನ ಪತ್ರಿಕೆಯ ಮುನ್ನುಡಿಯೊಂದರಲ್ಲಿ ಹೇಳಿದ್ದಾರೆ. ಈ ಪತ್ರಿಕೆ ಇಂಗ್ಲಿಷ್ ಮತ್ತಿತರ ಭಾಷೆಗಳಲ್ಲಿರುವ ವಿಜ್ಞಾನದ ವಿಷಯಗಳನ್ನು ಕನ್ನಡದಲ್ಲಿ ಪ್ರಕಟಿಸುವ ಪ್ರಯತ್ನ ಮಾಡಿದೆ. ಇಲ್ಲಿನ ಭಾಷಾಂತರದ ಉದ್ದೇಶವೇನೆಂದರೆ ಸಾಮಾನ್ಯ ಜನರಿಗೆ ವಿಜ್ಞಾನದ ವಿಷಯವನ್ನು ತಿಳಿಸುವುದು ಮತ್ತು ಈ ಕುರಿತಾದ ಮಾಹಿತಿಯನ್ನು ಒದಗಿಸುವುದಾಗಿದೆ.

ಪಠ್ಯಪುಸ್ತಕಗಳ ಭಾಷಾಂತರದ ಪ್ರಧಾನ ಉದ್ದೇಶ ಶೈಕ್ಷಣಿಕವಾದುದು. ಪಶ್ಚಿಮದ ಶಿಕ್ಷಣವನ್ನು ಕನ್ನಡದ ಆಧುನಿಕ ಶಿಕ್ಷಣವಾಗಿ ರೂಪಿಸಿಕೊಂಡಂತೆ ಅದರ ಭಾಗವಾಗಿ ಬಂದ ಪಠ್ಯಪುಸ್ತಕಗಳನ್ನು ಸಹ ಭಾಷಾಂತರದ ಮೂಲಕವೇ ಕನ್ನಡದಲ್ಲಿ ಸಿದ್ಧಗೊಳಿಸಿಕೊಂಡರು. ಆಧುನಿಕ ಶಿಕ್ಷಣದ ಅಗತ್ಯವಸ್ತು ಪಠ್ಯಪುಸ್ತಕ. ಶಾಲಾವಿದ್ಯಾಭ್ಯಾಸದ ಉದ್ದೇಶದಿಂದಾಗಿ ಪಶ್ಚಿಮದ ಹಾಗೂ ಭಾರತೀಯ ಇತರ ಭಾಷೆಗಳಲ್ಲಿನ ಕೃತಿಗಳನ್ನು ಕನ್ನಡದಲ್ಲಿ ಭಾಷಾಂತರಿಸಿಕೊಂಡರು. ಹಾಗೂ ಆಧುನಿಕ ಪೂರ್ವದ ಕನ್ನಡದ ಕಾವ್ಯಗಳನ್ನು ಶಿಕ್ಷಣದ ಉದ್ದೇಶಕ್ಕಾಗಿ ಸಂಗ್ರಹಿಸುವ, ಸಂಪಾದಿಸುವ ಭಾಷಾಂತರದ ಕೆಲಸವನ್ನು ಕೈಗೊಂಡಿರುವುದನ್ನು ಕಾಣಬಹುದಾಗಿದೆ. ಶಾಲಾ ಪಠ್ಯಗಳಲ್ಲಿ ಶಿಕ್ಷಣಕ್ಕೆ ಪೂರಕವಾಗಿ ವಯಸ್ಸು ಮತ್ತು ಲಿಂಗದ ಆಧಾರದಲ್ಲಿ ಪಠ್ಯಗಳನ್ನು ಭಾಷಾಂತರಿಸಿಕೊಳ್ಳುವ ಉದ್ದೇಶವನ್ನು ಕಾಣಬಹುದಾಗಿದೆ.

**೯.೨.೨. ಧಾರ್ಮಿಕ ಉದ್ದೇಶ**

ಅ) 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ನಡೆದ ಬೈಬಲ್‌ಗಳ ಭಾಷಾಂತರವು ಧರ್ಮ ಪ್ರಸಾರದ ಉದ್ದೇಶದಿಂದ ರೂಪುಗೊಂಡಿರುವುದು. ಭಾರತೀಯ ಭಾಷೆಗಳಿಗೆ ಬೈಬಲ್‌ನ್ನು ವಿವಿಧ ಮಾದರಿಯಲ್ಲಿ ಭಾಷಾಂತರಿಸುವ ಮೂಲಕ ಧಾರ್ಮಿಕ ಪ್ರಸರಣದ ಕಾರ್ಯವನ್ನು ಕೈಗೊಂಡರು. ಬೈಬಲ್‌ಗಳ ಭಾಷಾಂತರ ಬಹು ಉದ್ದೇಶಗಳನ್ನು ಹೊಂದಿದೆ. ಬೈಬಲ್‌ಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ ಹಲವು ಮಾದರಿಯ ಬೈಬಲ್‌ಗಳು ಬಂದವು, ಅವುಗಳಲ್ಲಿ ಬೈಬಲ್‌ಗಳ ಪುನರ್‌ಲೇಖ, ನೇರ ಭಾಷಾಂತರ ಮುಖ್ಯವಾದವು. ಹೀಗೆ ಬರುವಾಗ ಇವುಗಳು ಮಕ್ಕಳಿಗಾಗಿ, ಮಹಿಳೆಯರಿಗಾಗಿ, ಚರ್ಚುಗಳಿಗಾಗಿ, ವಿದ್ಯಾವಂತರಿಗಾಗಿ ಮತ್ತು ಅವಿದ್ಯಾವಂತರಿಗಾಗಿ ಎಂಬ ಉದ್ದೇಶದಿಂದಲೇ ರೂಪುಗೊಂಡಿದೆ.

ಆ) ೧೯೨೦ರ ಮೊದಲು ಪ್ರಕಟಗೊಂಡ ಟೀಕುಗಳು ಅವುಗಳದೇ ಆದ ಉದ್ದೇಶವನ್ನು ಹೊಂದಿವೆ. ಈ ಟೀಕುಗಳ ರಚನೆ ಧರ್ಮಗಳ 'ರಿ-ಕೋಡಿಫಿಕೇಶನ್' (ಪುನರ್ ಸಂಹಿತೆ)ಗಾಗಿ ನಡೆದಿರುವಂತೆ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುವ, ಜನ ಮನ್ನಣೆ ಪಡೆಯುವ ಉದ್ದೇಶದಿಂದ ಧಾರ್ಮಿಕ ಹಾಗೂ ಧಾರ್ಮಿಕೇತರ ಕೃತಿಗಳಿಗೆ ಟೀಕು, ವ್ಯಾಖ್ಯಾನಗಳನ್ನು ಬರೆದರು. ಹಾಗೆಯೇ ೧೯ನೇ ಶತಮಾನದಲ್ಲಿ ಧಾರ್ಮಿಕ ಪಠ್ಯಗಳಿಗೆ ಟೀಕು, ವ್ಯಾಖ್ಯಾನ ಬರೆದು ಧರ್ಮದಲ್ಲಿನ ವಿವಿಧ ಸಮುದಾಯಗಳನ್ನು 'ರಿ-ಯುನಿಫಿಕೇಶನ್' (ಪುನರ್ ಒಗ್ಗೂಡಿಸುವ) ಮಾಡುವ ಉದ್ದೇಶವನ್ನು ಹೊಂದಿದೆ. ತಮ್ಮ ಧಾರ್ಮಿಕ ಕೃತಿಗಳಿಗೆ ಈ ಕಾಲದ ಅರ್ಥ, ವಿವರಣೆಯನ್ನು ಕೊಡುವ ಮೂಲಕ ಹೊಸ ಓದುಗರಿಗಾಗಿ ಟೀಕುಗಳನ್ನು ರಚಿಸಿದರು. ಇಲ್ಲಿಯ ಉದ್ದೇಶವೇನೆಂದರೆ ಧರ್ಮವನ್ನು ಸಂಘಟಿಸುವುದು ಮತ್ತು ಆ ನೆಲೆಯಲ್ಲಿಯೇ ಅವುಗಳನ್ನು ಮರುರೂಪಿಸುವುದಾಗಿದೆ. ಹೀಗೆಯೇ ವಿವಿಧ ಉದ್ದೇಶಗಳಿಂದ ಟೀಕುಗಳು ರಚನೆಗೊಂಡವು.

ಟೀಕುಗಳ ಭಾಷಾಂತರ ಉದ್ದೇಶವನ್ನು ಒಟ್ಟಾರೆಯಾಗಿ ಹೀಗೆ ಗುರುತಿಸಬಹುದು.

೧. ಆಧುನಿಕ ಸಂದರ್ಭದಲ್ಲಿ ಧಾರ್ಮಿಕ ಕೃತಿಗಳಿಗೆ ಟೀಕುಗಳನ್ನು ಬರೆದು ಧರ್ಮವನ್ನು 'ರಿ-ಕೋಡಿಫಿಕೇಶನ್' ಮಾಡುವ ಹಾಗೂ ಧಾರ್ಮಿಕ ಸಮುದಾಯಗಳನ್ನು ಒಗ್ಗೂಡಿಸಲು 'ರಿ-ಯುನಿಫಿಕೇಶನ್' ಉದ್ದೇಶವನ್ನು ಹೊಂದಿತ್ತು.

೨. ಅನ್ಯಭಾಷೆಗಳಲ್ಲಿ ಮತ್ತು ಆ ಭಾಷೆಯಲ್ಲಿನ ಜ್ಞಾನದ ಬಗ್ಗೆ ತಮ್ಮಲ್ಲಿರುವ ಪಾಂಡಿತ್ಯವನ್ನು ಸಾಬೀತು ಪಡಿಸುವುದು.

೩. ಒಂದು ಉಚ್ಚ ಪಠ್ಯ (Matatext) ವನ್ನು ಜನಸಾಮಾನ್ಯರ ಪಠ್ಯವಾಗಿ ರೂಪಿಸಿಕೊಳ್ಳುವುದು.

**೬.೨.೩. ಅನ್ಯಸಾಹಿತ್ಯಿಕ ಪಠ್ಯಗಳನ್ನು ಕನ್ನಡದ್ದಾಗಿಸುವ ಉದ್ದೇಶ**

ನಾಟಕ ರೂಪಾಂತರಕಾರರಲ್ಲಿ ತಾವು ಯಾವ ಉದ್ದೇಶದಿಂದ ನಾಟಕವನ್ನು 'ಕನ್ನಡೀಕರಿಸಿ'ದ್ದೇವೆ ಎನ್ನುವ ಬಗ್ಗೆ ಪೀಠಿಕೆ, ಪ್ರಸ್ತಾವದಲ್ಲಿ ಹೇಳಿಕೊಂಡಿದ್ದಾರೆ. ಹೊನ್ನಾಪುರ ಮಠ ಅವರು 'The school for scandal' ನಾಟಕವನ್ನು ನಿಂದಾಪ್ರಭಾವ ನಾಟಕ' (೧೯೧೧)ವೆಂದು ಭಾಷಾಂತರಿಸಿದ್ದಾರೆ. ಈ ಬಗ್ಗೆ ಅವರ ಲಭಿಪ್ರಾಯವೇನೆಂದರೆ, ''ಈ ನಾಟಕದಲ್ಲಿ ವಿನೋದವು, ನೀತಿಯೂ ಸರಿಬೆರೆಕೆಯಾಗಿರುವುದರಿಂದ ಇದು ಇಂಗ್ಲಿಷ್ ಸಮಾಜದಲ್ಲಿ ಪ್ರಿಯಕರವಾಗಿರುತ್ತದೆ. ಇಂಥ ಶೃಂಗಾರ, ಕರುಣ, ಹಾಸ್ಯಭರಿತವಾದ ನಾಟಕವನ್ನು ಓದುವ ಲಾಭವು ನನ್ನ ಬಾಂಧವರಾದ ಕನ್ನಡಿಗರಿಗೆ ದೊರೆಯಲೆಂಬ ಅಭಿಲಾಷೆಯಿಂದ'' (ಹೊನ್ನಾಪುರ ಮಠ, ೧೯೧೧, ಪ್ರಸ್ತಾವನೆ, ೧.೨) ಭಾಷಾಂತರ ಮಾಡಿದೆ ಎಂದಿದ್ದಾರೆ.

ಈ ನಾಟಕದಲ್ಲಿ ವಿನೋದ ಮತ್ತು ನೀತಿಯು ಇರುವುದರಿಂದ ಇಂಗ್ಲಿಷರಿಗೆ ಬಹಳ ಪ್ರಿಯಕರವಾಗಿದೆ. ಇದರ ಲಾಭವು ಕನ್ನಡಿಗರಿಗೆ ದೊರೆಯಲಿ ಎಂಬ ಉದ್ದೇಶದಿಂದ ಭಾಷಾಂತರ ಮಾಡಲಾಗಿದೆ. ಅಂದರೆ ಕನ್ನಡೇತರರಿಗೆ ಪ್ರಿಯಕರವಾದ ಪಠ್ಯ ಕನ್ನಡಿಗರಿಗೂ ದೊರೆತು ಅದರ ಲಾಭವನ್ನು ಪಡೆಯಲಿ ಎಂಬ ಉದ್ದೇಶದಿಂದ ಈ ಪಠ್ಯ

ಭಾಷಾಂತರಗೊಂಡಿದೆ. ಆದರೆ ಗಮನಿಸಬೇಕಾದ ಸಂಗತಿಯೆಂದರೆ, ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿರುವಂತೆ 'ಇಂಗ್ಲಿಷ್ ಗೀತಗಳು' ಪೂರ್ವದ ನಾಟಕ ಕೃತಿಗಳು ರಂಗಭೂಮಿಯ ಅಗತ್ಯಕ್ಕಾಗಿ ಭಾಷಾಂತರಗೊಂಡಿರುವುದೇ ಹೆಚ್ಚು. ಆದರೂ ಕೆಲವೊಂದು ಕೃತಿಗಳು ಓದುಗರನ್ನು ಗಮನದಲ್ಲಿರಿಸಿಕೊಂಡು ರೂಪುಗೊಂಡವು. ಅದರಲ್ಲಿ 'ನಿಂದಾಪ್ರಭಾವ ನಾಟಕ'ವು ಒಂದು. ೧೯ನೇ ಶತಮಾನದ ಕೊನೆಯ ಮತ್ತು ೨೦ನೇ ಶತಮಾನದ ಆರಂಭಿಕ ದಶಕಗಳಲ್ಲಿ ಆಧುನಿಕ ಶಿಕ್ಷಣದ ಫಲವಾಗಿ 'ಓದುಗ ವರ್ಗ'ವೊಂದು ರೂಪುಗೊಳ್ಳುತ್ತಿತ್ತು. ದೇಶೀಯ ಭಾಷೆಗಳಲ್ಲಿ ಅಷ್ಟು ಪ್ರಮಾಣದ ಕೃತಿಗಳು ಇಲ್ಲದಿರುವುದರಿಂದ ಹಾಗೂ ಈ ಓದುಗವರ್ಗ ಇಂಗ್ಲಿಷ್ ಶಿಕ್ಷಣದಿಂದ ಪ್ರಭಾವಿತವಾಗಿರುವುದರಿಂದ ಈ ಬಗೆಯಲ್ಲಿ ಇಂಗ್ಲಿಷ್‌ನ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನಗಳು ನಡೆದಿರುವ ಸಾಧ್ಯತೆಯಿದೆ.

ಹೀಗೆ ಓದುಗರಿಗಾಗಿ ಪಠ್ಯಗಳು ಭಾಷಾಂತರಗೊಂಡಿರುವಂತೆ ತಿಳುವಳಿಕೆ/ಜ್ಞಾನವನ್ನು ಒದಗಿಸುವ ಮತ್ತು ಲೇಖಕರ ಹಾಗೂ ನಾಟಕಕಾರರ ಪರಿಚಯದ ಉದ್ದೇಶದಿಂದಲೂ ಭಾಷಾಂತರಗಳು ನಡೆದಿವೆ. ಅಂದರೆ ಇಂಗ್ಲಿಷ್‌ನಲ್ಲಿರುವ ಅಥವಾ ಬೇರೆ ಭಾಷೆಗಳಲ್ಲಿರುವ ಜ್ಞಾನವನ್ನು ಕನ್ನಡ ಭಾಷೆಯಲ್ಲಿ ರೂಪಿಸಬೇಕು ಎಂಬ ಉದ್ದೇಶಗಳಡಿಯಲ್ಲಿ ಭಾಷಾಂತರಗಳು ನಡೆದವು. ಈ ಕಾಲಾವಧಿಯಲ್ಲಿ ಎಂ.ಆರ್.ಅಣ್ಣಾಜಿರಾವ್ ಅವರು ಇಂಗ್ಲಿಷ್‌ನಿಂದ ನಾಲ್ಕು ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಯಾವ ಉದ್ದೇಶದಿಂದ ಭಾಷಾಂತರ ಮಾಡಲಾಯಿತು ಎನ್ನುವ ಕುರಿತು ಪ್ರಸ್ತಾಪಿಸುವ ಇವರು, ''ಭರತಖಂಡದಲ್ಲಿ ಪಾಶ್ಚಿಮಾತ್ಯರ ರಾಜ್ಯಾಡಳಿತದ ನಿಂಬಂಧನೆಗಳು ನೆಲೆಗೊಂಡ ಹಾಗೆಲ್ಲ ಧನಮಾನ ಪ್ರಾಣಗಳಿಗೆ ಕ್ಷೇಮವು ಪ್ರಜ್ಞಾಹಿತೈಕಸಾಂಕುಶ ಪ್ರಭುತ್ವವು ಸ್ಥಿರಪಟ್ಟಂತೆ ಅವರ ವಿದ್ಯೆಯನ್ನು ನಮ್ಮ ದೇಶಗಳೊಂದಿಗೆ ಅಭ್ಯಾಸಮಾಡುವಲ್ಲಿ ಆ ಅಪರಧಿಕ ದೇಶದ ಕವಿಗಳ ಅಭಿಪ್ರಾಯಗಳನ್ನು ನಮ್ಮ ದೇಶಭಾಷೆಯಲ್ಲಿ ಅಸ್ಮದ್ದೇಶಿಯರ ತಿಳುವಳಿಕೆಯ ಬಗ್ಗೆ ಭಾಷಾಂತರಿಸಬೇಕೆಂಬ ಅಭಿಲಾಷೆ ಹುಟ್ಟಿತು'' (ಅಣ್ಣಾಜಿರಾವ್, ೧೯೦೦, ಉಪೋದ್ಘಾತ,೨) ಎನ್ನುತ್ತಾರೆ.

ಪಶ್ಚಿಮದ ಕವಿಗಳ ಅಭಿಪ್ರಾಯಗಳನ್ನು, ಅವರ ತಿಳುವಳಿಕೆಯನ್ನು ನಮ್ಮ ದೇಶೀಯ ಭಾಷಿಕರಿಗೆ ತಿಳಿಸಬೇಕು ಎಂಬ ಉದ್ದೇಶದಿಂದ 'ಮಹೀಮಂಡನ' ನಾಟಕವನ್ನು ಭಾಷಾಂತರಿಸಲಾಗಿದೆ. ಬಸವಪ್ಪಶಾಸ್ತ್ರಿಗಳು ನಾಟಕದ ಭಾಷಾಂತರದ ಉದ್ದೇಶದ ಬಗ್ಗೆ ಹೇಳುವುದೇನೆಂದರೆ ''ಇಂಗ್ಲೀಷ್ ನಾಟಕಗಳಲ್ಲಿ ಕೆಲವನ್ನು ಕನ್ನಡದಲ್ಲಿ ಬರೆದರೆ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಿರುವುದಲ್ಲದೆ ಇಂಗ್ಲೀಷ್ ಜನರಲ್ಲಿನ ವ್ಯವಹಾರಾದಿಗಳೂ ಸ್ವಲ್ಪಮಟ್ಟಿಗೆ ಕನ್ನಡಿಗರಿಗೆ ಗೊತ್ತಾಗಬಹುದಾದ್ದರಿಂದ'' (ಬಸವಪ್ಪಶಾಸ್ತ್ರಿ, ೧೯೫೫, ಪೀಠಿಕೆ) ಭಾಷಾಂತರ ಕೈಗೊಂಡರು. 'ಶೂರಸೇನ ಚರಿತ್ರೆ', ಮುಖ್ಯವಾಗಿ ಎರಡು ಉದ್ದೇಶಗಳಿಂದ ಕನ್ನಡಕ್ಕೆ ಬಂದಿದೆ. ಒಂದು, ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು (ಇಂಗ್ಲಿಷ್ ಬಾರದಿದ್ದರೂ ಬರುವವರ ಸಹಕಾರ ಪಡೆದು) ಇಂಗ್ಲಿಷ್ ನಾಟಕವನ್ನು ಕನ್ನಡೀಕರಿಸುವುದು. ಎರಡು, ಇಂಗ್ಲಿಷ್ ಸಮಾಜದ ವ್ಯವಹಾರಗಳು ಈ ಮೂಲಕವಾದರೂ ಕನ್ನಡಿಗರಿಗೆ ತಿಳಿಯಲಿ ಎಂಬುದಾಗಿದೆ.

ಇವುಗಳನ್ನು ಗಮನಿಸಿದರೆ, ಇಂಗ್ಲಿಷ್ ಸಮುದಾಯದಲ್ಲಿನ ವ್ಯವಹಾರಾದಿಗಳನ್ನು ದೇಶಭಾಷೆಯಲ್ಲಿ ಕೊಡಬೇಕು, ರೂಪಿಸಬೇಕೆಂದು 'ಇಂಗ್ಲಿಷ್ ಗೀತಗಳ' ಪೂರ್ವದ ನಾಟಕಗಳ ರೂಪಾಂತರ ನಡೆದವು. ಬಹುಶಃ ಈ ಉದ್ದೇಶ ಈ ಕಾಲದ ಒಟ್ಟಾರೆ ಭಾಷಾಂತರದ ಹಿಂದಿನ ಉದ್ದೇಶವೂ ಆಗಿರಬಹುದು.

೧೯ನೇ ಶತಮಾನದ ಕೊನೆಯ ಅವಧಿಯಲ್ಲಿ ರಂಗಭೂಮಿಯಲ್ಲಿ ಪ್ರಸಿದ್ಧ ಪಡೆದ 'ರಾಮವರ್ಮ ಲೀಲಾವತಿ ಚರಿತೆ' (೧೮೮೯)ಯು ''ಯುರೋಪ್ ಖಂಡದಲ್ಲೆಲ್ಲಾ ಪ್ರಖ್ಯಾತನಾಗಿರುವ ಷೇಕ್ಸ್‌ಪಿಯರ್ ಎಂಬ ಹೂಣ ಕವಿಶ್ರೇಷ್ಠನ ನಾಟಕಗಳಲ್ಲಿ ಕೆಲವನ್ನು ಕರ್ಣಾಟಕ ಭಾಷಾಂತರ ಮಾಡಿ ಆಡುವುದಕ್ಕೆ ಉಪಯೋಗಿಸಿದರೆ ಇದರಿಂದ ಜನರಿಗೆ ಪರಮಾನಂದ ಉಂಟಾಗಬಹುದೆಂದು ಆ ಕಾಲದಲ್ಲಿ ನನಗೆ ತೋರಿದ್ದರಿಂದ ''ರೋಮಿಯೋ ಅಂಡ್ ಜೂಲಿಯಟ್'' ಎಂಬ ನಾಟಕಕ್ಕೆ ನಾನು ಕರ್ಣಾಟಕ ಭಾಷಾಂತರ ಮಾಡಿಕೊಳ್ಳಲಾಯಿತು. (ಆನಂದರಾವ್, ೧೮೮೯, ಪೀಠಿಕೆ) ಇಲ್ಲಿಯೂ ಸಹ ಓದುವ ಪಠ್ಯವೊಂದನ್ನು 'ನೋಡುಗ ಪಠ್ಯ' (ರಂಗರೂಪಾಂತರ)ವಾಗಿ ಭಾಷಾಂತರಿಸಿಕೊಳ್ಳಲಾಗಿದೆ. ಶೇಕ್ಸ್‌ಪಿಯರ್ ಇಂಗ್ಲಿಷ್‌ನ ಶ್ರೇಷ್ಠ ನಾಟಕಕಾರ, ಆತನ ನಾಟಕಗಳನ್ನು ಭಾಷಾಂತರ ಮಾಡಿ ಪ್ರದರ್ಶಿಸಿದರೆ ಪ್ರೇಕ್ಷಕರಿಗೆ ಆನಂದ ಉಂಟಾಗಬಹುದೆಂಬ ಉದ್ದೇಶದಿಂದ ಭಾಷಾಂತರ ಮಾಡಲಾಯಿತು ಎಂದು ಆನಂದರಾವ್ ಅವರು ಹೇಳಿಕೊಂಡಿದ್ದಾರೆ. ರಂಗಭೂಮಿ ಮನರಂಜನೆಯ ಪ್ರಮುಖ ಸಾಧನವು, ವಾಹಿನಿಯು ಆದ್ದರಿಂದ ಮತ್ತು ಈ ಅವಧಿಯಲ್ಲಿ ರಂಗಭೂಮಿಗೆ ನಾಟಕಗಳು ಅಗತ್ಯವಾದ್ದರಿಂದ ಇಂಗ್ಲಿಷ್ ಮತ್ತಿತರ ಭಾಷೆಯ ನಾಟಕಗಳು ಭಾಷಾಂತರಗೊಳ್ಳುವಂತಾಯಿತು.

'ಹೇಮಚಂದ್ರ ರಾಜವಿಲಾಸ' ನಾಟಕವನ್ನು ರೂಪಾಂತರಿಸಿದ ಎಂ.ಎಸ್.ಪುಟ್ಟಣ್ಣನವರು ''ಈ ನಾಟಕದಲ್ಲಿ ತೋರಿಸಿರುವ ಜಗದ್ವಿಲಕ್ಷಣವಾದ ಬುದ್ಧಿಯನ್ನು ಕೌಶಲ್ಯವನ್ನು ನಮ್ಮ ಕನ್ನಡಿಗರು ತಿಳಿದುಕೊಳ್ಳಲು ಸ್ವಲ್ಪ ಮಟ್ಟಿಗಾದರೂ ಅನುಕೂಲಪಡಿಸಿಕೊಡಬೇಕೆಂದು ನನಗೆ ಆಶೆ ಹುಟ್ಟಿತು'' (ಎಂ.ಎಸ್. ಪುಟ್ಟಣ, ೧೯೯೯, ಪೀಠಿಕೆ) ಅದರಿಂದಾಗಿ ಭಾಷಾಂತರಿಸಿದೆ ಎನ್ನುತ್ತಾರೆ. ಈ ನಾಟಕವನ್ನು ಭಾಷಾಂತರಿಸಿರುವ ಉದ್ದೇಶವೇನೆಂದರೆ, ಇಂಗ್ಲಿಷ್ ನಾಟಕದಲ್ಲಿನ ಬುದ್ಧಿ, ಕೌಶಲ್ಯ ಮತ್ತು ತಿಳುವಳಿಕೆಯನ್ನು ಕನ್ನಡಿಗರಿಗೆ ಗೊತ್ತುಪಡಿಸುವುದಾಗಿದೆ.

''ಜನರಲ್ಲಿ ನಿಜವಾದ ನಾಗರಿಕತೆಯು ವಿದ್ಯಾಭ್ಯಾಸವು ಹೆಚ್ಚಿದ ಹಾಗೆಲ್ಲ, ನೀತಿಯೂ ಸದಾಚಾರವು ಹೆಚ್ಚುವುದೆಂದು ನಂಬುವುದೇನೋ ನ್ಯಾಯವೇ, ಆದರೆ ಈಗ ನಮ್ಮ ಜನರಿಗೆ ನೀತಿಯನ್ನು ತಪ್ಪಾಗಿ ಸ್ತ್ರೀ ಪುರುಷರು ಪರಸ್ಪರ ಅನುಸರಿಸಬೇಕಾದ ನೀತಿಯನ್ನು ಅವಶ್ಯಕತೆಯಲ್ಲವೆಂದು ಯಾರು ಹೇಳಲಾರರು. ವ್ಯಭಿಚಾರ ದೋಷವನ್ನು ದೂಷಿಸಿ, ನಿರ್ಮಲ ದಾಂಪತ್ಯದ ನೀತಿಯನ್ನು ಸೂಚಿಸುವುದೇ ಈ ಸಣ್ಣ ಪುಸ್ತಕದ ಉದ್ದೇಶ'' (ಡಿ.ವಿ.ಜಿ. ೧೯೧೧, ವಿಜ್ಞಾಪನೆ).

''ಆಂಗ್ಲ ಮಹಾಕವಿಯಾದ ಶೇಕ್ಸ್‌ಪಿಯರ್‌ನು ಲೋಕೋಪಕಾರ್ಥವಾಗಿ ವಿರಚಿಸಿರುವ ನಾಟಕಗಳಲ್ಲಿ ''ಒಥೆಲೋ'' ಎಂಬುದೊಂದು ರೂಪಕವು ಸಂಶಯಪರನಿಗೆ ಸಂಕಟ ಪರಂಪರೆಗಳುಂಟಾಗುವವೆಂಬುದನ್ನು, ಸ್ವಾರ್ಥಕ್ಕೋಸುಗ ಪರಾರ್ಥವನ್ನಪಹರಿಸುವ ಅಧಮರು ತಾವು ವಿಪತ್ತಿಗೀಡಾಗದಿರೆಂಬುದುನ್ನು ವಿಶದಗೊಳಿಸುವುದಲ್ಲವೇ.... ನಮ್ಮ ಕನ್ನಡಿಗರ ಸೌಕರ್ಯಕ್ಕೋಸುಗ ನಾನು ಅದನ್ನ ಭಾಷಾಂತರಮಾಡಿ ಪಾಠಕರಿ ಗರ್ಪಿಸಿರುವೆನು'' (ಶ್ರೀಕಂಠಶಾಸ್ತ್ರಿ, ೧೯೧೧, ವಿಜ್ಞಾಪನೆ).

‘ಕನಕಾಲುಕ’ವನ್ನು ಭಾಷಾಂತರಿಸಿದ ಡಿ.ವಿ.ಗುಂಡಪ್ಪನವರು ಹಾಗೂ ‘ಪದ್ಮಿನಿ’ಯನ್ನು ಕನ್ನಡಕ್ಕೆ ತಂದಿರುವ ಶ್ರೀಕಂಠಶಾಸ್ತ್ರಿ ನಂಜನಗೂಡು ಅವರು ಈ ಮೇಲಿನಂತೆ ತಮ್ಮ ನಾಟಕಗಳ ಉದ್ದೇಶಗಳನ್ನು ಹೇಳಿಕೊಂಡಿದ್ದಾರೆ.

ಡಿ.ವಿ.ಜಿ.ಯವರು ಹೇಳುವುದೇನೆಂದರೆ ನಾಗರಿಕತೆ ವಿದ್ಯಾಭ್ಯಾಸದಿಂದ ನೀತಿ-ನಡಾವಳಿಗಳು ಸರಿಯಾಗಬೇಕು ಆದರೆ ಹಾಗೆ ಆಗಲಿಲ್ಲ. ನೀತಿಯನ್ನು ಸದಾಚಾರವನ್ನು ಸಾರುವುದು ಈ ಕಾಲಾವಧಿಯ ಅಗತ್ಯ ಹಾಗಾಗಿ ಈ ನಿಟ್ಟಿನಲ್ಲಿ ಭಾಷಾಂತರ ಕೈಗೊಳ್ಳಲಾಯಿತು ಎಂದರೆ, ಶ್ರೀಕಂಠಶಾಸ್ತ್ರಿಯವರು, ಮಾನವ ಸ್ವಾರ್ಥ, ಅಸೂಯೆಯ ಅಂತಿಮ ಹಂತ ಸೋಲು/ಸಾವು, ಇದನ್ನು ಜನರು ತಿಳಿಯಬೇಕು. ಕೇಡನ್ನು ಬಯಸಿದವರಿಗೆ ಎಂದೂ ಒಳಿತಾಗಲಾರದು. ಈ ತಿಳುವಳಿಕೆ ‘ಓಥೆಲೋ’ದಲ್ಲಿರುವುದರಿಂದ ಅದನ್ನು ‘ಪದ್ಮಿನಿ’ಯಾಗಿ ಕನ್ನಡಕ್ಕೆ ತಂದಿರುವೆ ಎನ್ನುತ್ತಾರೆ. ಅಂದರೆ ಈ ಎರಡು ನಾಟಕಗಳು ನೀತಿ/ನೈತಿಕತೆಯನ್ನು ಇಲ್ಲವೆ ಆಚಾರವನ್ನು ತಿಳಿಸುವ ಉದ್ದೇಶದಿಂದ ಭಾಷಾಂತರಗೊಂಡಿವೆ. ಬದಲಾದ ಜೀವನ ವಿಧಾನ ಮತ್ತು ಆಲೋಚನಾ ಕ್ರಮದಿಂದ ಜನರು ಒಳ್ಳೆಯ ಗುಣದಿಂದ ದೂರಸರಿಯುತ್ತಾರೆಂಬ ನಿಲುವುಗಳಿದ್ದು, ಅವುಗಳನ್ನು ಸರಿಪಡಿಸಲು ಆ ಕುರಿತು ಅರಿವು ಮೂಡಿಸುವ ಉದ್ದೇಶದಿಂದ ಭಾಷಾಂತರ ಚಟುವಟಿಕೆ ನಡೆದಿದೆ ಎಂದೆನಿಸುತ್ತದೆ.

ಹೀಗೆ ‘ಇಂಗ್ಲಿಷ್ ಗೀತಗಳು’ ಪೂರ್ವದ ಭಾಷಾಂತರ ಚಟುವಟಿಕೆ ವಿವಿಧ ಉದ್ದೇಶಗಳಿಂದ ನಡೆದವುಗಳಾಗಿವೆ. ಈ ಕಾಲಾವಧಿಯಲ್ಲಿನ ಒಟ್ಟಾರೆ ಪ್ರೇರಣೆ, ಪ್ರಭಾವ ಅಗತ್ಯಗಳು ಸಹ ಭಾಷಾಂತರಕ್ಕೆ ಪ್ರೇರೇಪಿಸಿವೆ ಎನ್ನಬಹುದು. ವಿವಿಧ ಮಾದರಿಗಳ ಮೂಲಕ ನಡೆದಿರುವ ಈ ಭಾಷಾಂತರ ಪ್ರಕ್ರಿಯೆಯ ಉದ್ದೇಶವನ್ನು ಹೀಗೆ ಗುರುತಿಸಬಹುದು.

೧. ಕನ್ನಡದಲ್ಲಿ ಹೊಸ ಜ್ಞಾನ ಮತ್ತು ಮಾಹಿತಿಯನ್ನು ತರುವ ಉದ್ದೇಶದಿಂದ ಭಾಷಾಂತರಗಳು ನಡೆದವು. ಉದಾ: ಸಾಹಿತ್ಯೇತರ ಪಠ್ಯಗಳ ಭಾಷಾಂತರದ ಉದ್ದೇಶಗಳು.

೨. ಕನ್ನಡಿಗರನ್ನು ಒಂದು ಹೊಸ ಸಂವೇದನೆಗೆ ಒಗ್ಗಿಸಬೇಕು ಎಂಬ ಉದ್ದೇಶದಿಂದ ಭಾಷಾಂತರ ಚಟುವಟಿಕೆಯನ್ನು ಕೈಗೊಳ್ಳಲಾಯಿತು. ಉದಾ: ಸಾಹಿತ್ಯಕ ಪಠ್ಯ (ನಾಟಕ ಇತ್ಯಾದಿ)ಗಳ ಭಾಷಾಂತರ.

೩.ಭಾಷಾಂತರವನ್ನು ಒಂದು ವಿದ್ವತ್ತಿನ ಚಟುವಟಿಕೆಯಾಗಿ ಕೈಗೊಳ್ಳುವುದು ಉದಾ: ಟೀಕು/ವ್ಯಾಖ್ಯಾನಗಳ ರಚನೆಯ ಉದ್ದೇಶ ಇತ್ಯಾದಿಗಳು.

ಈ ಕಾಲಘಟ್ಟದ ಭಾಷಾಂತರಗಳು ಗುರುತಿಸಿಕೊಂಡಿರುವ ಉದ್ದೇಶಗಳು ಅವುಗಳ ಭಾಷಾಂತರ ಸ್ವರೂಪ (ಮಾದರಿ)ವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ.

### ೯.೩ ಭಾಷಾಂತರದ ಮಾದರಿಗಳು

ಪ್ರಸ್ತುತ ದಿನಗಳಲ್ಲಿ ಚರ್ಚೆಗೊಳಗಾಗುತ್ತಿರುವ ಭಾಷಾಂತರದ ವಿವಿಧ ಮಾದರಿಗಳನ್ನು ‘ಇಂಗ್ಲಿಷ್ ಗೀತಗಳು’ ಪೂರ್ವದಲ್ಲಿಯೇ ಭಾಷಾಂತರಕಾರರು ಬಳಸಿದ್ದಾರೆ. ಜೊತೆಗೆ ಈ ಹಿಂದೆ ಚರ್ಚಿಸಿದಂತೆ ಭಾಷಾಂತರ ಪ್ರಕ್ರಿಯೆಯನ್ನು ವಿವಿಧ ಹೆಸರುಗಳಿಂದ ಪರಿಭಾವಿಸುವ, ಅರ್ಥೈಸುವ ಪ್ರಯತ್ನವನ್ನು ಮಾಡಿದ್ದಾರೆ. ೧೮೫೦ ರಿಂದ ೧೯೨೦ರ ಅವಧಿಯಲ್ಲಿ ‘ರೂಪಾಂತರ’, ‘ಪುನರ್‌ಲೇಖ’, ‘ಸಂಗ್ರಹಾನುವಾದ’ ಮತ್ತು ‘ನೇರ ಭಾಷಾಂತರ’ ವ್ಯಾಖ್ಯಾನ,

ಇತ್ಯಾದಿ ಭಾಷಾಂತರದ ಮಾದರಿಗಳು ಬಳಕೆಗೊಂಡಿವೆ. ಕೃತಿಯ ವಿಷಯ ಮತ್ತು ಭಾಷಾಂತರದ ಉದ್ದೇಶದೊಂದಿಗೆ ಭಾಷಾಂತರದ ಓದುಗರಾರು ಎಂಬುದರೊಂದಿಗೆ ಭಾಷಾಂತರ ಮಾದರಿಗಳು ನಿರ್ಧಾರಗೊಂಡಿವೆ. ಈ ಅವಧಿಯಲ್ಲಿ ಸಾಂಪ್ರದಾಯಿಕ ಮಾದರಿಯಿಂದ ಎಲ್ಲಾ ಮಾದರಿಗಳು ಬಳಕೆಗೊಂಡಿವೆ.

ಸಾಹಿತ್ಯ ಪಠ್ಯಗಳ ಭಾಷಾಂತರವು ಬಹುತೇಕವಾಗಿ 'ರೂಪಾಂತರ' ಮಾದರಿಯಿಂದ ನಡೆದಿವೆ. ೧೮೫೦ರ ಅವಧಿಯಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಬಂದ ಬಹುತೇಕ ನಾಟಕ, ಇತ್ಯಾದಿ ಸಾಹಿತ್ಯ ಕೃತಿಗಳು ರೂಪಾಂತರದ ಮಾದರಿಯಲ್ಲಿ ಕನ್ನಡೀಕರಣಗೊಂಡಿವೆ. ಪಶ್ಚಿಮದ/ಇಂಗ್ಲಿಷ್ ಭಾಷೆ, ಸಂಸ್ಕೃತಿಯ ಪಠ್ಯವೊಂದು ನೇರವಾಗಿ ಕನ್ನಡಕ್ಕೆ ಬರುವುದಕ್ಕಿಂತ ರೂಪಾಂತರದ ಮಾದರಿಯಲ್ಲಿ ರೂಪುಗೊಳ್ಳುವುದು ಸೂಕ್ತ ಎಂದು ಕನ್ನಡ ಭಾಷಾಂತರಕಾರರು ಭಾವಿಸಿರಬೇಕು. ಹೀಗಾಗಿ ಈ ಅವಧಿಯ ನಾಟಕ ಪಠ್ಯಗಳು ಮೊದಲು ಓದುಗ ಪಠ್ಯಗಳಾಗಿದ್ದರೂ ಭಾಷಾಂತರದ ಸಂದರ್ಭದಲ್ಲಿ 'ರಂಗ ರೂಪಾಂತರ'ಗೊಂಡಿವೆ. ಜೊತೆಗೆ ಶೀರ್ಷಿಕೆ, ಸನ್ನಿವೇಶ ಮತ್ತು ಪಾತ್ರ ಇತ್ಯಾದಿಗಳೆಲ್ಲವನ್ನು ಕನ್ನಡದ ಸಂದರ್ಭದಲ್ಲಿ ಮರುರೂಪಿಸಿ (ರೂಪಾಂತರಿಸಿ)ಕೊಳ್ಳಲಾಗಿದೆ. ಇದರೊಂದಿಗೆ ಶಾಲಾ ಪಠ್ಯಗಳನ್ನು ರಚಿಸಿಕೊಳ್ಳುವ ಸಂದರ್ಭದಲ್ಲಿಯೂ ಅನೇಕ ಪಠ್ಯಗಳನ್ನು 'ರೂಪಾಂತರಿಸಿ'ಕೊಳ್ಳುವ ಪ್ರಯತ್ನಗಳು ನಡೆದಿವೆ.

ಕನ್ನಡದ ಸಂದರ್ಭದಲ್ಲಿ 'ಪುನರ್‌ಲೇಖ'ಗಳು ಪಂಪನಿಂದಲೇ ಆರಂಭಗೊಂಡಿವೆ ಎಂಬ ಚರ್ಚೆಗಳು ನಡೆದರೂ ಆ ಚರ್ಚೆ ಇನ್ನೂ ಮುಗಿದಿಲ್ಲ. ಆದರೂ 'ಇಂಗ್ಲಿಷ್ ಗೀತಗಳು' ಪೂರ್ವದಲ್ಲಿ ಪುನರ್‌ಲೇಖಗಳು ನಡೆದಿವೆ. ಅದು ಬೈಬಲ್‌ಗಳನ್ನು ಕನ್ನಡಿಸುವ ಸಂದರ್ಭದಲ್ಲಿ. ಚರ್ಚುಗಳಿಗಾಗಿ, ವಿದ್ಯಾರ್ಥಿಗಳಿಗಾಗಿ ಮತ್ತು ಮಹಿಳೆಯರಿಗಾಗಿ ಬೈಬಲ್‌ಗಳನ್ನು ಭಾಷಾಂತರಿಸುವಾಗ ಬೈಬಲ್‌ನ್ನು ಯಾವ ಮಾದರಿಯಲ್ಲಿ ರೂಪಿಸಬೇಕು ಎಂಬ ಚರ್ಚೆ ನಡೆಯಿತು. (ಇದನ್ನು ಮೊದಲೇ ಗಮನಿಸಲಾಗಿದೆ.) ಬೈಬಲ್‌ಗಳನ್ನು ನೇರವಾಗಿ ಭಾಷಾಂತರಿಸುವುದಕ್ಕಿಂತ ಬೈಬಲ್ ಸ್ತೋತ್ರಗಳು, ಬೈಬಲ್ ಗೀತೆಗಳು, ಬೈಬಲ್ ಉಕ್ತಿಗಳು ಹೀಗೆ ಇತ್ಯಾದಿ ಹೆಸರುಗಳಲ್ಲಿ ಬೈಬಲನ್ನು ಪುನರ್‌ಲೇಖ ಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ.

ಕನ್ನಡದ ಪ್ರಮುಖ ಕವಿಗಳ ಕಾವ್ಯಗಳು ಸಹ ಈ ಅವಧಿಯಲ್ಲಿ 'ಪುನರ್‌ಲೇಖ'ಗೊಂಡಿವೆ. ಶಿಕ್ಷಣದ ಭಾಗವಾಗಿ ಬಂದ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವಾಗ ಪಶ್ಚಿಮದ ಹಾಗೂ ಭಾರತೀಯ ಭಾಷೆಗಳಲ್ಲಿನ ಕೃತಿಗಳನ್ನು ಭಾಷಾಂತರಿಸಿಕೊಂಡಂತೆ, ಪ್ರಾಚೀನ ಕಾವ್ಯಗಳನ್ನು ವಿದ್ಯಾಭ್ಯಾಸಕ್ಕೆ ಪೂರಕವಾಗಿ 'ಪುನರ್‌ಲೇಖಿಸಿ'ಕೊಳ್ಳುವ ಪ್ರಯತ್ನಗಳು ನಡೆದಿವೆ. ಉದಾ: ಚಂದ್ರಹಾಸ ಚರಿತೆಯನ್ನು ಬಸವಪ್ಪಶಾಸ್ತ್ರಿಗಳು 'ದಮಯಂತೀ ಸ್ವಯಂವರ' ಎಂದು ಪುನರ್‌ಲೇಖಿಸಿರುವುದನ್ನು ಕಾಣಬಹುದು. ಹೀಗೆ ಅನೇಕ ಕೃತಿಗಳು ಶೈಕ್ಷಣಿಕ ಉದ್ದೇಶದಿಂದ ಮಕ್ಕಳ ವಯಸ್ಸು ಮತ್ತು ಲಿಂಗಾಧಾರಿತವಾಗಿ ಪುನರ್‌ಲೇಖಗೊಂಡಿವೆ.

ಈ ಅವಧಿಯಲ್ಲಿ ಸಾಹಿತ್ಯೇತರ ಪಠ್ಯಗಳ ಭಾಷಾಂತರ 'ಸಂಗ್ರಹಾನುವಾದ' ಮತ್ತು 'ನೇರ ಭಾಷಾಂತರ' ಮಾದರಿಯನ್ನು ಅನುಸರಿಸಿವೆ. ಸಾಹಿತ್ಯೇತರ ಭಾಷಾಂತರದಲ್ಲಿ ವಿಷಯಗಳು ಮತ್ತು ಮಾಹಿತಿ ಇತ್ಯಾದಿ ಪ್ರಧಾನವಾದ್ದರಿಂದ 'ನೇರ ಭಾಷಾಂತರ' ಮತ್ತು 'ಸಂಗ್ರಹಾನುವಾದ'ಗಳು ಸೂಕ್ತವೆನಿಸಿದವು. ಹೀಗಾಗಿ ವಿಜ್ಞಾನ,

ಕೃಷಿ, ಗಣಿತ ಇತ್ಯಾದಿ ಸಾಹಿತ್ಯೇತರ ಜ್ಞಾನಶಿಸ್ತುಗಳು ಈ ಮಾದರಿಯಲ್ಲಿ ಕನ್ನಡಕ್ಕೆ ಬಂದಿವೆ. ಕನ್ನಡದಲ್ಲಿರದ ಅಥವಾ ಕನ್ನಡದ ಓದಿಗೆ ಅಗತ್ಯವಾದ ವಿಷಯವನ್ನು ರೂಪಿಸಿರುವುದು ಇವರಿಗೆ ಮುಖ್ಯವಾದ್ದರಿಂದ ಈ ಮಾದರಿಯ ಮೂಲಕ ಭಾಷಾಂತರವನ್ನು ಕೈಗೊಂಡಿದ್ದಾರೆ.

ಈ 'ನೇರ ಭಾಷಾಂತರ' ಹಾಗೂ 'ಸಂಗ್ರಹಾನುವಾದ' ಮಾದರಿಗಳನ್ನು ಟೀಕು/ವ್ಯಾಖ್ಯಾನಗಳು ಅನುಸರಿಸಿವೆ. ಪ್ರಾಚೀನ ಕಾವ್ಯಗಳನ್ನು ೧೯ನೇ ಶತಮಾನದ ವಿವಿಧ ಉದ್ದೇಶಗಳಿಗೆ ಅನುಸಾರ ಪುನರ್ ರೂಪಿಸಿಕೊಳ್ಳುವಾಗ ಕಾವ್ಯಕ್ಕೆ ವ್ಯಾಖ್ಯಾನ, ತಾತ್ಪರ್ಯಗಳನ್ನು ಬರೆಯುವ ಪ್ರಯತ್ನ ಮಾಡಿದರೂ ಇಲ್ಲಿ ಕೆಲವು ವ್ಯಾಖ್ಯಾನಕಾರರು 'ಮೂಲ' ಪದ್ಯ/ಸ್ತೋತ್ರಗಳನ್ನು 'ನೇರ ಭಾಷಾಂತರ' ಮಾಡಿಕೊಳ್ಳುವುದರೊಂದಿಗೆ 'ಸಂಗ್ರಹಿಸುವ' ಪ್ರಯತ್ನವನ್ನು ಮಾಡಿದ್ದಾರೆ. ಇವುಗಳನ್ನೆಲ್ಲಾ ಗಮನಿಸಿದಾಗ ಭಾಷಾಂತರದ ಮಾದರಿಗಳು ಭಾಷಾಂತರದ ಉದ್ದೇಶ ಮತ್ತು ಓದುಗರ ಹಿನ್ನೆಲೆಯಲ್ಲಿ ನಿರ್ಧಾರಗೊಂಡಿರುವುದನ್ನು ಕಾಣಬಹುದಾಗಿದೆ.

ಈ ಕಾಲಘಟ್ಟದ ಭಾಷಾಂತರ ಪ್ರಕ್ರಿಯೆಯ ಸ್ವರೂಪವನ್ನು ಒಟ್ಟಾರೆಯಾಗಿ ಹೀಗೆ ಗಮನಿಸಬಹುದಾಗಿದೆ ಈ ಕಾಲಾವಧಿಯ ಭಾಷಾಂತರ ಚಟುವಟಿಕೆ ಸಾಂಪ್ರದಾಯಿಕ ಮಾದರಿಗಳೊಂದಿಗೆ ಭಾಷಾಂತರದ ಎಲ್ಲಾ ಮಾದರಿಗಳನ್ನು ಬಳಸಿಕೊಂಡಿವೆ. ಜೊತೆಗೆ ಭಾಷಾಂತರ ಎಲ್ಲಾ ಸಾಧ್ಯತೆಗಳನ್ನು ಈ ಕಾಲಾವಧಿಯಲ್ಲಿಯೇ ಕಾಣಬಹುದಾಗಿದೆ. ಬಹು ಮಾದರಿಗಳಂತೆ ಬಹು ಉದ್ದೇಶವನ್ನು, ಬಹು ಓದುಗ ಸಮುದಾಯವನ್ನು, ಬಹು ಸಾಧ್ಯತೆಗಳನ್ನು ಈ ಕಾಲಾವಧಿಯ ಭಾಷಾಂತರ ಗುರುತಿಸಿಕೊಂಡಿದೆ.

### ೯.೪ ಭಾಷಾಂತರಗಳ ಓದುಗ ಪರಿಕಲ್ಪನೆ

'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆಯನ್ನು ವಿವಿಧ ಅಧ್ಯಾಯಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಹಲವಾರು ಸಂಗತಿಗಳು ಬೆಳಕಿಗೆ ಬರುತ್ತವೆ. ಈ ಕಾಲಾವಧಿಯ ಭಾಷಾಂತರ ವಿಭಿನ್ನವಾದ ಉದ್ದೇಶಗಳಿಂದ ಕೂಡಿತ್ತು ಜೊತೆಗೆ ವಿವಿಧ ಭಾಷಾಂತರ ಮಾದರಿಗಳನ್ನು ಅನುಸರಿಸಿತ್ತು. ಹಾಗೆಯೇ ಬಹು ಓದುಗ/ ಹಲವು ಓದುಗರನ್ನು ಈ ಕಾಲದ ಭಾಷಾಂತರ ಪ್ರಕ್ರಿಯೆ ಸೃಷ್ಟಿಸಿತ್ತು.

ಯಾವುದೇ ಒಂದು ಕೃತಿಯು ಭಾಷಾಂತರಗೊಳ್ಳುವಾಗ ಅದರ ಓದುಗರಾರು ಎಂಬುದು ಮುಖ್ಯವಾಗುತ್ತದೆ. ಓದುಗ ಸಮುದಾಯವನ್ನು ಅನುಸರಿಸಿ ಭಾಷಾಂತರದ ಮಾದರಿಗಳು ಸಹ ನಿರ್ಧಾರಗೊಳ್ಳುವವು. ಇದನ್ನು ಹೀಗೂ ಹೇಳಬಹುದು. ಯಾಕಾಗಿ ಒಂದು ಕೃತಿಯನ್ನು ಭಾಷಾಂತರಿಸಲಾಗುತ್ತದೆ, ಅದರ ಉದ್ದೇಶವೇನು ಎಂಬುದರೊಂದಿಗೆ ಅದರ ಓದುಗರಾರು ಎಂಬುದು ಸಹ ಗುರುತುಗೊಳ್ಳುತ್ತದೆ. ಹಾಗೆಯೇ ಇದಕ್ಕೆ ಪೂರಕವಾಗಿ ಭಾಷಾಂತರದ ಮಾದರಿಗಳು ಬಳಕೆಯಾಗುತ್ತವೆ. ಭಾಷಾಂತರಕಾರರು ಒಂದು ಪಠ್ಯವನ್ನು ಬೇರೊಂದು ಭಾಷೆಗೆ ಭಾಷಾಂತರಿಸುವಾಗ ಅವರ ಮುಂದೆ ಭಾಷಾಂತರ ಪಠ್ಯವನ್ನು ಓದುವ ಒಂದು ಕಲ್ಪಿತ ಓದುಗ ಸಮುದಾಯವಿರುತ್ತದೆ. ಈ ಸಮುದಾಯಕ್ಕಾಗಿ ಇಲ್ಲಿ ಭಾಷಾಂತರವನ್ನು ನಡೆಸಲಾಗುತ್ತದೆ ಅಥವಾ ಅವರಿಗಾಗಿ ಭಾಷಾಂತರ ರೂಪುಗೊಳ್ಳುತ್ತದೆ.

ಈ ಕೆಳಗಿನಂತೆ 'ಇಂಗ್ಲಿಷ್ ಗೀತಗಳ' ಪೂರ್ವದ ಭಾಷಾಂತರ ಓದುಗರನ್ನು ಗುರುತಿಸಿಕೊಳ್ಳಬಹುದು.

**೧. ಸಾಮಾನ್ಯ ಓದುಗರು:**

ಈ ಕಾಲಘಟ್ಟದ ಬೈಬಲ್ ಭಾಷಾಂತರ ಮತ್ತು ಟೀಕುಗಳು ಹಾಗೂ ಸಾಹಿತ್ಯೇತರ ಕೃತಿಗಳ ಭಾಷಾಂತರ 'ಸಾಮಾನ್ಯ ಓದುಗ' ಎಂಬ ಪರಿಕಲ್ಪನೆಯನ್ನು ಕಾಣಬಹುದು. ಇಲ್ಲಿ ಸಾಮಾನ್ಯ ಓದುಗನೆಂದರೆ, (೧) ಕೇವಲ ಒಂದೇ ಭಾಷೆಯನ್ನು ಬಲ್ಲವರಾಗಿರುತ್ತಾರೆ. ಅವರಿಗೆ ಓದಲು ಆ ಭಾಷೆಯಲ್ಲಿಯೇ ಪಠ್ಯಗಳನ್ನು ಸಿದ್ಧಪಡಿಸಬೇಕಾಗುತ್ತದೆ. ಉದಾ: ಸಂಸ್ಕೃತದಲ್ಲಿನ ಕೃತಿಗಳಿಗೆ ಕನ್ನಡದಲ್ಲಿ ಟೀಕುಗಳನ್ನು ಬರೆದು ಅವುಗಳನ್ನು ಸಾಮಾನ್ಯ ಓದುಗರಿಗೆ ಎಂದು ರೂಪಿಲಾಗಿರುವುದು, (೨) ವಿಷಯ ತಜ್ಞರಲ್ಲದವರು. ಕೃಷಿ ಸಂಬಂಧಿ ಕೃತಿಗಳನ್ನು ಕೃಷಿ ಮಾಡುವ ಸಾಮಾನ್ಯರಿಗೆ ಒದಗಿಸುವುದು ಇಲ್ಲಿ ಸಾಮಾನ್ಯವೆಂಬುದು ಆ ವಿಷಯದ ಜ್ಞಾನದ ಹಿನ್ನೆಲೆಯಲ್ಲಿ ಬಳಕೆಯಾಗಿದೆ.

**೨. ಲಿಂಗಾಧಾರಿತ ಓದುಗರು:**

ಶಾಲಾ ಪಠ್ಯಗಳು ಮತ್ತು ಬೈಬಲ್‌ಗಳು ಈ ಬಗೆಯ ಓದುಗರಿಗಾಗಿ ಪ್ರತ್ಯೇಕವಾಗಿ ಸಿದ್ಧಗೊಂಡಿವೆ. ಬೇರೆ ಭಾಷೆಗಳಿಂದ ಶೈಕ್ಷಣಿಕ ಸಂದರ್ಭದಲ್ಲಿ ಪಠ್ಯಗಳನ್ನು ಭಾಷಾಂತರಿಸಿಕೊಳ್ಳುವಾಗ 'ಹೆಣ್ಣು ಮಕ್ಕಳಿಗೆ' ಮತ್ತು 'ಗಂಡು ಮಕ್ಕಳಿಗೆ' ಪ್ರತ್ಯೇಕವಾದ ಭಾಷಾಂತರಗಳು ಬಂದಿವೆ. ಹಾಗೆಯೆ ಬೈಬಲ್‌ಗಳು ಮಹಿಳೆಯರಿಗಾಗಿಯೇ ಭಾಷಾಂತರ ಗೊಂಡಿರುವುದನ್ನು ಕಾಣಬಹುದು.

**೩. ವಯಸ್ಸಿನಾಧಾರದ ಓದುಗರು:**

ವಯಸ್ಸು ಬುದ್ಧಿಯನ್ನು ಪ್ರತಿನಿಧಿಸುತ್ತದೆ. ಈ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳಿಗಾಗಿ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸಿಕೊಳ್ಳುವಾಗ ಅವರ ವಯಸ್ಸಿನ ಅನುಸಾರ ಬೇರೆ ಬೇರೆ ಸ್ವರೂಪದಲ್ಲಿ ವಿವಿಧ ತರಗತಿಗಳಿಗಾಗಿ ಪಠ್ಯಗಳನ್ನು ರೂಪಿಸಿಕೊಳ್ಳಲಾಗಿದೆ.

**೪. ಧಾರ್ಮಿಕ ಓದುಗರು:**

ಚರ್ಚುಗಳಿಗಾಗಿ ರೂಪುಗೊಂಡ ಬೈಬಲ್‌ಗಳು ಹಾಗೂ ಕೆಲವು ಟೀಕುಗಳು ಧಾರ್ಮಿಕ ಓದುಗರನ್ನು ಸೃಷ್ಟಿಸಿದೆ. ಬೇರೆ ಭಾಷೆಯಿಂದ ಬೈಬಲ್ ಕನ್ನಡಕ್ಕೆ ಬರುವಾಗ ಚರ್ಚುಗಳಿಗಾಗಿ ಪ್ರತ್ಯೇಕವಾಗಿ ಸಿದ್ಧಗೊಂಡಿವೆ. ಹಾಗೆಯೇ ಕೆಲವು ಕೃತಿಗಳಿಗೆ ಬರೆದ ಟೀಕು/ ವ್ಯಾಖ್ಯಾನಗಳು ಧಾರ್ಮಿಕ ಓದುಗರನ್ನು ಗಮನದಲ್ಲಿಟ್ಟುಕೊಂಡು ಬಂದವುಗಳಾಗಿವೆ.

**೫. ಗ್ರಾಮೀಣ ಓದುಗರು:**

ಸಾಹಿತ್ಯೇತರ ಕೃತಿಗಳು ಭಾಷಾಂತರದ ಸಂದರ್ಭದಲ್ಲಿ ಅನೇಕ ಪಠ್ಯಗಳು ಗ್ರಾಮೀಣ ಓದುಗರಿಗಾಗಿಯೇ ಸಿದ್ಧಗೊಳಿಸಲಾಗಿದೆ/ರೂಪಿಸಿಕೊಳ್ಳಲಾಗಿದೆ.

''ನಮ್ಮ ಕನ್ನಡ ಭಾಷೆಯಲ್ಲಿ ಈ ಗ್ರಂಥಗಳು ಹೇರಳವಾಗಿಲ್ಲವಾದ್ದರಿಂದ ಅನ್ಯಭಾಷಾ ಪರಿಚಯಕ್ಕವಕಾಶವಿಲ್ಲದೆ ಗ್ರಾಮಾಂತರಗಳಲ್ಲಿಯೂ ಮತ್ತು ಇತರ ಸ್ಥಳಗಳಲ್ಲಿರುವ ಸಹಸ್ರಾರು ಮಂದಿ ಸೋದರ ಬಾಂಧವರು ಮೇಲ್ಕಂಡ

ಭಾಷೆಗಳಲ್ಲಿನ ಗ್ರಂಥವಿಶೇಷಗಳನ್ನು ಸುಲಭವಾಗಿ ತಿಳಿಯುವಂತೆ (ಗೋವಿಂದ ರಾಜಲು, ೧೯೦೯, ಪೀಠಿಕೆ), ಎನ್ನುವಾಗ ಭಾಷಾಂತರಕಾರರು ಇದರ ಓದುಗರಾರು ಎಂಬುದನ್ನು ಸಹ ಹೇಳಿರುವುದನ್ನು ಕಾಣಬಹುದು. ಕನ್ನಡ ಬಿಟ್ಟು ಬೇರೆ ಭಾಷೆ ಪರಿಚಯವಿರದ 'ಗ್ರಾಮೀಣ ಓದುಗ'ರಿಗಾಗಿ ಈ ಭಾಷಾಂತರ ಪಠ್ಯವನ್ನು ರೂಪಿಸಲಾಗಿದೆ. ಈ 'ಗ್ರಾಮೀಣ ಓದುಗ' ಪರಿಕಲ್ಪನೆಯನ್ನೂ ಇತರ ಭಾಷಾಂತರ ಕೃತಿಗಳ ಸಂದರ್ಭದಲ್ಲಿ ಯಾರು ಪ್ರಸ್ತಾಪಿಸಿಲ್ಲ, ಕೇವಲ ಇವರು ಮಾತ್ರ ಪ್ರಸ್ತಾಪಿಸಿದ್ದಾರೆ. ಸಾಹಿತ್ಯೇತರ ಪಠ್ಯದ ಭಾಷಾಂತರವು ಇಂತಹ ಒಂದು ಓದುಗವರ್ಗವನ್ನು ಕಲ್ಪಿಸಿಕೊಂಡು ಆ ಕುರಿತು ಪ್ರಯತ್ನಿಸಿದ್ದು ಗಮನಿಸಬೇಕಾದ ಸಂಗತಿಯಾಗಿದೆ.

**೬. ಹವ್ಯಾಸಿ ಓದುಗರು:**

ಈ ಕಾಲಘಟ್ಟದ ಸಾಹಿತ್ಯ, ಸಾಹಿತ್ಯೇತರ ಇತ್ಯಾದಿ ಭಾಷಾಂತರ ಚಟುವಟಿಕೆಗಳು ಹವ್ಯಾಸಿ ಓದುಗರನ್ನು ಗಮನದಲ್ಲಿಟ್ಟುಕೊಂಡು ನಡೆದಿವೆ.

**೭.ದ್ವಿ/ಬಹು ಭಾಷಾ ಓದುಗವರ್ಗ:**

ಕನ್ನಡದಲ್ಲಿ ಸಂಪಾದನೆಗೊಂಡ ಕೆಲವು ಕೃತಿಗಳು ಹಾಗೂ ಟೀಕು/ ವ್ಯಾಖ್ಯಾನಗಳು ದ್ವಿಭಾಷಾ ಓದುಗವರ್ಗವನ್ನು ಪರಿಭಾವಿಸಿಕೊಂಡಿತ್ತು. ಟೀಕುಗಳ ಸಂದರ್ಭದಲ್ಲಿ ಓದುಗನಿಗೆ ಸಂಸ್ಕೃತ ಕನ್ನಡ ಬಲ್ಲವರಾಗಿದ್ದರೆ, ಸಂಪಾದನಾ ಕೃತಿಗಳ ಸಂದರ್ಭದಲ್ಲಿ ಕನ್ನಡ, ಇಂಗ್ಲಿಷ್ ಬಲ್ಲ ಓದುಗರು.

**೮. ನಾಟಕ ಭಾಷಾಂತರದ ಓದುಗ/ನೋಡುಗ ಪರಿಕಲ್ಪನೆ:**

ಇಂಗ್ಲಿಷ್‌ನಿಂದ ನಾಟಕಗಳನ್ನು ಕನ್ನಡದ ಸಂದರ್ಭಕ್ಕೆ ಭಾಷಾಂತರಿಸಿಕೊಳ್ಳುವಾಗ ಕೆಲವರು ನಾಟಕವನ್ನು ಓದುಗ ಪಠ್ಯವಾಗಿ ರೂಪಿಸಿದರೆ, ಇನ್ನೂ ಕೆಲವರು ರೂಪಾಂತರ ನಾಟಕಗಳನ್ನು ಕನ್ನಡ ರಂಗಭೂಮಿಗಾಗಿ 'ರಂಗರೂಪಾಂತರ'ಗೊಳಿಸುವ ಪ್ರಯತ್ನ ಮಾಡಿದ್ದಾರೆ. ಹೀಗಾಗಿ ನಾಟಕ ಭಾಷಾಂತರವು ಓದುಗ/ನೋಡುಗ ಪರಿಕಲ್ಪನೆಯಿಂದ ನಡೆದಿವೆ.

ಹೀಗೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರ 'ಬಹು ಓದುಗ'ರನ್ನು ಸೃಷ್ಟಿಸಿದ್ದು ಅವರಿಗಾಗಿ ಭಾಷಾಂತರಗಳು ನಡೆದಿರುವುದನ್ನು ಕಾಣಬಹುದು. ಸಾಹಿತ್ಯ ರಚನೆಕಾರರು ಪರಿಭಾವಿಸಿದ 'ಓದುಗ' ಪರಿಕಲ್ಪನೆಗಿಂತ ಸಾಹಿತ್ಯೇತರ ಪಠ್ಯಗಳ ಭಾಷಾಂತರಕಾರರು ಪರಿಭಾವಿಸಿದ ಓದುಗ ಪರಿಕಲ್ಪನೆ ಭಿನ್ನ ಮತ್ತು ವಿಸ್ತರಿತವಾದುದು. ಯಾಕೆಂದರೆ ಬಹುತೇಕ ಸಾಹಿತ್ಯಿಕ ಪಠ್ಯಗಳು 'ಸಾಮಾನ್ಯ ಓದುಗ'ರನ್ನು ಇಲ್ಲವೆ 'ನಿರ್ದಿಷ್ಟ ಓದುಗರನ್ನು' ಪರಿಭಾವಿಸಿಕೊಂಡರೆ, ಭಾಷಾಂತರದಲ್ಲಿ ಪ್ರತಿಯೊಂದು ಹಂತದಲ್ಲಿ ವಿವಿಧ ಉದ್ದೇಶಗಳಲ್ಲಿ 'ಓದುಗ' ಪರಿಕಲ್ಪನೆ ಭಿನ್ನವಾಗಿರುವಂತೆ ಅವರಿಗಾಗಿ ಪಠ್ಯಗಳು ಭಾಷಾಂತರಗೊಂಡಿವೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ 'ಮೂಲ ಪಠ್ಯ' ಒಂದು ಓದುಗ ಸಮುದಾಯವನ್ನು ಹೊಂದಿದ್ದರೆ, ಭಾಷಾಂತರದ ಸಂದರ್ಭದಲ್ಲಿ ಭಾಷಾಂತರ ಪಠ್ಯ, ಭಾಷಾಂತರದ ಉದ್ದೇಶಕ್ಕನುಸಾರವಾಗಿ 'ಹಲವು ಓದುಗ' ಸಮೂಹಕ್ಕಾಗಿ ಭಾಷಾಂತರಗೊಳ್ಳುತ್ತದೆ. ಈ ಸಾಧ್ಯತೆ ಭಾಷಾಂತರೇತರ ಪಠ್ಯಗಳಿಗೆ ಇಲ್ಲ. ೧೮೫೦ ರಿಂದ ೧೯೨೦ರ ಅವಧಿಯ ಭಾಷಾಂತರ ಪ್ರಕ್ರಿಯೆ

ಹಲವು ಬಗೆಯ ಓದುಗರನ್ನು ಗುರುತಿಸಿಕೊಂಡಿದ್ದು ಅವರನ್ನು ಗಮನದಲ್ಲಿರಿಸಿಕೊಂಡ ಈ ಚಟುವಟಿಕೆ ನಡೆದಿದೆ. ಈ ಓದುಗರನ್ನು ವಯಸ್ಸು, ಲಿಂಗ, ಪ್ರದೇಶ ಮತ್ತು ಇನ್ನಿತರ ಮಾನದಂಡಗಳಿಂದ ವಿಂಗಡಿಸಿಕೊಳ್ಳಲಾಗಿದೆ.

ಒಟ್ಟಾರೆಯಾಗಿ ಈ ಅವಧಿಯಲ್ಲಿ ಮಕ್ಕಳು, ಮಹಿಳೆಯರು, ಸಾಮಾನ್ಯರು, ವಿದ್ಯಾರ್ಥಿಗಳು, ಗ್ರಾಮೀಣ ಜನರು, ವಿದ್ಯಾವಂತರು, ಅವಿದ್ಯಾವಂತರು ದ್ವಿಭಾಷಿಕರು, ಬಹುಭಾಷಿಕರು, ಮತ್ತು ಧಾರ್ಮಿಕರು ಇತ್ಯಾದಿ ಓದುಗ ವರ್ಗದ ಪರಿಕಲ್ಪನೆಯು ಚಾಲ್ತಿಯಲ್ಲಿತ್ತು, ಅಂದರೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರಗಳು 'ಬಹು ಓದುಗವರ್ಗ'ವನ್ನು ಹೊಂದಿತ್ತು ಎಂಬುದು ಕಂಡುಬರುತ್ತದೆ.

೧೮೫೦ ರಿಂದ ೧೯೨೦ರ ಅವಧಿಯಲ್ಲಿ ಭಾಷಾಂತರ ಬಹುಮುಖಿಯಾಗಿರುವುದರ ಜೊತೆಗೆ ಅವಶ್ಯವಾದ ಸಾಹಿತ್ಯ, ಸಾಹಿತ್ಯೇತರ ವಿಷಯ ಮತ್ತು ಶಿಕ್ಷಣ, ರಾಜಕೀಯ, ಜೀವನ ವಿಧಾನಗಳನ್ನು ಭಾಷಾಂತರದ ಹಿನ್ನೆಲೆಯಲ್ಲಿ ರೂಪುಗೊಂಡಿರುವುದು ಕಂಡುಬರುತ್ತದೆ. ಈ ಕಾಲಘಟ್ಟದ ಭಾಷಾಂತರದ ಮಾದರಿಯ ಸ್ವರೂಪವು ವೈವಿಧ್ಯತೆಯಿಂದ ಕೂಡಿದೆ. ಹಾಗೂ ಮಾದರಿಗಳು ಪ್ರಯೋಗಶೀಲವಾದವುಗಳಾಗಿವೆ. ಭಾಷಾಂತರದ ಮಾದರಿ, ಉದ್ದೇಶ ಮತ್ತು ಓದುಗ ವರ್ಗಗಳೆಲ್ಲವೂ ಹೀಗೆ ವೈವಿಧ್ಯತೆಯನ್ನು, ವಿವಿಧತೆ (ಬಹು)ಯನ್ನು ಹೊಂದಿವೆ. ಹೀಗಾಗಿ ಈ ಕಾಲಘಟ್ಟದಲ್ಲಿ ಬಳಸಿದ ಭಾಷಾಂತರದ ಪದಗಳು/ಪರ್ಯಾಯಗಳು ಅನೇಕವಾಗುವಂತಾಯಿತು. ಈ ಬಗೆಯ ಬಹುಉದ್ದೇಶ, ಬಹುಮಾದರಿ, ಬಹು ಓದುಗವರ್ಗ ಭಿನ್ನ/ಪರ್ಯಾಯಗಳ ಬಳಕೆ 'ಇಂಗ್ಲಿಷ್ ಗೀತಗಳು' ಪೂರ್ವದ ಭಾಷಾಂತರದ ವೈವಿಧ್ಯತೆಯಾದಂತೆ ಈ ಕಾಲಘಟ್ಟದ ಭಾಷಾಂತರದ ಸ್ವರೂಪವೂ ಆಗಿದೆ.

ಬಿ.ಎಂ.ಶ್ರೀ ಭಾಷಾಂತರದ ಸಂದರ್ಭದಲ್ಲಿ ಅಧ್ಯಯನಕಾರರು ಭಾಷಾಂತರಕ್ಕೆ ಒಂದು ಚೌಕಟ್ಟನ್ನು ಹಾಕಿಕೊಟ್ಟಿದ್ದರಿಂದ ಆಧುನಿಕ ಸಂದರ್ಭದ ಭಾಷಾಂತರ ಚರ್ಚೆಗಳು ಸೀಮಿತ ವ್ಯಾಪ್ತಿಯಲ್ಲಿಯೇ ನಡೆಯುವಂತಾಯಿತು. ಭಾಷಾಂತರವೆಂದು ಸಾಹಿತ್ಯಿಕ ಭಾಷಾಂತರ, ಭಾಷಾಂತರದ ಮಾದರಿಗಳೆಂದರೆ ನೇರ ಭಾಷಾಂತರ /ರೂಪಾಂತರ, ಭಾಷಾಂತರದ ಉದ್ದೇಶವೆಂದರೆ ಸಾಂಸ್ಕೃತಿಕ ವಿನಿಮಯ ಎಂಬ ಈ ಚೌಕಟ್ಟಿನಿಂದಾಗಿ ಭಾಷಾಂತರದ ವಿಸ್ತಾರವಾದ ವ್ಯಾಪ್ತಿಯೊಂದು ಕೊಂಚಮಟ್ಟಿಗೆ ಕಣ್ಮರೆಯಾಯಿತು. ಆದರೆ ಬಿ.ಎಂ.ಶ್ರೀ ಪೂರ್ವದ ಭಾಷಾಂತರವನ್ನು ಗಮನಿಸುವುದಾದರೆ ಅದರ ವ್ಯಾಪಕತೆ, ವೈವಿಧ್ಯತೆ ಹಾಗೂ ಬಹು ಉಪಯುಕ್ತತೆಗಳು ಸ್ಪಷ್ಟಗೋಚರಿಸುತ್ತವೆ. ಬಿ.ಎಂ.ಶ್ರೀ ಪೂರ್ವದ ಭಾಷಾಂತರ ವ್ಯಾಪ್ತಿ ವಿಶಾಲವಾದುದು ಮತ್ತು ವೈವಿಧ್ಯತೆಯಿಂದ ಕೂಡಿದ್ದು ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದು. ೧೮೫೦ರಿಂದ ೧೯೨೦ರ ಅವಧಿಯಲ್ಲಿ ಈ ಬಗೆಯ ವಿಶಾಲ ಆವರಣವನ್ನು ಭಾಷಾಂತರ ಚಟುವಟಿಕೆ ಹೊಂದಿದೆ. ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತಗಳು' ಪಠ್ಯವು ಒಂದು ಸಾಂಸ್ಕೃತಿಕ ಪಠ್ಯವಾಗಿ ರೂಪುಗೊಳ್ಳುವುದರ ಹಿಂದಕ್ಕೆ ಇಂತಹ ಒಂದು ವೈವಿಧ್ಯಮಯ ಪ್ರಕ್ರಿಯೆ ನಡೆದಿದೆ.

'ಇಂಗ್ಲಿಷ್ ಗೀತಗಳು' ನಂತರದಲ್ಲಿ ಭಾಷಾಂತರದ ಚರ್ಚೆ ಸೀಮಿತ ಚೌಕಟ್ಟಿನಲ್ಲಿ ನಡೆಯುತ್ತಿದ್ದರೂ ಸುಮಾರು ಒಂದು ದಶಕದ ಈಚೇಗೆ ಭಾಷಾಂತರ ಅಧ್ಯಯನವು ಬಹುಮುಖಿಯಾಗುತ್ತಿದ್ದು ಇದರ ಭಾಗವಾಗಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅನುಬಂಧ ೧

### ಇಂಗ್ಲಿಷ್ ಗೀತಗಳು ಪೂರ್ವ (೧೮೫೦ ರಿಂದ ೧೯೨೦)ದಲ್ಲಿ ಭಾಷಾಂತರಗೊಂಡ ಶಾಲಾಪತ್ಯಗಳು

೧. ಅಳ್ವಾರಯ್ಯಂಗಾರ್ ರಾ, ಮೂರನೆ ತರಗತಿಯ ಗಣಿತ -೧೯೦೪

೨. ಅಳ್ವಾರಯ್ಯಂಗಾರ್. ರಾ, ನಾಲ್ಕನೆ ತರಗತಿಯ ಗಣಿತ -೧೯೦೫

೩. ಉಷಾದೇವಿ, ನೀನು ವಿಜ್ಞಾನಿಯಾಗು ಸಚಿತ್ರ (ಇಂಗ್ಲಿಷ್ ಮೂಲ ; ಪಾರ್ಕರ್ ಬೆಥ್ ಮಾರಿಸ್) - ೧೮೫೯

೪. ಕೃಷ್ಣಾಜಿ ಗೋವಿಂದ ಗೆಜ್ಜೆ, ಅಂಕಗಣಿತ - III (ಇಂಗ್ಲಿಷ್ ಮೂಲ ; ?) -೧೯೦೯

೫. ಕೃಷ್ಣಾಜಿ ಗೋವಿಂದ ಗೆಜ್ಜೆ, ಅಂಕಗಣಿತ - IV (ಇಂಗ್ಲಿಷ್ ಮೂಲ ; ?) -೧೯೧೫

೬. ಕೃಷ್ಣಾಜಿ ಅನಂತ, ಗಣಿತ ಸಂಗ್ರಹ -೧೮೮೧

೭. ಕೃಷ್ಣಸ್ವಾಮಿ ಅಯ್ಯಂಗಾರ್ ಎಸ್.ಜಿ, ಚಿಕ್ಕ ಹುಡುಗರು ಓದತಕ್ಕ ಇಂಗ್ಲೆಂಡ್ ದೇಶದ ಚರಿತ್ರೆ, (ಮೂಲ; ?) - ೧೮೬೬

೮. ಕುಲಕರ್ಣಿ ರಾ. ಶ್ರೀ, ಕನ್ನಡ ಶಿಸುಬೋಧನೆ ವರ್ಣಮಾಲೆ-೧೮೯೬

೯. ಖಂಡೋ ನಿಂಗಪ್ಪ, ಗಣಿತ ಸಾರ ಸಂಗ್ರಹ -೧೮೯೭

೧೦. ಗ್ಯಾರೆಟ್, ಚಿಕ್ಕವರಿಗೆ ತಕ್ಕಂಥ ಪಾಠಗಳು -೧೮೫೦

೧೧. ಗುರುರಾವ್ ರಾಘವೇಂದ್ರ, ಚಿಕ್ಕಹುಡುಗರಿಗೋಸ್ಕರ ಕೋಷ್ಟಕಗಳು -೧೮೮೯

೧೨. ಗೋಪಾಲ ಶ್ರೀನಿವಾಸ ಟೋಣಪ, ಯೂಕ್ಲೀಡ್‌ನ ಸಿದ್ಧಾಂತಗಳ ಮೊದಲನೇ ಪುಸ್ತಕವು, (ಇಂಗ್ಲಿಷ್ ಮೂಲ: ಯೂಕ್ಲೀಡ್) -೧೮೭೨

೧೩. ಚನ್ನಬಸಪ್ಪ ಬಸವಲಿಂಗಪ್ಪ ಧಾರವಾಡಕರ್, ಅಂಕಗಣಿತ, (ಇಂಗ್ಲಿಷ್ ಮೂಲ; ?) -೧೮೭೩

೧೪. ಜಗ್ಲರ್ ಗಣಿತಾಭ್ಯಾಸದ ಉದಾಹರಣೆಗಳು -೧೮೭೭

೧೫. ನಾಗಭೂಷಣರಾವ್ ಸಿ.ಎಸ್, ವಿಜ್ಞಾನ ವಿಕಾಸ -೧೯೦೮

೧೬. ಬಸವಲಿಂಗಪ್ಪ ಧಾರವಾಡಕರ, ಅಂಕಗಣಿತವು, (ಇಂಗ್ಲಿಷ್ ಮೂಲ: ಕೊಲೆನ್ಸೋ) -೧೮೭೩

೧೭. ಬೆಂಜಮಿನ್ ರಾಯ್ಸ್, ಚಿಕ್ಕವರಿಗೆ ತಕ್ಕಂಥ ಪಾಠಗಳು -೧೮೫೨

೧೮. ಬೆಂಜಮಿನ್ ರಾಯ್ಸ್, ಚಿಕ್ಕವರಿಗೆ ಮೊದಲಾಗಿ ಮಾಡತಕ್ಕ ವೇದ ಬೋಧನೆಯು -೧೮೫೦

೧೯. ರಾಮರಾವ್ ಬಿ, ರೇಖಾಗಣಿತ -೧೮೯೦

೨೦. ರಾಮಚಂದ್ರ ಹಣಮಂತರಾವ್ ದೇಶಪಾಂಡೆ, ಬೀಜಗಣಿತದ ಮೂಲತತ್ವಗಳು, (ಮರಾಠಿ ಮೂಲ; ದಲಾಲಿ, ಜೆಮ್‌ಸಿಡ್ಸ್ ಅರ್ಥೇಸರ) - ೧೮೯೭

೨೧. ರಾಮಚಂದ್ರ ಹಣಮಂತರಾವ್ ದೇಶಪಾಂಡೆ, ಬಾಯಿಲೆಕ್ಕದ ಮೊದಲ ಪುಸ್ತಕ, (ಮರಾಠಿ ಮೂಲ; ದೇವಕುಳೆ ರಾಮೋಜಿ ಮೋರೇಶ್ವರ) - ೧೮೯೬

೨೨. ರಾಣೊ ದೇವಜಿ, ಅಂಕಗಣಿತ ಮೊದಲನೆ ಪುಸ್ತಕವು - ೧೮೯೫

೨೩. ವೆಂಕಟರಾಮಯ್ಯ ಕೆ, ಅಂಕಗಣಿತ ಬಾಲ ಶಿಕ್ಷೆ - ೧೮೯೩

೨೪. ಶ್ರೀನಿವಾಸ ರಾಘವೇಂದ್ರ, ಕೋಷ್ಟಕಗಳು ಬಾಲಕರಿಗಾಗಿ - ೧೮೭೨

೨೫. ಸದಾಶಿವ ಶಿವರಾಮ, ಯುಕ್ಲೀಡ್ ಎಂಬವರ ರೇಖಾಗಣಿತದ ಮೊದಲನೇ ಎರಡನೇ ಪುಸ್ತಕಗಳ ಪ್ರಶ್ನೆಗಳ ಪ್ರಥಕ್ಕರಣ (ಇಂಗ್ಲಿಷ್ ಮೂಲದಿಂದ) - ೧೮೭೨

೨೬. ಸದಾಶಿವ ಶಿವರಾಮ, ರೇಖಾಗಣಿತದ ಮೊದಲನೇ ಎರಡನೇ ಪುಸ್ತಕಗಳ ಪ್ರಥಕ್ಕರಣವು, (ಇಂಗ್ಲಿಷ್ ಮೂಲ; ಯೂಕ್ಲೀಡ್) - ೧೮೭೨

೨೭. ಸುಬ್ಬರಾವ್ ಯಾತಗಿರಿ, ಯೂಕ್ಲೀಡ್‌ನ ಸಿದ್ಧಾಂತದ ಎರಡನೇ ಪುಸ್ತಕ, (ಇಂಗ್ಲಿಷ್ ಮೂಲ; ಟಾಡ್ ಹಂಟರ್) - ೧೮೮೩

೨೮. ಸಂಗಪ್ಪ ಮಲ್ಲಪ್ಪ ಅಂಕಲೆ, ಪದಾರ್ಥ ವಿಜ್ಞಾನ ಶಾಸ್ತ್ರದ ಮೂಲತತ್ವಗಳು, (ಇಂಗ್ಲಿಷ್ ಮೂಲ; ಥಿಒಡರ್) - ೧೮೯೦

೨೯. ಕನ್ನಡ ಟ್ರಾನ್ಸ್‌ಲೇಟರ್, ಯೂಕ್ಲೀಡ್‌ನ ಸಿದ್ಧಾಂತಗಳು, (ಇಂಗ್ಲಿಷ್ ಮೂಲ; ಯೂಕ್ಲೀಡ್) - ೧೮೮೭

೩೦. ಕನ್ನಡ ಟ್ರಾನ್ಸಲೇಟರ್, ಕ್ಷೇತ್ರಫಲ - ಘನಫಲ, (ಇಂಗ್ಲಿಷ್ ಮೂಲ; ಥಾಮಸ್) - ೧೮೯೬

೩೧. ? ಗಣಿತ ಬೋಧಿನಿ, (ಇಂಗ್ಲಿಷ್ ಮೂಲ; ಪೆಂಡಲ್ಸ ಚಾರೆಲ್ಸ್) - ೧೮೯೯

**(ಸಂಪಾದನೆಗೊಂಡ ಪಠ್ಯಗಳು)**

೩೨. **ಬಾಲಕ ಗೀತಗಳು** - ೧೮೭೯

೩೩. **ಬಾಲಕರ ಕನ್ನಡ ಪಾಠಗಳ ಮೊದಲನೆಯ ಪುಸ್ತಕವು** - ೧೮೬೬

೩೪. ಬಾಲಕರ ಕನ್ನಡ ಪಾಠಗಳ ಎರಡನೇಯ ಪುಸ್ತಕವು - ೧೮೬೭

೩೫. ಬಾಲಕರ ಹಿಂದೂ ದೇಶದ ಸಂಕ್ಷಿಪ್ತ ಚರಿತ್ರೆಯು - ೧೮೭೬

೩೬. ಬಾಲಕರು ಮೊದಲು ಓದುವಂತಾ ಜ್ಞಾನೋಪದೇಶವು - ೧೮೫೬

೩೭. ಬಾಲಕರು ಓದತಕ್ಕ ಪಾಠಗಳು - ೧೮೬೮

೩೮. ಬಾಲವ್ಯಾಕರಣ - ೧೮೬೭

೩೯. ಬಾಲಗೀತ ಮುಕ್ತಕಲಾಪ (ವಿವಿಧ ಲೇಕಕರಿಂದ) - ೧೮೯೭

೪೦. ಬಾಲಕರು ಓದುವ ಪಾಠಗಳು - ೧೮೬೩

೪೧. ಪ್ರಾಕ್ಕಾವ್ಯ ಮಾಲಿಕೆ (ಸಂ.ವರ್ಧರ) -೧೮೬೫

೪೨. ಸಂಣ ಕರ್ಣಾಟಕ ಕಾವ್ಯಮಾಲೆ -೧೮೬೫

೪೩. ಕಥಾಮಂಜರಿ -?

೪೪. ರಾವಣ ದಿಗ್ವಿಜಯ -?

೪೫. ಚನ್ನಬಸವ ಪುರಾಣದ ಕೆಲವು ಭಾಗಗಳು -?

೪೬. ಕಲಾವತಿ ಪರಿಣಾಯ -?

೪೭. ದಮಯಂತೀ ಸ್ವಯಂವರ -?

೪೮. ಅದ್ಭುತ ರಾಮಾಯಣದ ಕೆಲವು ಭಾಗಗಳು -?



## ಅನುಬಂಧ ೨

## ೧೮೫೦ ರಿಂದ ೧೯೨೦ರಲ್ಲಿ ಸಂಪಾದನೆಗೊಂಡ ಕೃತಿಗಳು


೧. ಗ್ಯಾರೆಟ್ ಜೆ, ದುರ್ಗಸಿಂಹನ ಪಂಚತಂತ್ರ ೧೮೬೪

೨. ಗ್ಯಾರೆಟ್ ಜೆ, ಶಬ್ದಮಣಿದರ್ಪಣಂ ೧೯೬೮

೩. ನರಸಿಂಹಾಚಾರ್ ಆರ್ (ಸಂ), ಭಟ್ಟಾಕಳಂಕನ ಕರ್ಣಾಟಕ ಶಬ್ದಾನುಶಾಸನ ಸೆಂಟ್ರಲ್ ಪ್ರೆಸ್ ಮೈಸೂರು, ೧೮೯೦

೪. ನರಸಿಂಹಾಚಾರ್ ಎಸ್.ಜಿ. (ಸಂ), ಅಗ್ಗಳದೇವನ ಚಂದ್ರಪ್ರಭಾ ಪುರಾಣಂ ಮೈಸೂರು, ೧೯೦೩

೫. ನರಸಿಂಹಾಚಾರ್ ಎಸ್.ಜಿ. (ಸಂ), ತಿರುಮಲಾರ್ಯನ ಚಿಕ್ಕದೇವರಾಜ ವಿಜಯಂ ಕರ್ನಾಟಕ ಕಾವ್ಯಮಂಜರಿ, ಮೈಸೂರು, ೧೮೯೩

೬. ನರಸಿಂಹಾಚಾರ್ ಎಸ್.ಜಿ. (ಸಂ), ರುದ್ರಭಟ್ಟನ ಜಗನ್ನಾಥ ವಿಜಯಂ ಓರಿಯೆಂಟಲ್ ಲೈಬ್ರರಿ, ಮೈಸೂರು, ೧೯೦೪

೭. ನರಸಿಂಹಾಚಾರ್ ಎಸ್.ಜಿ ಮತ್ತು ರಾಮಾನುಜಯ್ಯಂಗಾರ್ (ಸಂ), ಆಂಡಯ್ಯನ ಕಬ್ಬಿಗರ ಕಾವಂ ಕರ್ನಾಟಕ ಕಾವ್ಯಮಂಜರಿ, ಮೈಸೂರು, ೧೮೯೩

೮. ನರಸಿಂಹಾಚಾರ್ ಎಸ್.ಜಿ ಮತ್ತು ರಾಮಾನುಜಯ್ಯಂಗಾರ್ (ಸಂ), ದುರ್ಗಸಿಂಹನ ಪಂಚತಂತ್ರಂ ೧೮೯೮

೯. ನರಸಿಂಹಾಚಾರ್ ಎಸ್.ಜಿ ಮತ್ತು ರಾಮಾನುಜಯ್ಯಂಗಾರ್ (ಸಂ), ನಾಗಚಂದ್ರನ ಮಲ್ಲಿನಾಥ ಪುರಾಣಂ ಕರ್ನಾಟಕ ಕಾವ್ಯಮಂಜರಿ, ಮೈಸೂರು, ೧೮೯೫

೧೦. ನರಸಿಂಹಾಚಾರ್ ಮತ್ತು ಗೋವಿಂದರಾಜು ಶ್ರೀರಂಗಪಟ್ಟಣ (ಸಂ), ಪಂಪನ ಆದಿಪುರಾಣ ಓರಿಯೆಂಟಲ್ ಲೈಬ್ರರಿ ಮೈಸೂರು, ೧೯೦೦

೧೧. ರಾಮಾನುಜಯ್ಯಂಗಾರ್ ಮಂ. ಅ (ಸಂ), ಶಾಂತೀಶ್ವರ ಪುರಾಣಂ ೧೯೧೫ (೧೯೧೨)

೧೨. ರಾಮಾನುಜಯ್ಯಂಗಾರ್ ಮಂ.ಅ (ಸಂ), ನೇಮಿಚಂದ್ರನ ಲೀಲಾವತೀ ಪ್ರಬಂಧಂ ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೮

೧೩. ಮಲ್ಲಪ್ಪ ಬ. (ಸಂ), ನಾಗವರ್ಮನ ಕರ್ಣಾಟಕ ಕಾದಂಬರಿ ಗೌರ್ನಮೆಂಟ್ ಪ್ರೆಸ್, ಮೈಸೂರು, ೧೮೯೨

೧೪. ಲೂಯಿಸ್ ರೈಸ್ (ಸಂ), ನಾಗವರ್ಮನ ಕರ್ಣಾಟಕ ಭಾಷಾಭೂಷಣಂ ಗೌರ್ನಮೆಂಟ್ ಪ್ರೆಸ್, ಮೈಸೂರು, ೧೮೮೪

೧೫. ಲೂಯಿಸ್ ರೈಸ್ (ಸಂ), ನಾಗಚಂದ್ರನ ಪಂಪರಾಮಾಯಣಂ ಮೈಸೂರು, ೧೮೭೪

೧೬. ಫರ್ಡಿನಾಂಡ್ ಕಿಟೆಲ್ (ಸಂ), ನಾಗವರ್ಮನ ಛಂದೋಂಬುಧಿ ೧೯೭೪

೧೭. ಫರ್ಡಿನಾಂಡ್ ಕಿಟೆಲ್ (ಸಂ), ಕೇಶಿರಾಜನ ಶಬ್ದಮಣಿ ದರ್ಪಣಂ ೧೮೮೨

೧೮. ಲೂಯಿಸ್ ರೈಸ್ (ಸಂ), ಪಂಪಭಾರತ ಗೌರ್ನಮೆಂಟ್ ಪ್ರೆಸ್, ಮೈಸೂರು, ೧೮೯೮

| | | | |
|---|---|---|---|
| ೧೯. | ? | ಜೈಮಿನಿ ಭಾರತ, | ೧೮೮೮ |
| ೨೦. | ? | ತೊರವೆ ರಾಮಾಯಣ, | - ? |
| ೨೧. | ? | ದಾಸರ ಪದಗಳು, | ೧೮೫೦ |
| ೨೨. | ? | ಕುಮಾರವ್ಯಾಸ ಭಾರತ, | ೧೯೫೧ |
| ೨೩. | ? | ಕನಕದಾಸರ ಹರಿಭಕ್ತಿ ಸಾರ, | - ? |
| ೨೪. | ? | ಭೀಮಕವಿಯ ಬಸವಪುರಾಣ, | ೧೮೫೦ |
| ೨೫. | ಕರ್ನಾಟಕ ಕಾವ್ಯಮಾಲೆ, ಬಾಸೆಲ್ ಮಿಶನ್ | | ೧೮೬೪ |
| ೨೬. | ಒಬ್ಲಿಯಾಥೆಕಾ ಕರ್ನಾಟಕ, | | - ? |



## ಅನುಬಂಧ ೩

## ೧೮೫೦ ರಿಂದ ೧೯೭೦ರಲ್ಲಿ ಪ್ರಕಟಗೊಂಡ ಟೀಕುಗಳು

**ಸೂಚನೆ**

೧. ಸಾಹಿತ್ಯ ಚರಿತ್ರೆಯಲ್ಲಿ ಧಾರ್ಮಿಕ ಹಿನ್ನೆಲೆಯಲ್ಲಿ ಕೃತಿಗಳನ್ನು ವಿಂಗಡಿಸಿಕೊಂಡಿರುವುದನ್ನು ಗಮನದಲ್ಲಿರಿಸಿಕೊಂಡು ಈ ಟೀಕುಗಳ ಕೃತಿಗಳನ್ನು ವಿಂಗಡಿಸಿಕೊಳ್ಳಲಾಗಿದೆ.

೨. ಈ ಪಟ್ಟಿಯಲ್ಲಿ ಕೊಟ್ಟಿರುವ ಎಲ್ಲಾ ಕೃತಿಗಳು ಓದಿಗೆ ಲಭ್ಯವಿರದ ಕಾರಣ ಧಾರ್ಮಿಕ ವಿಂಗಡಣೆಯಲ್ಲಿ ಕೆಲವೊಂದು ಕೃತಿಗಳನ್ನು ಯಾವ ಗುಂಪಿಗೆ ಸೇರಿಸಬೇಕು ಎಂಬುವ ಕುರಿತು ಗೊಂದಲವಿದೆ. ಆದ್ದರಿಂದ ಈ ಪಟ್ಟಿ ಪ್ರಶ್ನಾರ್ಹವಾಗಿದೆ.

*** ಧಾರ್ಮಿಕ ಕೃತಿಗಳು**

**೧. ಜೈನ ಧರ್ಮದ ಕೃತಿಗಳಿಗೆ ಬಂದಿರುವ ಟೀಕುಗಳು**

| | | | |
|---|---|---|---|
| ೦೧. | ಅಕಳಂಕನ ಸ್ವರೂಪಸಂಬೋಧನೆಗೆ ಟೀಕು ಬ್ರಹ್ಮಸೂರಿ ಪಂಡಿತ | | - ೧೯೧೪ |
| ೦೨. | ಅಕಳಂಕನ ಅಕಲಾಂಕಾಷ್ಟಕ ಮತ್ತು ವ್ರತ ಫಲ ವರ್ಣನೆ ಟೀಕು, ಬಿ.ಪದ್ಮರಾಜ ಪಂಡಿತ | | - ೧೮೯೩ |
| ೦೩. | ಅಸಗನ ವರ್ಧಮಾನ ಪುರಾಣ ವ್ಯಾಖ್ಯಾನ, ವಿಜೀರಾಜಪ್ಪ | | - ? |
| ೦೪. | ಕುಂದ ಕುಂದನ ಕ್ರಿಯಾರೂಪ ಟೀಕು, | ? | - ? |
| ೦೫. | ಕುಂದ ಕುಂದನ ಕಾಯಕಾಂಡ ಟೀಕು, | ? | - ? |
| ೦೬. | ಕುಂದ ಕುಂದನ ಸಹಜಾತ್ಮಿ ಪ್ರಕಾಶ ಟೀಕು, | ? | - ? |
| ೦೭. | ಕುಂದ ಕುಂದನ ಪಂಚಾಸ್ತಿಕಾಯ ಟೀಕು, ಪದ್ಮಪ್ರಭು | | - ? |

೦೮. ಕುಂದ ಕುಂದನ ಮೂಲಾಚಾರ ಟೀಕು, ? - ?

೦೯. ಗುಣಬದ್ರರ ಆತ್ಮಾನುಭವ ಟೀಕು, ಮಾಘನಾಂದ - ?

೧೦. ಚಂದ್ರಸಾಗರನ ಧರ್ಮಪರೀಕ್ಷೆ ವ್ಯಾಖ್ಯಾನ, ಸುಬ್ರಹ್ಮಣ್ಯಶಾಸ್ತ್ರಿ - ೧೮೬೦

೧೧. ದೇವಸೇನನ ಆರಾಹಣಸಾರ ಟೀಕು, ಕೇಶವವರ್ಣಿ - ?

೧೨. ನೇಮಿಚಂದ್ರನ ಕಮ್ಮಪಯಡಿ ಟೀಕು, ಪ್ರಭಾಚಂದ್ರ - ?

೧೩. ನೇಮಿಚಂದ್ರನ ವಿಸಪಾರೂವಣ ಟೀಕು, ಪದ್ಮಪ್ರಭು - ?

೧೪. ಪ್ರಭಾಚಂದ್ರನ ವೃತಸ್ವರೂಪ ಟೀಕು, ? - ?

೧೫. ಮಾಘನಂದಕೃತ ಶಾಸ್ತ್ರಸಾರ ಸಮುಚ್ಚಯ ಟೀಕು, ಎಲಕ ಚಂದ್ರಸಾಗರ ಸ್ವಾಮಿ - ೧೯೧೬

೧೬. ಯೋಗೀಂದ್ರ ಕೃತ ಅಮೃತ ಶೀತ ಟೀಕು, ಬಾಲಚಂದ್ರ - ?

೧೭ ಯೋಗಿಂದ್ರನ ಜೋಗಿಪಾರ ಟೀಕು, ಪದ್ಮನಂದಿ - ?

೧೮. ವಿಕಳಂಕನ ಸ್ವರೂಪಸಂಬೋಧನಾ ಪಂಚವಿಶಂತಿ ಟೀಕು, ಕೇಶವಯ್ಯ - ?

೧೯. ವಿಕಳಂಕನ ಸ್ವರೂಪಸಂಬೋಧನಾ ಪಂಚವಿಶಂತಿ ಟೀಕು, ಪದ್ಮರಸ - ?

೨೦. ವಿಕಳಂಕನ ಸ್ವರೂಪಸಂಬೋಧನಾ ಪಂಚವಿಶಂತಿ ಟೀಕು, ಪದ್ಮಸೇನ - ?

೨೧. ವಿಕಳಂಕನ ಸ್ವರೂಪಸಂಬೋಧನಾ ಪಂಚವಿಶಂತಿ ಟೀಕು, ಮಹಾಸೇನ - ?

೨೨. ವಿಷ್ಣುಶರ್ಮನ ಪಂಚತಂತ್ರ ಸಟೀಕು, ಅ. ವೆಂಕಟಸುಬ್ಬಯ್ಯ - ೧೮೯೩

೨೩. ವಿಶ್ವನಾಥಾಚಾರ್ಯನ ದಶಗ್ರಂಥಿ ಟೀಕು, ವೀರಾಣಾರಾಧ್ಯ - ೧೮೯೮

೨೪. ಶ್ರುತ ಮುನಿಯ ಅಪಾರ ಸಂತತಿ ಟೀಕು, ? - ?

೨೫. ಶ್ರುತ ಮುನಿಯ ಅಪಾರ ಸಂತತಿ ಟೀಕು, ಬಾಲಚಂದ್ರ - ?

೨೬. ಶುಭಚಂದ್ರಾಚಾರ್ಯ, ಜ್ಞಾನಾರ್ಣವ ಟೀಕು, ದೊಡ್ಡಬೆಲೆ ಅನಂತ ತೀರ್ಥಾಚಾರ್ಯ - ೧೯೧೧

೨೭. ? ಅಕಲಂಕಾಷ್ಟಕ ಟೀಕು, ಪದ್ಮರಾಜ ಪಂಡಿತ - ೧೮೯೨

೨೮. ? ಅಕಳಂಕ ಸ್ತೋತ್ರ ಟೀಕು, ? - ?

೨೯. ? ಅಷ್ಟಪದಿ ಟೀಕು (ಸರ್ಗ- ೧೨), ಅಪ್ರಮೇಯ ಶಾಸ್ತ್ರಿ - ?

೩೦. ? ಉಪಾಸಕ ಸಂಸ್ಕಾರ ಟೀಕು, ಪದ್ಮನಂದಿ - ?

೩೧. ? ಸಾನಂದ ಗಣೇಶ್ವರನ ಕಥೆ' ಟೀಕು, ವಿ.ಬಿ. ಸುಬ್ಬಯ್ಯ - ?

೩೨. ? ಜ್ಞಾನ ಚಂದ್ರಾರ್ಣ ನೋಂಪಿ ಟೀಕು, ? - ?

೩೩. ? **ಪಂಚೀಕರಣ ಹಾಡು'** ಟೀಕು, ವರ್ತನ ಸೋಮಯ್ಯ - ?

೩೪. ? **ಪದ್ಮಸಾರದ** ಟೀಕು, ಪದ್ಮಪಂಡಿತ - ?

೩೫. ? **ವಿಚಾರ ದೀಪಿಕಾ** ಟೀಕು, ಶಿವಾನಂದ ಸುಬ್ರಹ್ಮಣ್ಯ - ೧೯೦೨

(ಹಿಂದಿಯಲ್ಲಿರುವ ಮೂಲ ಟೀಕಿನ ಅನುವಾದದೊಂದಿಗೆ)

೩೬. ? **ಮೂಹೂರ್ತ ದೀಪಿಕಾ** ಮತ್ತು **ಮೂಹೂರ್ತ ದರ್ಪಣ** ಟೀಕು,

ಬಾ. ತಿರುಮಲಾಚಾರ್ಯ - ೧೮೭೦

೩೭. ? **ಗೀತರ್ಪಿತರಾಗಬೇಕು** ಟೀಕು, ಚಾರುಕೀರ್ತಿಪಂಡಿತ - ೧೮೬೦

**೨. ವೀರಶೈವ ಧಾರ್ಮಿಕ ಕೃತಿಗಳಿಗೆ ಬಂದಿರುವ ಟೀಕುಗಳು**

೦೧. ಗುಬ್ಬಿ ಮಲ್ಲಣಾರಾಧ್ಯ ಗಣಭಾಷರತ್ನಮಾಲೆ ಸಟೀಕು, ಶಿವಪ್ಪ ಶಾಸ್ತ್ರಿ - ೧೯೦೯

೦೨. ಚನ್ನಬಸವಯೋಗಿ, ಶಿವಯೋಗ ಪ್ರದೀಪಿಕೆಯು ಟೀಕು, ಬಸವರಾಧ್ಯ - ೧೯೧೩

೦೩. ಚಾವುಂಡರಾಯನ ಲೋಕೋಪಕಾರ ಟೀಕು, ಸುಬ್ರಹ್ಮಣ್ಯಶಾಸ್ತ್ರಿ ಎ. - ೧೮೯೦

೦೪. ಉಜ್ಜನೀಶ, ಅನುಭವಾಮೃತ ಸೂತ್ರ ಟೀಕು, ? - ?

೦೫. ನಿಜಗುಣಶಿವಯೋಗಿ, ಕೈವಲ್ಯ ಪದ್ಧತಿ ಟೀಕು, ಗಂಗಾಧರ ಮಡಿವಾಳೇಶ್ವರ ಚುರಮುರಿ - ೧೮೭೩

೦೬. ನಿಜಗುಣ ಶಿವಯೋಗಿಯ ಅನುಭವಸಾರ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೮೨೩

೦೭. ನಿಜಗುಣಶಿವಯೋಗಿ ಕೈವಲ್ಯ ಪದ್ಧತಿ ಟೀಕು, ಹೊಳೆಕಲ್ಲು ನರಸಿಂಹಯ್ಯ - ೧೮೭೩

೦೮. ನಿಜಗುಣಶಿವಯೋಗಿ ಕೈವಲ್ಯ ಪದ್ಧತಿ ಟೀಕು, ಶ್ರೀನಿವಾಸೌಖ್ಯಮ ನೀಡಿ - ೧೮೭೪

೦೯. ನಿಜಗುಣಶಿವಯೋಗಿ ಪರಮಾನುಭವ ಬೋಧೆ ಟೀಕು, ದೊಡ್ಡಬೆಲೆ ನಾರಾಯಣ ಶಾಸ್ತ್ರಿ - ೧೮೯೨

೧೦. ನಿಜಗುಣಶಿವಯೋಗಿ ಕೈವಲ್ಯ ಪದ್ಧತಿ ಟೀಕು,? - ?

೧೧. ನಿಜಗುಣಶಿವಯೋಗಿ ಕೈವಲ್ಯ ಪದ್ಧತಿ ಟೀಕು,? - ?

೧೨. ಪಾಲ್ಕುರಿಕೆ ಸೋಮನಾಥ ಶ್ರೀ ಸೋಮನಾಥ ಶತಕಂ ಟೀಕು, ? ೧೮೯೩

೧೩. ಪಾಲ್ಕುರಿಕೆ ಸೋಮನಾಥ, ಸೋಮೇಶ್ವರ ಶತಕ ಟೀಕು, ? -?

೧೪. ಪಾಲ್ಕುರಿಕೆ ಸೋಮರಾಧ್ಯರ ಮಲ್ಲಿಕಾರ್ಜುನ ಪಂಡಿತರಾಧ್ಯ ಚರಿತ್ರೆ ಸಟೀಕು,

ಕರಿಬಸವಶಾಸ್ತ್ರಿ ಎನ್.ಆರ್. - ೧೯೦೮

೧೫. ಬಸವರಾಧ್ಯರ ಶಿವಯೋಗ ಪ್ರದೀಪಿಕಾ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೯೧೩

೧೬. ಮಹಾಲಿಂಗ ಕವಿಕೃತ ಅನುಭವಾಮೃತ ಪುರಾಣ ಟೀಕು, ಮಿರ್ಲೆ ನಂಜುಂಡಯ್ಯ - ೧೯೧೪

೧೭. ಮಹಾಲಿಂಗ ಕವಿಕೃತ ಅನುಭವಾಮೃತ ಸಟೀಕು, ತಿರುಮಲ ಶ್ರೀನಿವಾಸಾಚಾರ್ಯ- ೧೯೦೮

೧೮. ಮುದ್ದ ಸಂಗಮುನಿ ದೇವಾಗಮತ ಪ್ರಕಾಶಿಕೆಯು ಟೀಕು, ಕಾಡಸಿದ್ಧಪ್ಪ ಎಚ್. - ೧೮೯೧

೧೯. ರಾಮಯ್ಯ ಶಿವಭಕ್ತಿಸಾರವೆಂಬ ಶತಕವು, ಟೀಕು, ರಾಮಶಾಸ್ತ್ರಿ ಹೊಸಕೋಟ - ೧೮೭೮

೨೦. ವಾಯುದೇವನ ಶತಕತ್ರಯ ಟೀಕು, ಕರಬಸವಶಾಸ್ತ್ರಿ ಎನ್.ಆರ್ - ೧೯೧೨

೨೧. ವಾಯುದೇವನ ಶತಕತ್ರಯ ಟೀಕು, ಲಕ್ಷ್ಮಣ ಸೂರಿ -?

೨೨. ವೇದಾಂತಾಚಾರ್ಯರ ನಿಜದೀಪಿಕಾ ಶಿರೋ ರತ್ನ ಪ್ರಭವೆಂಬ ಟೀಕು, ದೊಡ್ಡಬೆಲೆ ನರಸಿಂಹ ಶಾಸ್ತ್ರಿ - ೧೮೯೩

೨೩. ವೆಂಕಟಸೋಮಯಾಜಿಯ ಕಾಲಾಮೃತ ಗ್ರಂಥ ಟೀಕು, ಚಾವಲಿರಾಮಶಾಸ್ತ್ರಿ - ೧೯೧೧

೨೪. ಷಡಕ್ಷರಿಯ ರಾಜಶೇಖರ ವಿಳಾಸ ಪ್ರಥಮ ಅಶ್ವಾಸ ಟೀಕು, ? - ೧೮೭೩

೨೫. ಷಡಕ್ಷರಿಯ ರಾಜಶೇಖರ ವಿಳಾಸ ಚತುರ್ಥ ಅಶ್ವಾಸ ಟೀಕು, ? - ೧೮೭೩

೨೬. ಷಡಕ್ಷರಿಯ ರಾಜಶೇಖರ ವಿಳಾಸ ಚಂದ್ರಿಕೆ ಟೀಕು, ದಕ್ಷಿಣಮೂರ್ತಿ ಶಾಸ್ತ್ರಿ - ೧೮೯೦

೨೭. ಷಡಕ್ಷರಿಯ ಭಕ್ತಿ ಧಿಕ್ಕರತ್ನವಳಿ ಟೀಕು, ? - ?

೨೮. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ಶಾಂತ ವೀರರಾಚದೇವ ೧೮೭೨

೨೯. ಷಡಕ್ಷರಿಯ ಸಟೀಕು ರಾಜಶೇಖರ ವಿಳಾಸ, ? ೧೮೯೦

೩೦. ಷಡಕ್ಷರಿಯ ಸಟೀಕು ರಾಜಶೇಖರ ವಿಳಾಸ, ? ೧೯೦೬

೩೧. ಷಡಕ್ಷರಿಯ ಶಬರ ಶಂಕರ ವಿಳಾಸ ಟೀಕು, ಸಿದ್ಧಾಂತಿ ಶಿವಶಂಕರ - ೧೮೮೭

೩೨. ಷಡಕ್ಷರಿಯ ರಾಜಶೇಖರ ವ್ಯಾಖ್ಯಾನ, ಬಸವಯ್ಯ ಅ - ೧೮೪೪

೩೩. ಷಡಕ್ಷರಿಯ ರಾಜಶೇಖರ ವ್ಯಾಖ್ಯಾನ, ದೊಂಡೊನರಸಿಂಹ ಮುಳಬಾಗಿಲು - ೧೮೮೨

೩೪. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ಹೊನ್ನಪ್ಪ ಹೊ - ೧೮೯೦

೩೫. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ಶಾಂತವೀರ ರಾಚಿದೇವ - ೧೮೭೨

೩೬. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ಅಂನದಾನೀ ಬಸವಲಂಗಾಚಾರ್ಯ - ೧೮೭೩

೩೭. ಷಡಕ್ಷರಿಯ ಭಕ್ತಿಧಕ್ಕರತ್ನಾವಳಿ ಟೀಕು, ಗುರುಸಿದ್ಧಸ್ವಾಮಿ - ?

೩೮. ಷಡಕ್ಷರಿಯ ಭಕ್ತಿಧಕ್ಕರತ್ನಾವಳಿ ಟೀಕು, ಕರಿಬಸವಶಾಸ್ತ್ರಿ ಪಿ.ಆರ್ - ?

೩೯. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ದಕ್ಷಿಣಮೂರ್ತಿ ಶಾಸ್ತ್ರಿ - ೧೮೮೦

೪೦. ಷಡಕ್ಷರಿಯ ರಾಜಶೇಖರ ವಿಳಾಸ ಟೀಕು, ಶಾಂತವೀರ ರಾಚಿದೇವ ಕಿತ್ತೂರು - ೧೮೮೦

೪೧. ಶಿವರಾಮಯ್ಯ ಸಟೀಕು ಶಿವಭಕ್ತಿಸಾರ ಟೀಕು,ಲಕ್ಷ್ಮೀನಾರಾಯಣಶಾಸ್ತ್ರಿ - ೧೮೯೮

೪೨. ಶಿವರಾಮಯ್ಯ ಶಿವಭಕ್ತಿಸಾರ ಟೀಕು, ಮೈಸೂರು ಲಕ್ಷ್ಮೀನಾರಾಯಣ ಶಾಸ್ತ್ರಿ - ೧೮೯೮

೪೩. ಶಂಕರಾಧ್ಯ ವಿರಚಿತ ಬಸವೇಶ ವಿಜಯ ಸಟೀಕು, ಕರಿಬವಶಾಸ್ತ್ರಿ ಎನ್.ಆರ್ - ೧೮೯೪

೪೪. ಸಿದ್ಧಾಂತಿ ಸೋಮಯಾಜಿಯ ಮರಿತೋಂಟದಾರ್ಯರ ಸಂಸ್ಕೃತ ವ್ಯಾಖ್ಯಾನ,

ಕರಿಬಸವ ಶಾಸ್ತ್ರಿ ಪಿ.ಆರ್. (ಕನ್ನಡ ವ್ಯಾಖ್ಯಾನ) - ೧೮೮೦

೪೫. ? ಹಟಯೋಗಿ ಪ್ರದೀಪಿಕೆಯ ಟೀಕು, ಶಾಂತಿನಾಥದೇವ - ?

೪೬. ? ನಾಮಲಿಂಗಾನುಶಾಸನ ಒಂದನೇ ಕಾಂಡ ಟೀಕು, ಕೃಷ್ಣರಾವ್ ಎನ್ - ೧೯೦೯

೪೭. ? ನಾಮಲಿಂಗಾನುಶಾಸನ ಎರಡನೇ ಕಾಂಡ ಟೀಕು, ಕೃಷ್ಣರಾವ್ ಎನ್ - ೧೯೧೨

೪೮. ? ಶಂಕರ ವಿಜಯ ಟೀಕು, ? - ೧೮೯೮

೪೯. ? ವೀರಶೈವಾಮೃತ ಪುರಾಣ ಟೀಕು, ವೀರಪ್ಪ ಶಾಸ್ತ್ರಿ ಎಂ.ಎಸ್ - ೧೯೦೬

೫೦. ? ಸನ್ಮತಿ ಶತಕಂ ಟೀಕು, ಚೆನ್ನಪುರಿ ಲೇಖಕ - ೧೮೯೧

೫೧. ? ಪ್ರೌಢದೇವರಾಯನ ಕಾವ್ಯ ಟೀಕು, ? - ೧೮೮೪

೫೨. ? ಪ್ರೌಢದೇವರಾಯನ ಕಾವ್ಯ ಟೀಕು, ಅದೃಶ್ಯಕವಿ - ೧೯೧೪

೫೩. ? ನಳರಾಜೇಂದ್ರ ಚರಿತ್ರೆ ಟೀಕು, ನಂಜುಂಡ ಸ್ವಾಮಿ ಕೆ - ೧೯೧೪

೫೪. ? ಜ್ಞಾನ ಚಿಂತಾರತ್ನ ಟೀಕು, ಸಿದ್ಧಲಿಂಗ ಶಿವಯೋಗಿ - ೧೮೭೯

೫೫. ? ಏಕೋತ್ತರ ಶತಸ್ಥಲ ಟೀಕು, ಮಹಾಲಿಂಗದೇವ -?

೫೬. ? ಕರಣಹಾಸಿಗೆ ವಾಚ್ಯ ಟೀಕು, ಶ್ರೀ ಮದ್ದೇಶಿಕ ಚನ್ನವೀರಾರ್ಯ - ?

೫೭. ? ಏಕತ್ವ ಸಪ್ತತಿ ಟೀಕು, ಕೇಶವವರ್ಣಿ - ?

೫೮. ? ಏಕತ್ವ ಸಪ್ತತಿ ಟೀಕು, ಬಾಲಚಂದ್ರದೇವ - ?

೫೯. ? ಕುಮಾರ ವಿಜಯ ವಿಳಾಸ ಟೀಕು, ? - ?

೬೦. ? ಕೇವಲ ಜ್ಞಾನ ಹೋರಾ ಶಾಸ್ತ್ರ ಟೀಕು, ? - ?

೬೧. ? ಕೈವಲ್ಯ ಕಲ್ಪವಲ್ಲರಿ ಟೀಕು, ದೊರೆನಾರಾಯಣ ಶಾಸ್ತ್ರಿ - ೧೮೯೫

೬೨. ? ಶಿವಸೂತ್ರ ಟೀಕು, ಕಾ.ಗುರುಲಿಂಗದೇವ - ?

೬೩. ? ಶ್ರೀ ರುದ್ರ ಟೀಕು, ಚನ್ನವೀರ - ?

೬೪. ? ಸಟೀಕು ನಿಜಲಿಂಗ ಶತಕವು, ತಿ.ಶ್ರೀವಾಸಾಚಾರ್ಯ - ?

೬೫. ? ಶಿವಭಕ್ತಿಸಾರ ಟೀಕು, ಹೋ.ರಾಮಶಾಸ್ತ್ರಿ - ೧೮೭೮

೬೬. ? ಶಿವ ಮಹಿಮಾ ಶತಕವು ಟೀಕು, ನಂ.ಸಿವಪ್ಪ ಶಾಸ್ತ್ರಿ - ೧೯೦೮

೬೭. ? ಶಿವಯೋಗ ಚಿಂತಾಮಣಿ ಟೀಕು, ಕಂಥೆಯ ಸಿದ್ಧಲಿಂಗ ಶಿವಯೋಗಿ - ?

೬೮. ? ಶಿವದೀಕ್ಷಾ ಟೀಕು, ವೇ.ರಾಮಶಾಸ್ತ್ರಿ - ೧೯೦೩

೬೯. ? ತತ್ವಪ್ರಕಾಶಿಕ ಟೀಕು, ವಿರಕ್ತಪರ್ವತೀಶ - ೧೯೦೮

೭೦. ? ತತ್ವಪ್ರಕಾಶಿಕ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೯೦೮

೭೧. ? ತಾತ್ಪರ್ಯ ಸಂಗ್ರಹ ಟೀಕು, ಮರಿಯಪ್ಪ ಶೆಟ್ಟಿ - ?

೭೨. ? ದಿವಾಕರ ಪದ್ಧತಿ ಪ್ರದೀಪಕಾ ಟೀಕು, ತಿಮ್ಮರಾಯ - ?

೭೩. ? ದೇವಿಕಾಲೋತ್ತರಾಗಮಜ್ಞಾನ ಪಟಲ ಟೀಕು ಕರಿಬಸವಶಾಸ್ತ್ರಿ ಎನ್.ಆರ್ - ೧೯೧೧

೭೪. ? ದೇವಿಕಾಲೋತ್ತರ ವ್ಯಾಖ್ಯಾನ ವಿರಕ್ತ ಪರ್ವತೀಶ - ೧೯೧೧

೭೫. ? ದ್ವಾದಶಾಂಗ ವ್ಯಾಖ್ಯಾನ ಅಭಯ ಚಂದ್ರಸೂರಿ - ?

೭೬. ? ಮಣಿಗುತ್ಪತ್ತಿ ಟೀಕು, ಗುಬ್ಬಿ ಮಲ್ಲಣ್ಣ - ?

೭೭. ? ವೀರಶೈವ ವಿವಾಹ ವಿಧಿ ಟೀಕು, ಕರಿಬಸವಶಾಸ್ತ್ರಿ ಪಿ.ಆರ್ - ?

೭೮. ? ವೀರಶೈವೋತ್ಕರ್ಷ ಸಂಗ್ರಹ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೮೯೪

೭೯. ? ವೃಷಭೇಂದ್ರ ವಿಜಯ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೮೯೪

೮೦. ? ಪರಮಾನುಭವ ಬೋಧೆ ಟೀಕು, ದೊಡ್ಡಬೆಲೆ ನಾರಾಯಣ ಶಾಸ್ತ್ರಿ - ೧೯೧೪

೮೧. ? ಬೆಡಗಿನ ವಚನಗಳಿಗೆ ಟೀಕೆ,? - ?

೮೨. ? ಪೂಜಾವಿಧಿ ಟೀಕು, ನಂಜುಂಡಸ್ವಾಮಿ - ೧೯೧೪

೮೩. ? ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ ಟೀಕು, ಕರಿಬಸವಶಾಸ್ತ್ರಿ ಎನ್.ಆರ್ - ೧೮೯೪

೮೪. ? ಬಸವ ವಿಜಯ ಟೀಕು ಕರಿಬಸವ ಶಾಸ್ತ್ರಿ ಎನ್.ಆರ್ - ೧೯೦೮

೮೫. ? ಸಿದ್ಧಾಂತಿ ಶಿಖಾಮಣಿ ಟೀಕು, ಕರಿಬಸವ ಶಾಸ್ತ್ರಿ ಎನ್.ಆರ್ - ೧೯೦೮

೮೬. ? ವೀರಶೈವ ದೀಕ್ಷಾವಿಧಿ ಟೀಕು, ಕರಿಬಸವ ಶಾಸ್ತ್ರಿ ಎನ್.ಆರ್ - ೧೯೦೮

೮೭. ? ತಾತ್ಪರ್ಯ ದೀಪಿಕಾ ಟೀಕು, ಕರಿಬಸವ ಶಾಸ್ತ್ರಿ ಎನ್.ಆರ್ - ೧೯೦೮

೮೮. ? ಭಾವ ಮಂಜರಿ ವ್ಯಾಖ್ಯಾನ, ಕರಿಬಸವಶಾಸ್ತ್ರಿ ಎನ್.ಆರ್ - ೧೯೦೮

೮೯. ? ಶಂಕರ ವಿಜಯ ಟೀಕು, ದಕ್ಷಿಣಮೂರ್ತಿ ಶಾಸ್ತ್ರಿ - ೧೮೮೦

೯೦. ? ತಾತ್ಪರ್ಯ ಸಂಗ್ರಹ ಟೀಕು, ಮರಿಯಪ್ಪ ಶೆಟ್ಟಿ - ?

೯೧. ? ವೀರಶೈವಾನ್ವಯ ಚಂದ್ರಿಕಾ ಟೀಕು, ವೀರಪ್ಪ ಶಾಸ್ತ್ರಿ - ೧೯೬೦

೯೨. ? ವೀರಶೈವಾಮೃತ ಪುರಾಣ ಟೀಕು, ಶಿವಪ್ಪ ಶಾಸ್ತ್ರಿ - ೧೮೮೦

೯೩. ? ಸ್ವಯಂ ಭೂವಾಗಮ ಮತ್ತು ಸುಪ್ರಭೇದಾಗಮಗಳ ಅಷ್ಟಮ ಪಟಲ ಟೀಕು, ಸಂ. ಶಾ. ಶಿವಪ್ಪ ಶಾಸ್ತ್ರಿ - ೧೯೦೬

೯೪. ? ಲಿಂಗಧಾರಣ ಚಂದ್ರಿಕೆ ಕನ್ನಡ ಟೀಕು, ಶಿವಕುಮಾರ, ಮಿಶ್ರವಾಲು ನಂದಕೇಶ್ವರ ಶಿವಾಚಾರ್ಯ - ೧೯೦೪

೯೫. ? ವೀರಶೈವ ದೀಕ್ಷಾವಿಧಿ ಟೀಕು, ಕರಿಬಸವಶಾಸ್ತ್ರಿ ಎನ್.ಆರ್. - ೧೮೯೭

೯೬. ? ಶಿವಸ್ತವಶಿರೋಮಣಿ ಟೀಕು, ಚಾರುಮೂರ್ತಿ ಬಸವಲಿಂಗ ಸ್ವಾಮಿ - ೧೯೧೧

೯೭. ? ಪುಷ್ಪದಂತನ ಮಹಿಮ್ನೆಯೆಂಬುವ ಸ್ತೋತ್ರವು ಟೀಕು, ಹೊಳೆಕಲ್ಲು ನರಸಿಂಹಯ್ಯ- ೧೮೭೧

೯೮. ? ಪುಷ್ಪದಂತನ ಮಹಿಮ್ನೆಯೆಂಬುವ ಸ್ತೋತ್ರವು ಟೀಕು, ಮೋಚಗನಹಳ್ಳಿ ರಾಮಶೇಷ ಶಾಸ್ತ್ರಿ - ೧೯೧೧

೯೯. ? ಪ್ರಭುಲೀಲಾಖ್ಯದ ಟೀಕು, ? - ?

೧೦೦. ? ಪಂಚಕಲ್ಯಾಣ ಸ್ತೋತ್ರ ಟೀಕು, ? - ?

೩. ವೈದಿಕ ಧರ್ಮದ ಕೃತಿಗಳಿಗೆ ಬಂದಿರುವ ಟೀಕುಗಳು

೧. ಆದಿವೀರ ಮಹೇಶ್ವರ ಮೂಲ ಟೀಕು, ಕರಿಬಸವಯ್ಯ ಕಚಪುರಿಮಠ - ೧೮೯೧

೨. ಗುರುರಾಜ ವಿಕೃತ ಪಂಡಿತಾರಾಧ್ಯ ಚರಿತೆಗೆ ಟೀಕು, ? - ೧೯೦೮

೩. ಕುಮಾರವ್ಯಾಸನ ಗದುಗಿನ ಭಾರತದ ಕೆಲವು ಸಂಧಿಗಳಿಗೆ ಟೀಕು, ಹೊ ಸೀತಾರಾಮಶಾಸ್ತ್ರಿ - ೧೮೮೦

೪. ಚನ್ನವೀರ ಮಹಾಸ್ವಾಮಿ ಪುರುಷ ಸೂಕ್ತ ಟೀಕು, ಹೊಸಮಠದ ಬಸವಲಿಂಗ ಸ್ವಾಮಿ - ೧೯೦೯

೫. ಜಗನ್ನಾಥದಾಸರ ಹರಿಕಥಾಮೃತಸಾರ ಟೀಕು, ಕಮಲಾಪತಿ ವಿಠಲ - ೧೮೮೫

೬. ಜಗನ್ನಾಥದಾಸರ ಹರಿಕಥಾಮೃತಸಾರ ಟೀಕು, ಕುಂಟೋಜಿ ದಾಸರ ಶಿಷ್ಯ - ?

೭. ಜಗನ್ನಾಥದಾಸರ ಹರಿಕಥಾಮೃತಸಾರ ಟೀಕು, ಮೋ. ಶೇಷದಾಸ - ?

೮. ಜಗನ್ನಾಥದಾಸರ ಹರಿಕಥಾಮೃತಸಾರ ಟೀಕು, ಸಂಕರ್ಷ ಒಡೆಯರ - ೧೯೧೧

೯. ಜಗನ್ನಾಥದಾಸರ ಹಿತೋಪದೇಶಿ ಟೀಕು, ? - ?

೧೦. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ದಕ್ಷಿಣಮೂರ್ತಿ ಶಾಸ್ತ್ರಿ - ೧೯೧೩

೧೧. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, (ಸಂಧಿ ೧೧) ಕೃಷ್ಣರಾವ್ ಬಾಳಾಜಿರಾವ್ - ೧೮೯೩

೧೨. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, (ಸಂಧಿ ೧೨) ? - ೧೮೯೯

೧೩. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, (ಪೂರ್ವಾರ್ಧ) ಸಿ. ಸುಬ್ರಹ್ಮಣ್ಯ ಶಾಸ್ತ್ರಿ - ೧೮೭೩

೧೪. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ವೆಂಕಟರಂಗ ಕಟ್ಟಿ - ೧೮೭೫

೧೫. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ವಿ. ದಕ್ಷಣಮೂರ್ತಿ ಶಾಸ್ತ್ರಿ - ೧೮೮೮

೧೬. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ಸಿದ್ಧಲಿಂಗ ಶಾಸ್ತ್ರಿ ಬಿ.ಎಂ. - ೧೮೯೭

೧೭. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ಸುಬ್ರಹ್ಮಣ್ಯ ಶಾಸ್ತ್ರಿ - ೧೮೫೧

೧೮. ಲಕ್ಷ್ಮೀಶನ ಜೈಮಿನಿ ಭಾರತ ಟೀಕು, ? - ?

೧೯. ವರಹಮಿರನ ಬ್ರಹ್ಮಜ್ಞಾತ ರಾಖ್ಯಹೋರಾಶಾಸ್ತ್ರಂ ಟೀಕು, ಕೃಷ್ಣಶಾಸ್ತ್ರಿ ಟಿ.ಎನ್. - ೧೯೧೩

೨೦. ವಿರುಪಾಕ್ಷಾಚಾರ್ಯ, ಸಾರ್ಥಪ್ರಾತಃ ಸಂಧ್ಯಾಯೋಗ ಕಥಕಾರಾಧಿಕರಣ ಟೀಕು, ಪಂಡಿತ ಬಸವಾಚಾರ್ಯ - ೧೯೦೯

೨೧. ವೆಂಕಟಧ್ವರಿಯ, ವಿಶ್ವಗುಣಾದರ್ಶ ಟೀಕು, ಮಧುರ ಸುಬ್ಬಶಾಸ್ತ್ರಿ - ೧೮೮೮

೨೨. ವಿಷ್ಣುವಿನ, ಪ್ರತಿಫಲ ಚಿಂತಾಮಣಿ ಟೀಕು, ಶ್ಯಾಮಶಾಸ್ತ್ರಿ - ೧೮೯೮

೨೩. ಶಂಕರ ಭಾರತಿಯವರ, ಖಚರದರ್ಪಣ ಟೀಕು, ಕೊಳ್ಳೆಗಾಲ ಕೃಷ್ಣಸ್ವಾಮಿ ಅಯ್ಯಂಗಾರ್ - ೧೯೦೫

೨೪. ಶಂಕರಾಚಾರ್ಯರ ಅಷ್ಟಕ ಟೀಕು, ಪಾನಂ ಸುಂದರ ಶಾಸ್ತ್ರಿ - ೧೯೧೫

೨೫. ಶ್ರೀನಿವಾಸ ಮತ್ತು ತಿಮ್ಮಣ್ಣ ಕನ್ನಡ ಭಾರತದಲ್ಲಿ ಉತ್ತರಾಷ್ಟ್ರ ಪರ್ವಗಳು ಟೀಕು, ಸಿದ್ಧಲಿಂಗ ಸುಬ್ರಹ್ಮಣ್ಯ ಶಾಸ್ತ್ರಿ - ೧೮೮೭

೨೬. ? ಮೂಹೂರ್ತ ದೀಪಿಕಾ ಟೀಕು, ಭಾ. ತಿರುಮಲಾಚಾರ್ಯ - ೧೯೧೧

೨೭. ? ಗುರುಬಲಿಪ್ರಬೋಧಿಕೆ ಟೀಕು, ಕೆ. ವೆಂಕಟಶಾಸ್ತ್ರಿ ಮತ್ತು ಇತರರು - ೧೮೮೮

೨೮. ? ಕನ್ನಡ ಟೀಕಾ ಸಹಿತ ಸಮಂತೋಪಖ್ಯಾನ, ಅತ್ತಿನೂರ ವೆಂಕಟಸುಬ್ಬಯ್ಯ - ೧೮೯೩

೨೯. ? ಮನುಸ್ಮೃತಿ ಟೀಕು, ಭಾಗವತ ಕೃಷ್ಣಜೀಬಿಷ್ಣೊ - ೧೮೮೮

೩೦. ? ಪ್ರತಿಪದ ಟೀಕಾಸಹಿತ ಕನ್ನಡ ಸಂಧ್ಯಾವಂದನೆ, ಸೀತಾರಾಮಯ್ಯ - ೧೮೮೬

೩೧. ? ನಿಜದೀಪಿಕಾ ಶಿರೋರತ್ನ ಟೀಕು, ವೇದಾಂತ ರಾಘುವಾಚಾರ್ಯ - ೧೮೩೨

೩೨. ? ವೈದಿಕಾರ್ಚನ ಚಂದ್ರಿಕೆ ಟೀಕು, ದಕ್ಷಿಣಮೂರ್ತಿ ಶಾಸ್ತ್ರಿ - ೧೮೯೮

೩೩. ? ಶ್ರೀ ಭಾಗವತ ಪುರಾಣ ಟೀಕು, ರಾಮಶೇಷ ಶಾಸ್ತ್ರಿ -?

೩೪. ? ಕಾಶಿಮೃತಮೋಕ್ಷ ನಿರ್ಣಯಂ ಟೀಕು, ಸೀತಾರಾಮ ಶಾಸ್ತ್ರಿ - ೧೮೭೮

೩೫. ? ಕನ್ನಡ ಸಂಧ್ಯಾವಂದನೆ ಟೀಕು, ಸೀತಾರಾಮ ಶಾಸ್ತ್ರಿ - ೧೮೮೬

೩೬. ? ಕರ್ನಾಟ ಭೃತಹರಿ ಸುಭಾಷಿತ ಟೀಕು, ರಾಮಸ್ವಾಮಿ ಶಾಸ್ತ್ರಿ - ೧೮೮೪

೩೭. ? ಸುಭಾಷಿತ ಟೀಕು, ? - ?

೩೮. ? ಸುಭಾಷಿತ ಸಂಗ್ರಹ ಟೀಕು, ? - ?

೩೯. ? ಸುಭಾಷಿತ ಸುಧಾರತ್ನ ಟೀಕು, ? - ?

೪೦. ? ಶ್ರೀ ಭಾಗವತ ಪುರಾಣ ಟೀಕೆ, ? - ೧೯೧೨

೪೧. ? ಸಂಧಾನಾಧ್ಯಯನಾರ್ಥ ಟೀಕು, ? - ?

೪೨. ? ಗೀತಗೋವಿಂದ ಟೀಕು, ಕೃಷ್ಣದಾಸ - ?

೪೩. ? ಗೀತಗೋವಿಂದ ಟೀಕು, ಪೆರಿಸ್ವಾಮಿ ತಿರುಮಲಾಚಾರ್ಯ - ೧೮೭೧

೪೪. ? ಗೋಪಿಕಾಗೀತೆಯ ಟೀಕು, ಅಳಿಯ ಲಿಂಗರಾಜು - ?

೪೫. ? ವಿರಾಟ ಪರ್ವ ಟೀಕು, ಸಿ.ಸುಬ್ರಹ್ಮಣ್ಯಶಾಸ್ತ್ರಿ - ?

೪೬. ? ವೇದಾಂತ ವಿಚಾರ ಶ್ಲೋಕಗಳು ಟೀಕು, ವಾತಂಗ - ?

೪೭. ? ಯಜ್ಞವಲ್ಕ್ಯ ಧರ್ಮಶಾಸ್ತ್ರ ಟೀಕು, ಮಹೇಂದ್ರ ಯತಿರಾಜ - ?

೪೮. ? ದ್ವಾದಶ ಮಂಜರಿಕಾ ಸ್ತೋತ್ರಂ ಟೀಕು, ಮ.ಕೃಷ್ಣಶಾಸ್ತ್ರಿ - ೧೯೦೨

೪೯. ? ವಿವೇಕ ಚುಡಾಮಣಿ ಟೀಕು, ದೊಡ್ಡಬೆಲೆ ನಾರಾಯಣ ಶಾಸ್ತ್ರಿ - ೧೯೧೧

೫೦. ? ಸಟೀಕು ಜೀವನ್ಮುಕ್ತಿ ಗೀತಾ, ಶಿವಾನಂದ ಸುಬ್ರಹ್ಮಣ್ಯ - ೧೯೦೪

೫೧. ? ಭಗವದ್ಗೀತಾ ಟೀಕು, ಚಿಕ್ಕೋಪಾದ್ಯಾಯ - ?

೫೨. ? ಭಗವದ್ಗೀತಾ ಟೀಕು, ವೆಂಕಟಕೃಷ್ಣ - ?

೫೩. ? ಭಗವದ್ಗೀತಾ ಟೀಕು, ಅನುಪಮಾನಂದಯೋಗಿ - ?

೫೪. ? ಶ್ರೀ ಮದ್‌ಧ್ಯಾತ್ಮ ರಾಮಾಯಣ ಟೀಕು, ಪಟ್ಟಾಭಿರಾಮಶಾಸ್ತ್ರಿ ಮತ್ತು
ದಕ್ಷಿಣಮೂರ್ತಿ ಶಾಸ್ತ್ರಿ - ೧೮೮೭

೫೫. ? ಶ್ರೀಮದ್ಭಾಗವದ್ಗೀತಾ ಟೀಕು, ಚಿ.ಸುಬ್ಬರಾವ್ ಎಸ್ - ೧೯೧೬

೫೬. ? ಬಾಲಬೋಧನೆ ಟೀಕಾ ಸಹಿತ ಭಗವದ್ಗೀತಾ ? - ೧೯೧೩

೫೭. ? ನಿರಾಲಂಬೋಪನಿಸತ್ ಟೀಕು, ? - ೧೯೧೪

೫೮. ? ಪುರುಷ ಸೂಕ್ತಂ ಟೀಕು, ಚನ್ನವೀರ - ೧೯೦೯

೫೯. ? ಸಮಂತೋಪಖ್ಯಾನಂ ಟೀಕು, ಸುಬ್ರಹ್ಮಣ್ಯಶಾಸ್ತ್ರಿ - ೧೮೯೦

೬೦. ? ಕಾವೇರಿ ಮಹಾತ್ಮ ಟೀಕು, ಶ್ರೀನಿವಾಸದಾಸ - ?

೬೧. ? ಭಾಗವತ ಪುರಾಣ ಟೀಕು, ಶಿವಶಂಕರಶಾಸ್ತ್ರಿ ಸಿ. - ೧೮೯೩

೬೨. ? ಭಗವದ್ಗೀತಾತ್ಮ ಟೀಕು, ಅನುಪಮಾನಂದಯೋಗಿ - ?

೬೩. ? ಶ್ರೀಮತ್ಸವೇದ ಶೈಲಮಹಾತ್ಮಂ ಟೀಕು, ವೆಂಕಟಾಚಾರ್ಯ - ೧೯೦೭

೬೪. ? ಭಾರವಿಯ ಕೀರಾತಾರ್ಜುನೀಯ ಟೀಕು, ? - ?

೬೫. ? ಭಾವದಾರ್ಪಣ ಟೀಕು, ಕಮಲಪತಿ ವಿಠಲ - ೧೮೮೪

೬೬. ? ಗಜೇಂದ್ರಮೋಕ್ಷ ಟೀಕು, ಗರಣಿ ಕೃಷ್ಣಾಚಾರ್ಯ - ೧೮೫೧

೬೭. ? ಅದ್ಭುತ ರಾಮಾಯಣ ಟೀಕು, ಭಾಗವತ ಕೃಷ್ಣ - ೧೮೬೯

೬೮. ? ವೇದಾಂತ ಡಿಂಡಿಮ ವ್ಯಾಖ್ಯಾನ, ಮುಮ್ಮಡಿ ಕೃಷ್ಣರಾಜ - ೧೮೫೦

೬೯. ? ಅಖಂಡ ಕಾವೇರಿ ಮಹಾತ್ಮ ಟೀಕು, ಮುಮ್ಮಡಿ ಕೃಷ್ಣರಾಜ - ?

೭೦. ? ಭಾರತ ಟೀಕು, ಮುಮ್ಮಡಿ ಕೃಷ್ಣರಾಜ - ?

೭೧. ? ದೇವಿಸಾಯುಜ್ಞ ಟೀಕು, ಮುಮ್ಮಡಿ ಕೃಷ್ಣರಾಜ - ?

೭೨. ? ಗಯಚರಿತೆ ಟೀಕು, ಮುಮ್ಮಡಿ ಕೃಷ್ಣರಾಜ - ?

೭೩. ? ಚಾಮುಂಡಿ ಕಾಳಗ ಟೀಕು, ಮುಮ್ಮಡಿ ಕೃಷ್ಣರಾಜ - ?

೭೪. ? ಜಾತಕ ಸಾಮ್ರಾಜ್ಯ ಟೀಕು, ಮುಮ್ಮಡಿ ಕೃಷ್ಣರಾಜ - ?

೭೫. ? ಭಾರತ ಸಂಗ್ರಹ ಟೀಕು, ಮುಮ್ಮಡಿ ಕೃಷ್ಣರಾಜ - ?

೭೬. ? ರಾಮಾಯಣ ಟೀಕು, ಮುಮ್ಮಡಿ ಕೃಷ್ಣರಾಜ - ?

೭೭. ? ಸಂಖ್ಯಾರತ್ನ ಟೀಕು, ಮುಮ್ಮಡಿ ಕೃಷ್ಣರಾಜ - ?

೭೮. ? ನಿಜ ದೀಪಿಕಾರತ್ನ ಟೀಕು, ರಾಘುವಾಚಾರ್ಯ - ೧೮೫೧

೭೯. ? ದ್ವಾದಶ ಮಂಜರಿಕಾ ಸ್ತೋತ್ರ ಟೀಕು, ವೆಂಕಟೇಶ ಶಾಸ್ತ್ರಿ - ೧೮೫೧

೮೦. ? ಅನಂತ ಶತಕ ಟೀಕು, ಶ್ಯಾಮಾಚಾರ್ಯ - ೧೮೬೧

೮೧. ? ನಿತ್ಯಾನುಸಂಧಾನ ಟೀಕು, ಶ್ರೀನಿವಾಸಯ್ಯಂಗಾರ್ ಎಂ.ಡಿ - ೧೮೫೧

೮೨. ? ಭಾಗವತ ಟೀಕು, ಸುಬ್ರಹ್ಮಣ್ಯ ಶಾಸ್ತ್ರಿ - ?

೮೩. ? ಬ್ರಹ್ಮಜ್ಞಾತಕ ಟೀಕು, ಸುಬ್ರಹ್ಮಣ್ಯ ಶಾಸ್ತ್ರಿ - ?

೮೪. ? **ಸೂಕ್ತಿ ಮುಕ್ತಾವಳಿಯ** ಟೀಕು, ವಿಮಲಸೂರಿ - ?

೮೫. ? **ಸದ್ಬೋಧ ಚಂದ್ರೋದಯ** ಟೀಕು, ? - ?

೮೬. ? **ಜಾತಕ ಚಂದ್ರಿಕಾ** ಟೀಕು, ? - ?

**ಧಾರ್ಮಿಕೇತರ ಕೃತಿಗಳು**

**೧. ವ್ಯಾಕರಣ ಕೃತಿಗಳಿಗೆ ಬಂದಿರುವ ಟೀಕುಗಳು**

೦೧. ತೋಂಟದಾರ್ಯ ಶಬ್ದಮಂಜರಿ ಟೀಕು, ಕರಿಬಸವಶಾಸ್ತ್ರಿ ಎನ್. ಆರ್ - ೧೮೯೧

೦೨. ತೋಂಟದಾರ್ಯ ಶಬ್ದಮಂಜರಿ ಟೀಕು, ಮರ್ಲೆಗೌಡ - ೧೮೭೦

೦೩. ಲಿಂಗಮಂತ್ರಿಯ ಕಬ್ಬಿಗರ ಕೈಪಿಡಿ ಹೆಸರುಘಟ್ಟ ಹೊನ್ನಪ್ಪ - ೧೮೮೫

೦೪. ? **ಕರ್ನಾಟಕ ಶಬ್ದಮಂಜರಿ** ಟೀಕು, ಮುನೇಗೌಡ - ೧೮೭೦

೦೫. ? **ಸಟೀಕು ಕರ್ನಾಟಕ** ಶಬ್ದಮಂಜರಿ ಹೆಸರುಘಟ್ಟ ಹೊನ್ನಪ್ಪ - ೧೮೯೫

೦೬. ? **ಗೀರ್ವಾಣಿ ಭಾಷಾ** ಸಂಗ್ರಹ ಟೀಕು, ? - ೧೮೯೫

೦೭. ? **ನಾನಾರ್ಥ ಕಂದಪದ್ಯ** ಟೀಕು, ಹೆಸರುಘಟ್ಟ ಹೊನ್ನಪ್ಪ - ೧೮೮೪

೦೮. ? **ನಾನಾರ್ಥ ರತ್ನಾಕರ** ಟೀಕು, ತೋ.ರಾಯಣ್ಣ - ೧೮೮೯

೦೯. ? **ಪ್ರತಿಭಾಗ್ಯ ಕನ್ನಡ ವ್ಯಾಖ್ಯಾನ** ? - ೧೮೮೯

೧೦. ? **ಅಷ್ಟಾಂಗ ನಿಘಂಟು** ಟೀಕು, ತೋ.ರಾಯಣ್ಣ - ೧೮೮೮

೧೧. ? **ಕೃಷ್ಣಾರಾಜೇಂದ್ರ ವೃತ್ತ ರತ್ನಾವಳಿ** ಟೀಕು, ದೇವಲಾಪುರದ ನಂಜುಂಡ - ೧೮೮೧

೧೨. ? **ಅಭಿದಾನ ವಸ್ತುಕೋಶ** ಟೀಕು, ಪಟ್ಟದ ಸಿದ್ಧಲಿಂಗಸ್ವಾಮಿ - ೧೮೮೦

೧೩. ? **ಕಾವ್ಯಾವಲೋಕನ** ಟೀಕು, ಮಲ್ಲಪ್ಪ ಬಿ - ೧೮೮೦

**೨. ವೈದ್ಯಕೀಯ ಕೃತಿಗಳಿಗೆ ಬಂದಿರುವ ಟೀಕುಗಳು**

೦೧. ಮಾನಪ್ಪ ಪಂಡಿತನ ಸಟೀಕು, ಗರ್ಭದಾನಾದಿ ವಿದೇಯ, ನಂಜುಂಡಸ್ವಾಮಿ ಇತರರು - ೧೯೧೮

೦೨. ಶುಶ್ರುತ ಚಿಕಿತ್ಸಾಸಾರ ಕನ್ನಡ ಟೀಕು, ಹರಿರಾಮ ಶಾಸ್ತ್ರಿ ಗುಂಡಪಲ್ಲಿ - ೧೮೯೨

೦೩. ? **ತೋವಿನ್ನಲಾವ ಎಂಬ ಮಲೆಯಾಳ ವಿಷವೈದ್ಯಶಾಸ್ತ್ರವು ವಿಷಾಬ್ದಮಾರುತ** ಟೀಕು, ಗಣೇಶ ಶಾಂತಯ್ಯ ಕಾಲಬೈಲಕರ - ೧೮೯೫

೦೪. ? **ವೈದ್ಯತತ್ವ ನಿರ್ಣಯಸಾರ** (ಭಾಗ.೧) ಟೀಕು, ? - ೧೯೦೭

೦೫. ? **ವೈದ್ಯಚಿಂತಾಮಣಿ** ಟೀಕು, ? - ೧೮೯೭

೦೬. ? **ವೈದ್ಯಸಾರ ಸಂಗ್ರಹ** ಟೀಕು, ನರಸಿಂಹಶಾಸ್ತ್ರಿ ?

